


( ಸಚಿತ್ರ ಮಾಸ ಪುಸ್ತಕಾವಳಿ )

# ೧೬

ಸುಬೋಧ ಪ್ರಕಟನಾಲಯ,

ಬೆಂಗಳೂರು ನಗರ

# ವಿಷಯಾನುಕ್ರಮಣಿಕೆ

---

ಹೆಸರು



---

ಶ್ರೀರಾಮ ಸಹಾಯಂ

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸ ಪುಸ್ತಕಾವಳಿ)

---

**ಮುನ್ನುಡಿ:** —

ಭಗವದ್ಭಕ್ತರಾದ ಸಾಧುಗಳು ದುರ್ದೈವವಶರಾಗಿ ಕೆಲಕಾಲ ದುಷ್ಟರಬಲೆಗೆ ಬಿದ್ದು, ಅಗಾಧ ಕಷ್ಟ ಸಂಕಟಗಳನ್ನು ಅನುಭವಿಸುವರಾದರೂ ಕೊನೆಯಲ್ಲಿ ಭಕ್ತವತ್ಸಲನಾದ ಪರಮಾತ್ಮನು ತನ್ನ ಭಕ್ತರನ್ನು ಸಕಲವಿಧ ಆಪತ್ತುಗಳಿಂದಲೂ ತಪ್ಪಿಸಿ ಕಾಪಾಡುವನು, ಎಂಬುದು ಸಾಧುಶ್ರೇಷ್ಠನಾದ ಜಯದೇವ ಕವೀಶ್ವರನ ಜೀವಿತದಿಂದ ಚೆನ್ನಾಗಿ ವ್ಯಕ್ತವಾಗುತ್ತದೆ. ಧನಾಶಾಪರರಾದ ಚೋರರು ತನ್ನ ಕೈಕಾಲುಗಳನ್ನು ಕತ್ತರಿಸಿ ಹಾಳು ಭಾವಿಯಲ್ಲಿ ನೂಕಿದಾಗ ಮನಸ್ಸಿನಲ್ಲಾದರೂ ಅವರಿಗೆ ಕೆಡಕಾಗಲೆಂದು ಎಣಿಸದೆ, ತನ್ನ ಪ್ರಾರಬ್ಧ ಕರ್ಮಾನುಸಾರ ಪ್ರಾಪ್ತವಾದ ಸುಖದುಃಖಗಳನ್ನು ಅನುಭವಿಸಿದಲ್ಲದೆ ತೀರದೆಂದು ಸ್ವಸ್ಥಚಿತ್ತದಿಂದ ಭಗವದ್ಧ್ಯಾನ ಪರನಾಗಿ ಕಾಲಕಳೆದ ಆ ಮಹನೀಯನು ಭಗವನ್ನಿರ್ಭರನಾದ ಸಾಧು ಶ್ರೇಷ್ಠನಲ್ಲವೆ ? ಪತಿವ್ರತಾ ಶಿರೋಮಣಿಯಾದ ತನ್ನ ಪತ್ನಿಯು ರಾಜಭಾರ್ಯೆಯ ಮೂರ್ಖತೆಗೆ ತುತ್ತಾಗಿ, ಪ್ರಾಣತ್ಯಾಗ ಮಾಡಿದಾಗ ಯಾವ ಮಹನೀಯನು ಯಾರನ್ನೂ ದ್ವೇಷಿಸದೆ-ದೂಷಿಸದೆ ಪ್ರಾಪ್ತವಾಗುವ ಸಮಸ್ತ ಸಂಪದಾಪದಗಳಿಗೂ ಶ್ರೀಹರಿಯೇ ಕಾರಣಕರ್ತನೆಂದು ನಂಬಿ, ಆತನಿಗೇ ಮೊರೆಯಿಟ್ಟನೋ ಆತನು ಸಾಧು ಶಿರೋಮಣಿಯಲ್ಲವೆ ? ಮನುಷ್ಯರೆಂದರೆ ಲೋಕದಲ್ಲಿರುವವರೆಲ್ಲರೂ ಮನುಷ್ಯರೇ-ಆದರೂ, ಅವರಲ್ಲಿ ಸತ್ಪುರುಷರಾರೋ ಅವರೇ ಗಣನೀಯರು. ಆಂಧ್ರದೇಶದ ಯೋಗಿವರ್ಯ ವೇಮನನು:—

ಉಪ್ಪು ಕಪ್ಪುರಂಬು ನೊಕ್ಕ ಪೋಲಿಕನುಂಡು
ಚೂಡಚೂಡ ರುಚುಲ ಜಾಡವೇರು

ಪುರುಷಲಂದು ಪುಣ್ಯಪುರುಷುಲು ವೇರಯಾ
ವಿಶ್ವದಾಭಿ ರಾಮ ವಿನರ ವೇಮಾ.—ಎಂದಿರುವನು.

ಉಪ್ಪೂ ಕರ್ಪೂರವೂ ನೋಟಕ್ಕೆ ಒಂದೇ ಹೋಲಿಕೆಯಾಗಿ ತೋರಬಹುದು. ಆದರೆ ವಿಮರ್ಶಿಸಿ ನೋಡಿದರೆ ಮಾತ್ರವೇ ಪ್ರತಿಯೊಂದರ ಗುಣವೂ ವಾಸನೆಯೂ ಉಪಯೋಗವೂ ಬೇರೆ ಬೇರೆಯೆಂದು ಗೋಚರವಾಗುವುದು. ಹಾಗೆಯೇ ಲೋಕದಲ್ಲಿರುವವರೆಲ್ಲರೂ ಎರಡು ಕಾಲು ಎರಡು ಕಣ್ಣುಗಳುಳ್ಳ ಮನುಷ್ಯರೇ ಆದರೂ, ಅವರಲ್ಲಿ ಒಬ್ಬೊಬ್ಬರೂ ತಮ್ಮ ನಡೆ ನುಡಿ ಗುಣ ಯೋಚನೆ ಮುಂತಾದುವುಗಳನ್ನು ಅನುಸರಿಸಿ ಸಜ್ಜನರು ದುರ್ಜನರು, ಸಾಧುಗಳು ದುಷ್ಟರು, ಭಕ್ತರು ನಾಸ್ತಿಕರು, ಪರೋಪಕಾರಿಗಳು ಘಾತುಕರು ಎಂದು ಬೇರೆ ಬೇರೆಯಾಗುತ್ತಾರೆ. ಸಜ್ಜನರು ತಮ್ಮ ಸದ್ಗುಣ ಸನ್ನಡತೆಗಳಿಂದ ಜಗತ್ತಿನಲ್ಲಿ ಶಾಶ್ವತ ಕೀರ್ತಿಯನ್ನು ಗಳಿಸಿಕೊಂಡು ಸಕಲರ ಮನ್ನಣೆಗೂ ಪಾತ್ರರಾಗುವುದಲ್ಲದೆ ಸದ್ಗತಿಯನ್ನೂ ಸಾಧಿಸಿಕೊಳ್ಳುತ್ತಾರೆ. ದುರ್ಜನರಾದರೋ ತಮ್ಮ ಕ್ಷುದ್ರ ಸ್ವಭಾವಗಳ ಫಲವಾಗಿ ಅಗಾಧ ದುಷ್ಕಾರ್ಯಗಳನ್ನು ಮಾಡಿ, ಸಕಲರ ನಿಂದೆಗೂ ಗುರಿಯಾಗಿ ಅಪಮಾನ ಹೊಂದುವರಲ್ಲದೆ ತಾವೇ ಗಳಿಸಿಟ್ಟುಕೊಂಡ ದುರ್ಗತಿಯನ್ನು ಅನುಸರಿಸಿ ಅಂಧಕೂಪದಲ್ಲಿ ಬಿದ್ದು ನರಳುವರು.

ಆದುದರಿಂದ ಸ್ವಹಿತವನ್ನೂ ಮತ್ತು ಲೋಕಹಿತವನ್ನೂ ಬಯಸುವ ಪ್ರತಿಯೊಬ್ಬನೂ ಸಾಧುಸಜ್ಜನರ ಚರಿತ್ರೆಯನ್ನು ಕೀರ್ತಿಸಿ, ಅವರ ಸದ್ಗುಣಗಳೆಂಬ ದಿವ್ಯ ಜ್ಯೋತಿಯನ್ನು ಎತ್ತಿ ಹಿಡಿದು, ಆ ಬೆಳಕಿನಲ್ಲಿ ಜಗತ್ತಿನ ಅಜ್ಞಾನವೆಂಬ ಅಂಧಕಾರದಲ್ಲಿ ಕೊಚ್ಚಿ ಹೋಗುತ್ತಿರುವ ಮಾನವವರ್ಗವು ತನ್ನ ಜೀವಿತದ ಮಾರ್ಗವನ್ನು ಕಂಡುಕೊಳ್ಳಲು ಅವಕಾಶವನ್ನು ಕಲ್ಪಿಸಬೇಕು. ಸಜ್ಜನರು ಪ್ರಾರಬ್ಧಕರ್ಮ ವಶರಾಗಿ ದುಷ್ಟರ ಬಲೆಗೆ ಬಿದ್ದು ಕಷ್ಟ ಸಂಕಟಗಳನ್ನು ಅನುಭವಿಸುವಾಗ, ನಡೆವ ಅವರ ನಡತೆಯು ಲೋಕಕ್ಕೆ ಅಮೌಲ್ಯ ಉದಾಹರಣೆಯಾಗಿರುವುದು. ಸಹಜ ಸ್ಥಿತಿಯಲ್ಲಿ ಎಲ್ಲರ ನಡೆ ನುಡಿಗಳೂ ಹೆಚ್ಚು ಕಡಿಮೆ ಒಂದೇ ರೀತಿಯಾಗಿರಬಹುದು. ಆದರೆ ಕಷ್ಟಕಾಲದಲ್ಲಿ ಪ್ರಾಪ್ತವಾ[illegible] ಸಜ್ಜನರು ಮಾತ್ರವೇ ತಮ್ಮ ಸತ್ವವ

ನ್ನೂ ಧರ್ಮನಿಷ್ಠೆಯನ್ನೂ ನ್ಯಾಯಮಾರ್ಗ ತತ್ಪರತೆಯನ್ನೂ ಕಾಯ್ದುಕೊಳ್ಳಲು ಶಕ್ತರಾಗುವರು. ಇಂತಹ ಉದಾಹರಣೆಗಳು ದೊರಕದಿದ್ದರೆ ನಮ್ಮಂತಹ ಕ್ಷುದ್ರ ಚೇತಸ್ಕರು ಅಲ್ಪ ಸ್ವಲ್ಪ ಕಷ್ಟ ನಷ್ಟಗಳಿಗೆಲ್ಲ ಅಂಜಿ ನ್ಯಾಯಮಾರ್ಗಾನುಸರಣೆಯನ್ನು ಬಿಟ್ಟು ಭೋಗಾಭಿಲಾಷೆಗೆ ಒಳಗಾಗಿ, ದುಷ್ಪಥವನ್ನು ಅವಲಂಬಿಸುವುದು ಸಂಭವನೀಯವು! ಆದುದರಿಂದ ಮಹನೀಯರ ಚರಿತ್ರೆಗಳ ಅಮೌಲ್ಯೋದಾಹರಣೆಗಳು, ಸಾಮಾನ್ಯರಿಗೆ ಜೀವನ ಪಥದಲ್ಲಿ ಮಾರ್ಗದರ್ಶಕಗಳಾಗಿರಲು ಅತ್ಯುಪಯುಕ್ತ ಸಾಧನವಾಗಿವೆ.

ಈ ಮಹೋದ್ದೇಶದಿಂದ ಪ್ರೇರಿತವಾಗಿಯೇ 'ಸುಬೋಧ ಕುಸುಮಾಂಜಲಿ ಗ್ರಂಥಮಾಲೆ'ಯು ಮಹನೀಯರ ಜೀವಿತ ಚರಿತ್ರೆಗಳನ್ನು ಕರ್ಣಾಟಕ ಪ್ರಪಂಚಕ್ಕೆ ಒದಗಿಸುವಲ್ಲಿ ಯಥಾಶಕ್ತಿ ಶ್ರಮಿಸುತ್ತಿದೆ. ಕರ್ಣಾಟಕ ಭಾಷಾಭಿಮಾನಿಗಳು, ನಿರಂತರವಾಗಿ ಸಾಗಬೇಕಾದ-ಬಹು ದ್ರವ್ಯವ್ಯಯ ಸಾಧ್ಯವಾದ ಈ ಕೆಲಸದಲ್ಲಿ, ಆಗಾಗ್ಗೆ ಒದಗುವ ಕಾಲತಾಮಸಾದಿ ಅಲ್ಪ ಸ್ವಲ್ಪ ಲೋಪಗಳ ವಿಷಯದಲ್ಲಿ ಬೇಸರಗೊಳ್ಳದೆ, ಉದಾರಭಾವವನ್ನು ವಹಿಸಿ,-ನಮ್ಮ ಭಾಷಾಸೇವಾ ಉದ್ಯಮಕ್ಕೆ ಸ್ವಹಸ್ತ ಪರಹಸ್ತ ಸಾಧ್ಯವಿರುವ ಸಹಾಯಗಳನ್ನು ಒದಗಿಸಿ, ಪುಣ್ಯಭಾಗಿಗಳಾಗಲೆಂದು ಪ್ರಾರ್ಥಿಸುತ್ತೇವೆ.

ಬೆಂಗಳೂರು ನಗರ
ತಾ|| ೧೨-೯-೧೯೩೦

ಇತಿ ಸುಜನ ವಿಧೇಯ,
**ಯಂ. ರಾಮರಾವ್.**



ಸುಬೋಧ ಮುದ್ರಣಾಲಯ, ಬೆಂಗಳೂರು ನಗರ—೩,೦೦೦ ಪ್ರತಿಗಳು.

'ಜಾತಸ್ಯಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯಚ'

'ಜನಿಸಿದವಗೆ ಮೃತ್ಯುಸಿದ್ಧವೋ ಇದು ಬದ್ಧವೋ
ಧ್ರುವ ಮೃತಗೆ ಜನನವೋ'

ಶ್ಲೋ|| ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಳೇಬರಂ
ತಂ ತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ

'ಎಲೈ ಕುಂತೀಪುತ್ರನೇ, ಯಾವ ವಸ್ತುವನ್ನೇ ಯಾವಾಗಲೂ ಚಿಂತಿಸುತ್ತಾ, ಅಂತ್ಯಕಾಲದಲ್ಲಿ ಯಾವ ಯಾವ ಸ್ವರೂಪವನ್ನು ದೃಢವಾಗಿ ಸ್ಮರಿಸುತ್ತಾ (ಪ್ರಾಣಿಯು) ದೇಹವನ್ನು ಬಿಡುವನೋ, ಆಯಾ ಸ್ಥಿತಿಯನ್ನೇ ಹೊಂದುವನು.'

ಶ್ಲೋ|| ಅಂತಕಾಲೇ ಚ ಮಾಮೇವ ಸ್ಮರನ್ ಮುಕ್ತ್ವಾ ಕಳೇಬರಂ
ಯಃಪ್ರಯಾತಿ ಸಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ

"ಯಾವನು ಮರಣಕಾಲದಲ್ಲಿಯೂ ನನ್ನನ್ನೇ ಸ್ಮರಿಸುತ್ತಾ, ಶರೀರವನ್ನು ಬಿಡುವನೋ, ಅತನು ನನ್ನ ಭಾವವನ್ನೇ ಹೊಂದುವನು. ಈ ವಿಷಯದಲ್ಲಿ ಸಂದೇಹವಿಲ್ಲ."

'ಶ್ರೀ ಭಗವದ್ಗೀತಾ'






ಸಾಧುವರ್ಯ:—**ಜಯದೇವಕವಿ.** [ಪುಟ ೩೫.

ಶ್ರೀರಾಮ ಸಹಾಯಂ

ಸಾಧು ವರ್ಯ

# ಜಯದೇವ ಕವಿ

---

**ಅಧ್ಯಾಯ ೧** **"ಸಂತತಿ ಸಾವಿರವಾಗಲಿ"**

ಜಗತ್ತಿನಲ್ಲಿ ನಮ್ಮ ಮಾತೃಭೂಮಿಯಾದ ಭಾರತದೇಶವೊಂದು ಮಾತ್ರವೇ,-ಮಾನವನ ಇಹಲೋಕದ ಬಾಳ್ವೆಯು ಜನ್ಮ ಜನ್ಮಾಂತರಾರ್ಜಿತವಾದ ಅವನ ಕರ್ಮವನ್ನು ಅನುಸರಿಸಿ ಸಾಗುವುದೆಂಬ ಸಿದ್ಧಾಂತವನ್ನು ಕಂಡು ಹಿಡಿದು ಲೋಕಕ್ಕೆ ಸಾರಿರುವುದು. ಕೇವಲ ಮನುಷ್ಯನೊಬ್ಬನ ಬಾಳ್ವೆ ಮಾತ್ರವಲ್ಲ-ಪಶು ಪಕ್ಷಿ ಕ್ರಿಮಿಕೀಟ ವೃಕ್ಷಲತಾದಿ ಚೇತನಾತ್ಮಕವಾದ ಸಮಸ್ತ ಪ್ರಾಣಿಕೋಟಿಯೂ ತನ್ನ ಇಂದಿನ ಸ್ಥಿತಿಗೆ ಕಾರಣವಾದ ಯಾವುದೋ ಒಂದು ಪೂರ್ವದ ಕಾರಣವನ್ನು ಅನುಸರಿಸಿಯೇ ಏರ್ಪಟ್ಟಿದೆಯಲ್ಲದೆ, ಕೇವಲ ಶೂನ್ಯಸ್ಥಿತಿಯಿಂದ ಈಗಿನ ತನ್ನ ಪ್ರಬುದ್ಧ ಸ್ಥಿತಿಯನ್ನು ಒಮ್ಮೆಗೇ ಹೊಂದಿರಲಾರದು. ಎಪ್ಪತ್ತೆರಡು ಅಂಗುಲ ಎತ್ತರಕ್ಕೆ ಬೆಳೆದು ಭವ್ಯಾಕೃತಿಯಿಂದ ಕಂಡುಬರುತ್ತಿರುವ ಒಬ್ಬ ಮನುಷ್ಯನನ್ನು ಇಂದು ನೋಡುತ್ತೇವೆ ಎಂಬೋಣ! ಆತನ ಇಂದಿನ ಸ್ಥಿತಿಯು ಏಕಾಏಕಿ ಉಂಟಾದುದೆಂದು ಹೇಳಲು ಸಾಧ್ಯವಿಲ್ಲವಷ್ಟೆ! ಅದಕ್ಕೆ ಸಂಪೂರ್ಣ ಆರೋಗ್ಯ ಪದ್ಧತಿಯನ್ನನುಸರಿಸಿ ಬೆಳೆದು ಬಂದ ಆತನ ಯೌವನವು ಕಾರಣವಾಗಿರುವುದು. ಆ ಯೌವನಕ್ಕೆ ಬಾಲ್ಯವು ಕಾರಣವಾಗಿರುವುದು. ಬಾಲ್ಯಕ್ಕೆ ಶೈಶವವು ಕಾರಣವಾಗಿರುವುದು. ಶೈಶವಕ್ಕೆ ಮಾತೃಗರ್ಭದಿಂದ ಜನನವೂ ಅದಕ್ಕೆ

ಗರ್ಭ ಪಿಂಡವೂ ಕಾರಣವಾಗಿರುವುವು. ಗರ್ಭ ಪಿಂಡಕ್ಕೆ ಕಾರಣವೂ ಒಂದಿರಬೇಕಲ್ಲವೆ? ಅದಕ್ಕೆ ಸ್ತ್ರೀಪುರುಷರ ಸಮ್ಮಿಳನವು ಕಾರಣವೆಂಬುದೊಂದು ದೃಶ್ಯಕಾರಣವಾಯಿತು. ಆದರೆ ಜನ್ಮಾವಧಿ ಏಕತ್ರ ಸಂಸಾರಮಾಡಿಕೊಂಡಿರುವ ದಂಪತಿಗಳಲ್ಲೂ ಸಂತಾನೋದಯವಾಗದಿರುವ ಉದಾಹರಣೆಯು ದೊರೆಯುತ್ತದಾದುದರಿಂದ, ಕೇವಲ ಸ್ತ್ರೀ ಪುರುಷರ ಸಮ್ಮಿಳನ ಮಾತ್ರವೇ ಗರ್ಭಕ್ಕೆ ಕಾರಣವೆಂದು ಹೇಳಲು ಸಾಧ್ಯವಿಲ್ಲ! ಪ್ರತ್ಯಕ್ಷ ಪ್ರಮಾಣವನ್ನು ಮಾತ್ರ ಒಪ್ಪುವ ಆಧುನಿಕ ತತ್ವಶಾಸ್ತ್ರಜ್ಞರು, ಇದಕ್ಕೂ ಮುಂದೆ ಹೋಗಿ ವಿಚಾರ ನಡೆಸಲು ಸಮ್ಮತಿಸರು. ಸಮ್ಮತಿ ಅಸಮ್ಮತಿಗಳ ಮಾತಲ್ಲ; ಪ್ರತ್ಯಕ್ಷ ಪ್ರಮಾಣದ ಗತಿಯು ಅಲ್ಲಿಗೇ ಕುಂಠಿತವಾಗಿ ನಿಂತುಬಿಡುತ್ತದೆ. ಅದರ ಹಿಂದಿನ ಸ್ಥಿತಿಯೇನು? ಅದಕ್ಕೂ ಹಿಂದಿನ ಸ್ಥಿತಿಯೊಂದು ಉಂಟೇ? ಎಂಬುದರ ವಿಚಾರವು ಪ್ರತ್ಯಕ್ಷ ಪ್ರಮಾಣದಿಂದ ಸಿದ್ಧವಾಗಲು ಸಾಧ್ಯವಿಲ್ಲದ ಮಾತು!

ಆದರೆ ಅದಕ್ಕೂ ಕಾರಣವಿಲ್ಲವೆಂದು ಹೇಳಲಾಗದು.- ಭೂಮಿಗೆ ಮೇಲ್ಭಾಗದಲ್ಲಿ ನೂರಾರು ಅಡಿಗಳ ಎತ್ತರಕ್ಕೆ ಬೆಳೆದು ನಿಂತಿರುವ ಒಂದು ವೃಕ್ಷಕ್ಕೆ ಊರೆಗೋಲು ಮುಂತಾದ ಯಾವ ಆಧಾರವಾಗಲೀ, ಅದು ಹಾಗೆ ನಿಂತಿರಲು ಯಾವ ಕಾರಣವಾಗಲೀ ಇರುವಂತೆ ನಮ್ಮ ದೃಷ್ಟಿಗೆ ಗೋಚರವಾಗದಿದ್ದರೂ, ಭೂಮ್ಯಂತರ್ಭಾಗದಲ್ಲಿ ಅಗಾಧವಾಗಿ ವ್ಯಾಪಿಸಿಕೊಂಡು ಹೋಗಿರುವ ಬೇರಿನ ಆಧಾರವಿಲ್ಲದೆ ಅದು ದೃಢವಾಗಿ ನಿಂತಿದೆಯೆಂದು ಹೇಳಲಾದೀತೆ? ಹಾಗೆಯೇ, ಲೋಕದಲ್ಲಿ ಈಗ ನಮ್ಮ ಕಣ್ಣೆದುರಿಗೆ, ಕೈಗಳಾಗಲೀ, ಕಾಲುಗಳಾಗಲೀ-ಕಣ್ಣು ಮೂಗುಗಳಾಗಲೀ ಇಲ್ಲದೆ, ವಿಕಾರಸ್ವರೂಪಿಯಾಗಿ, ಅಥವ ದೀರ್ಘವ್ಯಾಧಿಗ್ರಸ್ತನಾಗಿ, ಮೇಲಕ್ಕೇಳಲು ಅಶಕ್ತನಾಗಿ, ಅಗಾಧ ಸಂಕಟಕ್ಕೆ ಗುರಿಯಾಗಿ ನರಳುತ್ತಾ ಬಿದ್ದಿರುವ ಒಬ್ಬ ಮಾನವ ಪ್ರಾಣಿಗೆ, ಆ ಸ್ಥಿತಿಯೂ-ಮತ್ತೊಬ್ಬ ಮನುಷ್ಯನು ಸರ್ವಾಂಗ ಸಂಪೂರ್ಣತೆಯಿಂದ ಸುಂದರವಾದ ಪುಷ್ಟದೇಹದಿಂದ, ದಿವ್ಯವಸ್ತ್ರ ವಿಭೂಷಿತನಾಗಿ ಸಹಸ್ರಾರು ಮಂದಿಯಿಂದ ಓಲಗಿಸಲ್ಪಡುತ್ತ-ಗೌರವಿಸಲ್ಪಡುತ್ತ ಸುಖಶರಧಿಯಲ್ಲಿ ಓಲಾಡುತ್ತಾ ಇದ್ದರೆ, ಅವನಿಗೆ ಆ ಸ್ಥಿತಿಯೂ-ಉಂಟಾಗಲು ಕಾರಣವೇನು? ಒಂದು ದೃಷ್ಟಿಯಿಂದ ಅವರ ಸ್ಥಿತಿಗತಿಗಳಿಗೆ ಅವನ - ಇವನ

ತಂದೆತಾಯಿಗಳ ಸ್ಥಿತಿಗತಿಗಳು ಕಾರಣವೆನ್ನಬಹುದು. ಅದು ಕೇವಲ ಐಶ್ವರ್ಯ ಬಡತನಗಳ ವಿಚಾರದಿಂದ ಒಂದುವೇಳೆ ಒಪ್ಪಲು ಸಾಧ್ಯವಿದ್ದೀತು ? ಆದರೆ ಇಲ್ಲಿ ವಿಚಾರಕ್ಕಿರುವುದು ಐಶ್ವರ್ಯ ದಾರಿದ್ರ್ಯಗಳ ಪ್ರಶ್ನೆಯಲ್ಲ. ಆ ಮಾನವ ಪ್ರಾಣಿಯ ಅಂಗವಿಹೀನತೆ, ರೋಗಬಾಧೆ, ಅಸಹನೀಯ ಮನೋವ್ಯಥೆ, ಇಷ್ಟು ವಿಶಾಲವಾದ ಪ್ರಪಂಚದಲ್ಲಿ ನೀನೇ ಎಂದು ವಿಚಾರಿಸುವವರಿಲ್ಲದ ಅಗಾಧ ದುರ್ದೆಸೆ, ಇವೆಲ್ಲವುಗಳೊಂದಿಗೆ ಹೊಟ್ಟೆತುಂಬುವಷ್ಟು ಗಂಜಿಯಾದರೂ ದೊರಕದ ಕೇವಲ ಪರಿತಾಪಕರವಾದ ಕ್ಷುದ್ರದಾರಿದ್ರ್ಯ! ಈ ಸ್ಥಿತಿಗೂ, ಮೇಲೆಹೇಳಿದಂತೆ ಸುಖ ಸಂತೋಷಗಳಲ್ಲಿ ಓಲಾಡುತ್ತ ಆನೆಯಮೇಲೆ ಅಂಬಾರಿಯಲ್ಲಿ ಕುಳಿತು ಸಹಸ್ರಾರು ಜನಗಳ ಮುಗಿದ ಕೈಗಳಿಂದ ಗೌರವಪಡೆಯುತ್ತ ಮೆರೆವಣಿಗೆಯಾಗಿ ಹೋಗುತ್ತಿರುವ ಮತ್ತೊಬ್ಬ ಮನುಷ್ಯಪ್ರಾಣಿಯ ಜೀವನ ಸ್ಥಿತಿಗೂ ಕಾರಣಗಳು ಇರಬೇಡವೇ ? ಅವರವರ ಅಗಾಧ ಜೀವನ ವೃಕ್ಷಗಳು ಬೇರುಗಳಿಲ್ಲದೆ ಕೇವಲ ನಿರಾಧಾರವಾಗಿ ನಿಂತುಬಿಟ್ಟಿವೆಯೇ ? ಹಾಗೆ ಎಣಿಸುವುದಾದರೆ ಅದು ಕೇವಲ ವಿಚಾರಶೂನ್ಯ ಭಾವನೆಯೆಂದೆನಿಸಿಕೊಳ್ಳಲಾರದೇ ?

ನಡೆಯುವ ಮನುಷ್ಯನಿಗೆ ಮುಂದಿಡುವ ಒಂದು ಹೆಜ್ಜೆಗೆ, ಹಿಂದಿಟ್ಟ ಒಂದು ಹೆಜ್ಜೆಯು ಹೇಗೆ ಆಧಾರವಾಗಿರುವುದೋ, ಹಾಗೆಯೇ ಇಂದು ನಡೆಯುತ್ತಿರುವ ಒಂದು ಜೀವಿತಕ್ಕೆ ಹಿಂದೆ ನಡೆದ ಒಂದು ಜೀವಿತವು ಆಧಾರವಾಗಿರುವುದು; ಅಂತೆಯೇ ಮುಂದಿನ ಜೀವಿತಕ್ಕೆ ಇಂದು ನಡೆವ ಜೀವಿತವೂ ಕಾರಣವಾಗಿ ಏರ್ಪಡುವುದು.—“ಹಲವು ವರ್ಷಕಾಲ ಭೂಮಿಯಲ್ಲಿದ್ದು ಸಾಗಬೇಕಾದ ಜೀವಿತಕ್ಕೆ ಆವಶ್ಯಕವಾದಷ್ಟು ವಸ್ತು ಸಾಮಗ್ರಿಯನ್ನು ಮರಣಕಾಲದಲ್ಲಿ ದೇಹವನ್ನು ಬಿಟ್ಟು ಅದೃಶ್ಯನಾಗಿ ಹೊರಟುಹೋಗುವ ಚೇತನನು ಹೇಗೆ ಹೊತ್ತುಕೊಂಡೊಯ್ಯುವನು ? ಹಾಗೆ ಕೊಂಡೊಯ್ಯದಿರುವಾಗ ಈ ಜನ್ಮದಲ್ಲಿದ್ದ ಸ್ಥಿತಿಗತಿಗಳು ಮುಂದಿನ ಜನ್ಮಕ್ಕೆ ಹೇಗೆ ಅನುಸರಿಸಿ ಬರುವುವು! ಇವೆಲ್ಲವೂ ಶುದ್ಧ ಭ್ರಮೆಯಲ್ಲದೆ ಮತ್ತೇನೂ ಅಲ್ಲ” ಎಂದು ಈ ವಿಚಾರವನ್ನು ಕುರಿತು ದೀರ್ಘವಾಗಿ ವಿಚಾರಮಾಡಲಾರದವರು ಆಕ್ಷೇಪಿಸಬಹುದು. ಆ ಆಕ್ಷೇಪಣೆಗಾಗಿ ಬೇಸರಗೊಳ್ಳಲಾಗದು. ಅದಕ್ಕೆ ಸಮಾಧಾನವನ್ನು ಹೇಳಲಾಸಿಸುತ್ತೇವೆ. ನೂರಾರು ವರ್ಷಗಳವರೆಗೆ

ಬೆಳೆದು ಸಹಸ್ರಾರು ಮಂದಿ ನಿಲ್ಲಲು ಸಾಕಾಗುವಷ್ಟು ವಿಸ್ತಾರವಾಗಿ ಬೆಳೆದ ಒಂದು ಆಲದ ಅಥವ ಅರಳಿಯ ಮರವನ್ನು ನೋಡಿರಿ. ಅದು ಗಸಗಸೆಯಷ್ಟು ಆಕಾರದ ಒಂದು ಬೀಜದಿಂದ ಉಂಟಾದ ಮರವೆಂಬುದಕ್ಕೆ ಯಾರಿಗಾದರೂ ಸಂದೇಹವುಂಟೆ ? ಆಷ್ಟು ದೊಡ್ಡವೃಕ್ಷದ ವಿಸ್ತಾರವಾದ ಶಾಖೆಗಳೂ ನೂರಾರು ರೆಂಬೆಗಳೂ, ಅಸಂಖ್ಯ ಎಲೆ ಹೂ ಕಾಯಿಗಳೂ, ಕ್ರಮಕ್ರಮವಾಗಿ ಆ ಬೀಜವನ್ನು ಅನುಸರಿಸಿ ಬೆಳೆದು ಬಂದುವೇ ಎಂಬುದನ್ನು ಯಾರು ಒಪ್ಪರು ? ಆದರೆ ಇಷ್ಟು ವಸ್ತುಗಳೂ ಆ ಬೀಜದಲ್ಲಿದ್ದುವೆ? ಅಷ್ಟೇ ಅಲ್ಲ, ಆ ಬೀಜವೆಂಬುದು ನಮಗೆ ದೃಷ್ಟಿಗೋಚರವಾಗುವಂತೆ ಅಷ್ಟು ದಪ್ಪವಾಗಿದ್ದರೂ, ಅದರಲ್ಲಿ ನಿಶ್ಚಯವಾಗಿ ಮೊಳಕೆಯಾಗಲು (Germination) ಆವಶ್ಯಕವಾದ ಬೀಜದ ಜೀವ ಜೀವಾಳದ ಭಾಗವೆಷ್ಟು ತುಂಬಿದೆ ? ಆ ಜೀವಜೀವಾಳದಲ್ಲಿ ಈ ದೊಡ್ಡ ವೃಕ್ಷವನ್ನು ಹುಟ್ಟಿಸಲು ಸಾಧಕವಾದ ವಸ್ತುಸಾಮಗ್ರಿ ಎಷ್ಟು ಸೇರಿದೆ ? ಈ ದೃಶ್ಯವಿಚಾರವನ್ನೇ ಕುರಿತು ವಿಮರ್ಶಿಸುತ್ತಾ ಹೋದರೆ, ಈ ಒಂದು ಸಣ್ಣ ಸಂಗತಿಯು ಸಹ ನಂಬಲರ್ಹವೇ ಎಂದು ತೋರುವುದಲ್ಲವೆ? ಆದರೆ ಅದೇ ಯಥಾರ್ಥವಾದ ಸಂಗತಿ ! ಅದರಲ್ಲಿ ಅಗಾಧವಾದ ವಸ್ತುಸಾಮಗ್ರಿಗಳೆಲ್ಲವೂ ತುಂಬಿಲ್ಲವೆಂಬುದು ನಿಜ. ಆದರೆ ಅದರಲ್ಲೇ ಆ ವೃಕ್ಷದ ಆದ್ಯಂತಜೀವಿತಕ್ಕೆ ಆಧಾರಭೂತವಾದ ಕಾರಣ ಸಾಮಗ್ರಿಯು ತುಂಬಿದೆ ಎಂಬುದು ಮಾತ್ರ ಸುಳ್ಳಲ್ಲ!

ಅದು ಹೇಗೆಂಬಿರಾ ! ಅದರಲ್ಲಿರುವುದು ಭೌತಿಕ ವಸ್ತುತತ್ವವಲ್ಲ. ಅದರಲ್ಲಿ ತುಂಬಿರುವುದೆಂಬುದು, ಸರ್ವಜ್ಞಚೈತನ್ಯಸ್ವರೂಪವಾದ ಬ್ರಹ್ಮಭಾವನೆ. ಆಲದ ಮರ, ಅರಳಿಯ ಮರ, ಹಲಸಿನ ಮರ, ಮಾವಿನ ಮರ, ಬೇವಿನ ಮರ ಎಂಬ ವಿವಿಧ ಗುಣಸ್ವಭಾವಗಳಿಗೆ ಆಕರವಾದ ಆ ಬ್ರಹ್ಮಭಾವನೆಯು ಆ ಬೀಜದಲ್ಲಿ ಅಣುಸ್ವರೂಪಿಯಾಗಿರುವ ಆ ಜೀವವನ್ನು ಆಶ್ರಯಿಸಿ ನೆಲೆಗೊಂಡಿರುವುದು. ಅದನ್ನು ಆವರಿಸಿಕೊಂಡು ಬೀಜದಲ್ಲಿರುವ ಪಿಷ್ಟಪದಾರ್ಥವೂ ಮತ್ತು ಸಿಪ್ಪೆಯೂ, ಅದು ಮೊಳಕೆಯಾಗಿ ಭೂಮಿಯಿಂದ ಆಹಾರ ತೆಗೆದುಕೊಳ್ಳಲು ಶಕ್ತವಾಗುವವರೆಗೆ ಸಸಿಯನ್ನು ರಕ್ಷಿಸಲು ಸಾಕಾದಷ್ಟು ಪ್ರಮಾಣದಲ್ಲಿ ಮಾತ್ರ ಒದಗಿಸಲ್ಪಟ್ಟಿರುವುವು. ಆ ಪಿಷ್ಟಪದಾರ್ಥವು ಕೊಳೆಯದೆ ಹುಳಿಯದೆ ಬಲಗೊಂಡು ಇರುವುದಾದರೆ, ಪುಷ್ಟವಾದ ಆ ಕಾಳಿನಲ್ಲಿ

ಅಡಗಿರುವ ಮೇಲ್ಕಂಡ ಬೀಜವು ಪ್ರಕೃತಿ ಸಂಸರ್ಗದಿಂದ ಮೊಳಕೆಯಾಗಿ, ಅದರಲ್ಲಿ ಐಕ್ಯವಾಗಿರುವ ಅಣುಸ್ವರೂಪಿಯಾದ ಜೀವಾತ್ಮದ ಗುಣಸ್ವರೂಪವನ್ನು ಅನುಸರಿಸಿದ ಸಸಿಯಾಗಿ ಬೆಳೆಯಲಾರಂಭವಾಗುವುದು. ನಂತರ ಅದಕ್ಕೆ ಭೂಮಿಯಿಂದ ಒದಗುವ ಆಹಾರ ಪಾನೀಯಗಳು ಅದನ್ನು ಕೊಂಬೆ ರೆಂಬೆ ಎಲೆ ಹೂವು ಹೀಚು ಕಾಯಿ ಹಣ್ಣು-ಪುನಃ ಬೀಜಗಳು ಮುಂತಾಗಿ ಆಗುವವರೆಗೆ ಪೋಷಿಸುವುವು. ಇದು ಸ್ಪಷ್ಟವಾಗಿದೆಯಲ್ಲವೆ? ಹಾಗೆಯೇ ಮನುಷ್ಯನ ಇಂದಿನ ಜೀವಿತಕ್ಕೆ ಕಾರಣವಾಗಿರುವುದೆಂಬುದು, ಜೀವಾತ್ಮನ ಜನ್ಮಾಂತರಾರ್ಜಿತವಾದ ಅನುಭವದ ಭಾವನೆಮಾತ್ರ. ಅವನು ಗತಜನ್ಮದಲ್ಲಿ ತನ್ನ ಗುಣಕ್ರಿಯೆಗಳನ್ನು ಅನುಸರಿಸಿ. ತಾನು ಘನವಂತನಾಗಬೇಕು, ಧನವಂತನಾಗಬೇಕು, ವಿದ್ಯಾವಂತನಾಗಬೇಕು, ರಾಷ್ಟ್ರಧುರೀಣನಾಗಬೇಕು, ಕವಿಯಾಗಬೇಕು, ಪರೋಪಕಾರಿಯಾಗಬೇಕು, ಕಲಾಕೋವಿದನಾಗಬೇಕು, ಯಂತ್ರನಿರ್ಮಾಪಕನಾಗಬೇಕು ಅಥವ ಅಂಥ-ಇಂಥ ಕಾರ್ಯಗಳಲ್ಲಿ ನಿಪುಣನಾಗಬೇಕು ಅಥವ ರಾಜ್ಯಾಧಿಪತಿಯಾಗಬೇಕು ಎಂದಾಗಲೀ, ಹಾಗಲ್ಲದೆ ತಾನು ವ್ಯಭಿಚಾರಿಯಾಗಬೇಕು, ಕಳ್ಳತನದಿಂದ ಧನವನ್ನು ಗಳಿಸಬೇಕು, ಪರರಿಗೆ ಮೋಸಮಾಡಿ ಭೂಮಿಯನ್ನೂ, ಕನಕ ಕಾಮಿನಿಯರನ್ನೂ ಗಳಿಸಿ ಅನುಭವಿಸಬೇಕು ಎಂದಾಗಲೀ ಸದಾ ಭಾವಿಸುತ್ತಾ ಇರುವನಾದರೆ, ಆ ಭಾವನೆಯೇ ಅವನ ಜೀವಿತ ತತ್ವವಾಗಿ ಉಳಿದು, ಮರಣ ಕಾಲದಲ್ಲಿ ಅಣುಮಾತ್ರವಾದ ಆ ಜೀವವನ್ನು ಅನುಸರಿಸಿಕೊಂಡು ಹೊರಡುವುದು. ಮೊಳಕೆಯಾಗುವ ಬೀಜದ ಭಾವವನ್ನು ಆವರಿಸಿರುವ ಪಿಷ್ಟಭಾಗವು ಹೇಗೆ ಅದು ಮೊಳಕೆಯಾಗುವವರೆಗೆ ಅದನ್ನು ಅಂಟಿದ್ದು ರಕ್ಷಿಸಬೇಕಾಗಿರುವುದೋ ಈ ಭಾವವೂ ಹಾಗೆಯೇ ಆ ಜೀವಾತ್ಮನಿಗೆ ತನ್ನ ಗುಣಸ್ವಭಾವಕ್ಕೆ ಯೋಗ್ಯವಾದ ಕ್ಷೇತ್ರವನ್ನು ಆಶ್ರಯಿಸಿ ಅಲ್ಲಿ ಜನ್ಮಗೊಂಡು ಬೆಳೆಯಲು ಕಾರಣವಾಗುವುದು.—ಆಲದಮರ ಅರಳಿಯಮರ ಎಂಬಿವುಗಳ ಗುಣಕರ್ಮಸ್ವಭಾವಕ್ಕೆ ಮೂಲಭೂತವಾದ ಬ್ರಹ್ಮಭಾವನೆಯನ್ನು ಮಾತ್ರವೇ ಅನುಸರಿಸಿ ಅಗಾಧವಾದ ಆಯಾ ಬೇರೆ ಬೇರೆ ವೃಕ್ಷಗಳು ಹೇಗೆ ಹುಟ್ಟಿ ಬೆಳೆಯುವುವೋ ಹಾಗೆಯೇ, -'ಕಳ್ಳತನದಿಂದ ನಾನು ಧನ ಸಂಗ್ರಹಣಮಾಡಬೇಕು' ಎಂಬ ಒಂದು ಭಾವನೆಯು ಬಲುಗೊಂಡಿದ್ದ ಚೇತನನು ತನ್ನೊಂದಿಗೆ ಯಾ

ವ ವಸ್ತು ಸಾಮಗ್ರಿಯನ್ನೂ ಹೊತ್ತು ತರಬೇಕಾದುದಿಲ್ಲ. ಆ ಕಳ್ಳತನಕ್ಕೆ ಆವಶ್ಯಕವಾದ ಸ್ನೇಹಿತರೂ, ಚಾತುರ್ಯ-ಚಟುವಟಿಕೆಗಳೂ, ನಡೆ ನುಡಿಗಳೂ, ಆಹಾರ ವಿಹಾರಗಳೂ, ಲಾಭನಷ್ಟಗಳೂ, ಸುಖ ದುಃಖಗಳೂ, ರಾಜದಂಡನೆಯೇ ಮುಂತಾದುವುಗಳೂ ಸರ್ವವೂ ಬರುವುವು. 'ನಾನು ರಾಜನಾಗಬೇಕು' ಎಂಬ ಭಾವನೆಯು ಬಲಗೊಂಡಿದ್ದ ಒಬ್ಬ ಚೇತನನು 'ನಾನು ಆನೆಯನ್ನೇರಬೇಕು, ಕುದುರೆಯನ್ನು ಹತ್ತಬೇಕು, ಪಾಲಕಿಯಲ್ಲಿ ಕುಳ್ಳಿರಬೇಕು, ಮೃಷ್ಟಾನ್ನ ಭೋಜನಮಾಡಬೇಕು' ಎಂದು ಬೇರೆ ಬೇರೆಯಾಗಿ ಅಪೇಕ್ಷಿಸಬೇಕಾದುದೇ ಇಲ್ಲ. ರಾಜನೆಂಬ ಪದವಿಯೊಂದನ್ನು ಅನುಸರಿಸಿ ಮಿಕ್ಕ ಸಕಲ ಸಮಾರಂಭಗಳೂ ಸೇರಿಬರುವುವು. ಹಾಗೆಯೇ 'ಪರೋಪಕಾರಮಾಡಬೇಕು' ಎಂಬ ದೃಢಭಾವದಿಂದ ತಪಿಸುತ್ತಿದ್ದವನಿಗೆ ಶಿಬಿ ದಧೀಚಿ ಮುಂತಾದವರಂತೆ ಪರೋಪಕಾರಮಾಡುವ ಸಕಲವಿಧ ಉತ್ಸಾಹ ಸಹಾಯ ಸಂಪತ್ತುಗಳೂ ಒದಗುತ್ತಾ ಹೋಗುವುವು. ಅಂತೆಯೇ ಸ್ವಲಾಭಕ್ಕಾಗಿ ಪರಕೀಯರ ಕಣ್ಣು ಕೀಳುವುದು, ಮೂಗು ಕೊಯ್ಯುವುದು, ಕೈಕಾಲುಗಳನ್ನು ಕತ್ತರಿಸುವುದು, ಕತ್ತು ಕಿವಿಚಿ ಕೊಲ್ಲುವುದು, ಬಾವಿಯಲ್ಲಿ ನೂಕಿ ಪ್ರಾಣಕಳೆಯುವುದು, ಕ್ಷುದ್ರ ಉಪದ್ರವಗಳಿಂದ ಸದಾ ವ್ಯಥೆಪಡಿಸುವುದು ಮುಂತಾದುವುಗಳಿಂದ ಪರಪೀಡನೆಯಲ್ಲೇ ಸದಾ ನಿರತನಾಗಿದ್ದರೆ, ಆ ಕೃತ್ಯಗಳಿಗೆ ಸಂಬಂಧಿಸಿದ ಭಾವನೆಗಳೇ ಮನಸ್ಸಿನಲ್ಲಿ ಸದಾ ನೆಲೆಸಿದ್ದು, ಜೀವಾತ್ಮನನ್ನು ಆವರಿಸಿಕೊಂಡಿರುವುವಾದುದರಿಂದ ಮರುಜನ್ಮದಲ್ಲಿ ಆಯಾ ಭಾವನೆಗಳನ್ನು ಅನುಸರಿಸಿ, ಆಯಾಯಾ ಅಂಗವಿಕಾರಗಳಿಂದಲೂ, ರೋಗಬಾಧೆಗಳಿಂದಲೂ, ಅನುಭವಿಸಲಸಾಧ್ಯವಾದ ದುಃಖ ಪರಂಪರೆಗಳಿಂದಲೂ ಸದಾ ಮರುಗಲು ಅರ್ಹವಾದ ಪಾಪಿ ಜನ್ಮಗಳೇ ಅವನಿಗೆ ಉಂಟಾಗುವುವು. ಕೇವಲ ಭಾವನೆ ಮಾತ್ರವೇ ಈ ಸಕಲ ವಸ್ತು ಸಾಮಾಗ್ರಿಗಳನ್ನೂ ಹೇಗೆ ಉಂಟುಮಾಡುವುದು-ಅದನ್ನನುಸರಿಸಿ ಸುಖದುಃಖಗಳು ಹೇಗುಂಟಾಗುವುವು, ಎಂಬ ವಿಷಯದಲ್ಲಿ ಕೆಲವರಿಗೆ ಸಂದೇಹವಿರಬಹುದು. ಅದಕ್ಕೆ ಒಂದು ಚಿಕ್ಕ ಉದಾಹರಣೆಯನ್ನು ಕೊಡಲೆಳೆಸುತ್ತೇವೆ. ನಾವು ಎಂದೂ ಕಾಣದಿದ್ದ ಒಬ್ಬ ಮನುಷ್ಯನು ಹಲವು ಪರಿವಾರ ಯುಕ್ತನಾಗಿ ಬಂದು ನಮ್ಮೂರಲ್ಲಿ ಠಾಣ್ಯಹಾಕುವನೆಂದು ಭಾವಿಸೋಣ! ಅವನ ಅನುಯಾಯಿಗಳು ಅವ

ನನ್ನು ರಾಜನೆಂದು ಸಂಬೋಧಿಸಿ-ಮರ್ಯಾದಿಸುವರು. ಒಡನೆ ನಾವೂ ನೂರಾರು ಜನರು ಒಂದಾಗಿ, ಆವನನ್ನು ಉಚಿತ ರೀತಿಯಿಂದ ಗೌರವಿಸ ಬೇಕೆಂದು ಸಭೆನಡೆಸಿ, ಧನವನ್ನು ಸಂಗ್ರಹಿಸಿ, ಚಪ್ಪರ ತೋರಣ ಮಂಟಪ ಗಳನ್ನು ಕಟ್ಟಿ, ಫಲ ಪುಷ್ಪ ತಾಂಬೂಲಗಳನ್ನು ಶೇಖರಿಸಿ, ಅವನ ಉಪಚಾರ ಕ್ಕಾಗಿ ಬಕ್ಷ್ಯ ಭೋಜ್ಯಗಳನ್ನು ಪಕ್ವಮಾಡಿಸಿ ಸಿದ್ಧಗೊಳಿಸುವೆವು ಓಲಗ ತಾಳ ಮೇಳಗಳೂ ಆತನನ್ನು ಹೊಗಳಿ ರಚಿಸಿದ ಅಗಾಧ ಕವಿತೆಗಳು, ಭಾಷ ಣಗಳು ಹೀಗೆ ಎಲ್ಲವೂ ಸಿದ್ಧವಾಗುವುವು. ಅಂತೆಯೇ ಅವನಿಗೆ ಸಕಲವಿಧ ರಾಜೋಪಚಾರಗಳೂ ನಡೆಯುವುವು. ಆದರೆ ಅಷ್ಟರಲ್ಲಿ ನಮಗೆ ಅತ್ಯಂತ ಆಪ್ತನಾದ ಅದೇ ಊರವನೊಬ್ಬನು ಬಂದು-'ಅಯ್ಯೋ ಅವನು ಕಳ್ಳರ ಗುಂಪಿನ ಯಜಮಾನನು. ಮೊನ್ನೆ ಆ ಊರಲ್ಲಿ ದರೋಡೆ ನಡೆಸಿದನು. ಇಂದು ಇಲ್ಲಿಗೆ ಬಂದಿದ್ದಾನೆ. ಈ ರಾತ್ರಿಯೋ ನಾಳೆಯೋ ನಮ್ಮೂರನ್ನೂ ದೋಚುವನು'' ಎಂದು ತಿಳಿಸುವನು. ಅಷ್ಟೆ! ಒಡನೆಯೇ ಅವನು ರಾಜ ನೆಂಬ ಭಾವನೆಯೂ, ಅವನ ಗೌರವಕ್ಕಾಗಿ ಏರ್ಪಡಿಸಿದ್ದ ಸಕಲ ಉಪಚಾರ ಗಳ ವ್ಯವಸ್ಥೆಯೂ ನಮ್ಮ ದೃಷ್ಟಿಪಥದಿಂದ ಮರೆಯಾಗಿ, ತಕ್ಷಣ-'ಅವನನ್ನೂ ಅವನ ಕಡೆಯವರನ್ನೂ ಹಿಡಿದು ಬಂಧಿಸಬೇಕು' ಎಂಬ ಪ್ರಯತ್ನವು ನಡೆ ಯುತ್ತಾಗುವುದು. ತರುವಾಯ ಹಗ್ಗ ಕೈಕೋಳ ಮುಂತಾದ ಬಂಧಕ ಸಾ ಮಗ್ರಿಗಳೆಲ್ಲವೂ ಸಂಗ್ರಹಿಸಲ್ಪಟ್ಟು, ಅವರನ್ನು ಬಂಧಿಸುವಿಕೆಯೂ ಶಿಕ್ಷೆ ಗೊಳಿಸುವಿಕೆಯೂ ಎಲ್ಲವೂ ಆಗಿಹೋಗುವುವು. ಈ ಸಂದರ್ಭವನ್ನು ಕುರಿ ತು ಯೋಚಿಸಿರಿ. ಪ್ರಾರಂಭದಲ್ಲೂ ಎರಡನೆಯ ಬಾರಿಯೂ, ನಮಗೆ ಆ ಮನುಷ್ಯನ ವಿಷಯದಲ್ಲಿ ತಿಳಿದುದು-'ರಾಜ ಮತ್ತು ಕಳ್ಳ' ಎಂಬೀ ಭಾವನೆ ಗಳು ಮಾತ್ರ. ಅವನು ರಾಜನಾಗಿದ್ದುದನ್ನೂ ಕಳ್ಳತನ ಮಾಡಿದ್ದನ್ನೂ ನಾವು ಕಾಣೆವು. ಅಥವ ಆ ಭಾವನೆಗಳನ್ನು ನಮಗೆ ಕೊಟ್ಟವರಾದರೂ ಯಾ ವವಸ್ತು ಸಾಮಗ್ರಿಗಳನ್ನೂ ಹೊತ್ತು ತಂದಿರಲಿಲ್ಲ, ಅಲ್ಲವೆ? ಆದರೆ ಕೇ ವಲ ಆ 'ರಾಜ' ಮತ್ತು 'ಕಳ್ಳ' ಎಂಬೀ ಭಾವನೆಗಳು ಮಾತ್ರವೇ ಮೊದ ಲು ರಾಜೋಪಚಾರಕ್ಕೆ ಅವಶ್ಯಕವಾದ ಸಕಲ ಸಾಮಗ್ರಿಗಳನ್ನೂ, ಎರಡನೆ ಯಬಾರಿ. ಅವನನ್ನೇ ಬಂಧಿಸಲು ಅವಶ್ಯಕವಾದ ವಸ್ತು ಸಾಮಗ್ರಿಗಳನ್ನೂ ಒದಗಿಸಿದುವು. ಅವನಿಗೂ ನಮ್ಮ ಆ ಕೇವಲ ಭಾವನೆಗಳ ಫಲವಾಗಿಯೇ

ಅಗಾಧ ಸುಖವೂ-ಕಷ್ಟವೂ ಪ್ರಾಪ್ತವಾದುವು. ಹೀಗೆ ಅತ್ಯಂತ ಕ್ಷುದ್ರವಾದ ನಮ್ಮ ಭಾವನೆಗಳೇ ಇಷ್ಟುಮಟ್ಟಿನ ಕಾರ್ಯವಾಡಲು ಶಕ್ತವಾಗಿರುವಲ್ಲಿ, ಅಗಾಧ ಶಕ್ತಿಯುಕ್ತವೂ, ಸರ್ವ ಚೈತನ್ಯಸ್ವರೂಪವೂ, ಆದ ಆ *ಬ್ರಹ್ಮಭಾವದ ಶಕ್ತಿಯೆಷ್ಟೆಂಬುದನ್ನು ಹೇಳಲು ಯಾರಿಂದ ಸಾಧ್ಯ? ಈ ಉದಾಹರಣೆಯನ್ನು ಸಮಂಜಸವೆಂದು ಒಪ್ಪಬಹುದಾದರೆ, ಸಂಕಲ್ಪಸಿದ್ಧಿಯು ಅದ್ಭುತಶಕ್ತಿಯನ್ನು ಗಳಿಸಿದ ಬ್ರಹ್ಮಭಾವನೆಯಿಂದ ಜಗತ್ತಿನ ಸಕಲವಿಧ ಸೃಷ್ಟಿಕಾರ್ಯವೂ ನಡೆವುದು ಸಾಧ್ಯವೆಂದೂ ಹೀಗೆ ಯೋಚಿಸುವುದು ಸಮಂಜಸವೆಂದೂ ಒಪ್ಪಬೇಕಾಗುವುದು. ಹೀಗೆ ಒಂದು ಜನ್ಮದಲ್ಲಿ ಆರ್ಜಿತವಾದ ಪುಣ್ಯಪಾಪಗಳನ್ನು ಅನುಸರಿಸಿಯೇ ಜೀವಾತ್ಮನು ಮರುಜನ್ಮದಲ್ಲಿ ಸುಖ ಅಥವಾ ಕಷ್ಟಗಳನ್ನು ಹೊಂದುವನು ಎಂಬುದನ್ನು ಈ ವಿವರಣೆಯು ಲೇಶಮಾತ್ರವಾದರೂ ಸ್ಪಷ್ಟಪಡಿಸಬಲ್ಲುದೆಂದು ನಂಬುತ್ತೇವೆ. ಅಗಾಧವಾದ ಈ ವಿಚಾರವನ್ನು ಇನ್ನೂ ವಿಶೇಷವಾಗಿ ಬೆಳೆಸುವುದು ಪ್ರಕೃತಕ್ಕೆ ಅನಾವಶ್ಯಕವು. ವಿಚಾರಪರರು ಈ ಮಾರ್ಗವನ್ನೇ ಅನುಸರಿಸಿ ಯೋಚನೆ ಮಾಡತೊಡಗುವರಾದರೆ, ಮೇಲೆ ಮೇಲೆ ಈ ವಿಚಾರವು ಸ್ಪಷ್ಟವಾಗುತ್ತಾ ಹೋಗುವುದು.

ತತ್ವದರ್ಶಿಗಳಾದ ಮಹಾಪುರುಷರು, ಈ ಸಂಗತಿಯನ್ನು ಕರತಲಾಮಲಕದಂತೆ ಸ್ಪಷ್ಟವಾಗಿ ತಿಳಿದಿರುವರಾದುದರಿಂದಲೇ ಅವರು ತಮಗೆ ಅಪಕಾರವನ್ನೆಸಗಿದವರಿಗೆ ಪ್ರತ್ಯಪಕಾರವೆಸಗಿ ಕರ್ಮ ಸಂಕಲೆಗಳನ್ನು ವೃದ್ಧಿಗೊಳಿಸಿಕೊಳ್ಳದೆ, ಸರ್ವಕಾಲ ಸರ್ವಾವಸ್ಥೆಗಳಲ್ಲೂ, ತಮ್ಮ ಭಾವನೆಗಳನ್ನು ಶುಚಿಯಾಗಿಟ್ಟುಕೊಂಡು, ಸದಾ ಭಗವನ್ನಿರ್ಭರ ಚಿತ್ತವೃತ್ತಿಯುಳ್ಳವರಾಗಿರುವರು. ಪ್ರಾಪ್ತವಾಗುವ ಕಷ್ಟಸುಖಗಳೆಲ್ಲವೂ ತಮ್ಮ ಜನ್ಮಾಂತರಾರ್ಜಿತ ಕರ್ಮಗಳ ಫಲಗಳೆಂದು ತಿಳಿದು ಸಮಾಧಾನ ಚಿತ್ತರಾಗಿ ಅನುಭವಿಸುವರು. ತಮಗೆ ದ್ರೋಹಮಾಡಿದರೆಂದು ಯಾರನ್ನೂ ದ್ವೇಷಿಸರು - ದೂಷಿಸರು. ಪರರಮೇಲೆ ಹಠಸಾಧಿಸಿಕೊಳ್ಳಲು ಪ್ರಯತ್ನಿಸರು. ಅಂತಹ ಸಾಧುವರ್ಯರ ನಡೆವಳಿಕೆಯು ಜಗತ್ತಿಗೆ ಉದಾಹರಣೆಯಾಗಲಾರದೆ? ನಮ್ಮ ಕಥಾನಾಯಕನಾದ ಶ್ರೀ ಜಯದೇವ ಕವೀಶ್ವರನ ಚರಿತ್ರೆಯು ಈ ತತ್ವವನ್ನು

---

* ಭಗವದಿಚ್ಛೆಯ—ಈಶ್ವರಸಂಕಲ್ಪದ

ಉದಾಹರಣಪೂರ್ವಕ ಸ್ಪಷ್ಟಗೊಳಿಸುವುದಾದುದರಿಂದ ಅದನ್ನಿಲ್ಲಿ ನಿರೂಪಿಸ ಲೆಳಿಸುತ್ತೇವೆ. ವಾಚಕ ಮಹಾಶಯರು ಸಾವಧಾನ ಚಿತ್ತದಿಂದ ಮುಂದಾಸಬೇಕು.

ಭಾರತದೇಶವನ್ನು ಕ್ಷೇತ್ರತೀರ್ಥಗಳ ತೌರುಮನೆಯೆನ್ನಬಹುದಷ್ಟೆ! ಕಾಶೀ ರಾಮೇಶ್ವರ ತಿರುಪತಿ ಉಡುಪಿ ಪಂಡರಾಪುರ ದ್ವಾರಕಾ ಹರಿದ್ವಾರ ಮುಂತಾದ ಕ್ಷೇತ್ರಗಳು ಪ್ರತಿವರ್ಷವೂ ಹತ್ತಾರು ಸಹಸ್ರಮಂದಿ ಯಾತ್ರಿಕರನ್ನು ತಮ್ಮೆಡೆಗೆ ಆಕರ್ಷಿಸಿ, ಅವರ ಆತ್ಮಗಳಿಗೆ ಧನ್ಯತೆಯನ್ನುಂಟುಮಾಡಲು ಶಕ್ತವಾಗಿವೆ. ಇವುಗಳಲ್ಲ ಒಂದೊಂದೂ ಅಗಾಧ ಪೂರ್ವಚರಿತ್ರೆಗಳನ್ನು ಉಂಟಾಗಿವೆ. ಒಂದೊಂದರಲ್ಲೂ ಮಹಾಮಹಿಮಾ ಶಾಲಿಗಳಾದ ಭಕ್ತಶಿರೋಮಣಿಗಳು ವಾಸಿಸಿ, ಅಲ್ಲಿ ನೆಲೆಸಿರುವ ದೇವತಾ ವಿಗ್ರಹಗಳನ್ನು ಆರಾಧಿಸಿ ಆಯಾ ಕ್ಷೇತ್ರಗಳಲ್ಲಿ ತಮ್ಮ ಅಗಾಧ ತಪಶ್ಶಕ್ತಿಯನ್ನು ಗಳಿಸಿಟ್ಟಿದ್ದಾರೆಂದೂ, ಆ ಕ್ಷೇತ್ರಗಳನ್ನು ಸಂದರ್ಶಿಸಿ ಅಲ್ಲಿ ಒಂದೆರಡು ರಾತ್ರಿಗಳಾದರೂ ವಾಸಿಸುವುದರಿಂದ ತಮ್ಮ ಪಾತಕವು ನಾಶವಾಗಿ, ಮನಸ್ಸು ಶುದ್ಧವಾಗಿ, ತಮ್ಮ ಚೇತನಕ್ಕೆ ಧಾರ್ಮಿಕ ವಾತಾವರಣದ ಸಂಪರ್ಕದಿಂದ ತಮ್ಮಲ್ಲೂ ಧಾರ್ಮಿಕ ಭಾವನೆಯುಂಟಾಗಿ ಸದ್ಗತಿಗೆ ಸಾಧನವಾಗುವುದೆಂಬುದು, ತೀರ್ಥಕ್ಷೇತ್ರಗಳಿಗೆ ಯಾತ್ರೆಯಾಗಿ ಹೋಗುವುದರಲ್ಲಿ ಆಸ್ತಿಕರ ಭಾವನೆ. ಇತರ ಎಲ್ಲಾ ಕ್ಷೇತ್ರಗಳಂತೆಯೇ ಶ್ರೀ ಜಗನ್ನಾಥ ಕ್ಷೇತ್ರವೂ ಬಹು ಮಹಿಮಾಸಂಪನ್ನವಾದುದೆಂಬ ಪ್ರಸಿದ್ಧಿಗೆ ಪಾತ್ರವಾಗಿದ್ದಿತು. ಆ ಕ್ಷೇತ್ರಕ್ಕೂ ಪ್ರತಿವರ್ಷವೂ ಹತ್ತಿಪ್ಪತ್ತು ಸಹಸ್ರಮಂದಿ ಯಾತ್ರಿಕರು ಬಂದು, ಜಗನ್ನಾಥ ಸ್ವಾಮಿಯನ್ನು ಆರಾಧಿಸಿ, ಸಂತುಷ್ಟಾಂತರಂಗದಿಂದ ತಮ್ಮ ತಮ್ಮ ಸ್ವಗ್ರಾಮಗಳಿಗೆ ಹೋಗುವುದೂ ಪದ್ಧತಿ! ಈ ಜಗನ್ನಾಥಕ್ಕೆ ಸಮೀಪವಾಗಿ ಬಿಲ್ವಾಯೆಂಬೊಂದು ಗ್ರಾಮವು ಚಿರಪ್ರಸಿದ್ಧವಾಗಿರುವುದು. ಆ ಬಿಲ್ವಾ ಗ್ರಾಮವು ಚಿಕ್ಕದೇ ಆದರೂ ಆದರಲ್ಲಿ ಸದಾಚಾರ ಸಂಪನ್ನರಾದ ಬ್ರಾಹ್ಮಣರೂ, ಆ ಬ್ರಾಹ್ಮಣರಿಗೆ ವಿಧೇಯರಾಗಿ ತಮ್ಮ ತಮ್ಮ ಕುಲವೃತ್ತಿಗಳಲ್ಲಿ ನಿರತರಾಗಿ ಧರ್ಮಬುದ್ಧಿಯುಳ್ಳವರಾಗಿ ನಡೆದುಕೊಳ್ಳುತ್ತಿದ್ದ ಕ್ಷತ್ರಿಯ ವೈಶ್ಯ ಶೂದ್ರರೂ, ಪರಸ್ಪರ ಗೌರವ ಪ್ರೇಮ ವಿಶ್ವಾಸಗಳಿಂದ ಜೀವನ ಯಾತ್ರೆಯನ್ನು ಸಾಗಿಸಿಕೊಂಡಿದ್ದರು. ಆ ಗ್ರಾಮದಲ್ಲ ನಾರಾ

ಯಣಭಟ್ಟನೆಂಬ ಬ್ರಾಹ್ಮಣೋತ್ತಮನು. ವೇದಶಾಸ್ತ್ರಾರ್ಥಗಳಲ್ಲಿ ಕುಶಲನಾಗಿ, ಸದಾ ಸತ್ಕರ್ಮನಿಷ್ಠನಾಗಿ, ಇತರರಿಗೆ ಮಾರ್ಗದರ್ಶಕನಾಗಿದ್ದನು. ಆತನು ಜಿತೇಂದ್ರಿಯನು, ಶುದ್ಧಸಂಕಲ್ಪನು, ಪರೋಪಕಾರಿಯು, ನಿಸ್ಪೃಹನು. ಶ್ರೀ ಜಗನ್ನಾಥಸ್ವಾಮಿಯ ಪಾದ ಪದ್ಮಗಳಲ್ಲಿ ಅನನ್ಯ ಭಕ್ತಿಭಾವವುಳ್ಳವನು. ಪರಮ ವೈರಾಗ್ಯಶಾಲಿಯು. ಅಹಂಕಾರ ಮಮಕಾರ ವರ್ಜಿತನು.

ಬ್ರಹ್ಮಕುಲಭೂಷಿತನಾದ ನಾರಾಯಣಭಟ್ಟನು, ಯುಕ್ತ ವಯಸ್ಕನಾಗಿ ಕಮಲಾಬಾಯಿಯೆಂಬ ಸಾಧ್ವೀಮಣಿಯನ್ನು ವಿವಾಹವಾಗಿ ಆಕೆಯೊಂದಿಗೆ ಗೃಹಸ್ಥ ಧರ್ಮವನ್ನು ನಿರ್ವಹಿಸುತ್ತಾ ಬಹುಕಾಲ ಮೇಲ್ಕಂಡ ಬಿಲ್ವಾ ಎಂಬ ಗ್ರಾಮದಲ್ಲೇ ವಾಸಮಾಡಿಕೊಂಡಿದ್ದನು. ಕಮಲಾಬಾಯಿಯೂ. ತನ್ನ ಪತಿಗೆ ತಕ್ಕ ಭಾರ್ಯೆಯಾಗಿ ಸದ್ಗುಣ ಸದಾಚಾರಗಳಿಗೆ ತೌರುಮನೆಯೋ ಎಂಬಂತೆ ಇದ್ದಳು. ಆ ದಂಪತಿಗಳಲ್ಲಿ ಎಂದೂ ಭಿನ್ನಾಭಿಪ್ರಾಯಗಳುಂಟಾದುದಿಲ್ಲ. ಎರಡು ಕಣ್ಣುಗಳೂ ಸೇರಿ ಒಂದು ವಸ್ತುವನ್ನು ಒಂದೇ ದೃಷ್ಟಿಯಿಂದಲೇ ಹೇಗೆ ನೋಡುವುವೋ ಹಾಗೆಯೇ ಆ ದಂಪತಿಗಳು ಏಕಾಭಿಪ್ರಾಯದಿಂದಲೇ ಗೃಹಸ್ಥ ಧರ್ಮವಿಹಿತಗಳಾದ ಸಕಲ ಸತ್ಕರ್ಮಗಳನ್ನೂ ನಡೆಯಿಸುತ್ತಾ, ಆ ಗ್ರಾಮಸ್ಥರಿಗೂ ಸುತ್ತಮುತ್ತಿನ ಊರುಗಳವರಿಗೂ ಆದರ್ಶ ದಂಪತಿಗಳೆಂಬಂತೆ ಕಾಲಯಾಪನೆ ಮಾಡಿಕೊಂಡಿದ್ದರು.

ದಾಂಪತ್ಯ ಜೀವನದಲ್ಲಿ ಬಹು ಕಾಲಕಳೆದರೂ, ನಾರಾಯಣಭಟ್ಟನಿಗೆ ಸಂತಾನವಾಗಲಿಲ್ಲ. ಭಟ್ಟನು ಅದಕ್ಕಾಗಿ ವ್ಯಸನಪಡಲೂ ಇಲ್ಲ. ವೈರಾಗ್ಯ ಪ್ರಕೃತಿಯ ಆತನು ಆ ವಿಷಯದಲ್ಲಿ ಉದಾಶೀನತೆಯಿಂದ ಇದ್ದುಬಿಟ್ಟನು. ಆದರೆ ಆತನ ಭಾರ್ಯೆ ಕಮಲಾಬಾಯಿಗೆ ಸಂತಾನ ವಿಷಯಕವಾದ ಅಪೇಕ್ಷೆಯು ದಿನದಿನಕ್ಕೆ ಹೆಚ್ಚಾಗತೊಡಗಿತು. ಕೇವಲ ವೈರಾಗ್ಯ ಚಿತ್ತವೃತ್ತಿಯಿಂದ ಇದ್ದ ಗಂಡನಿಗೆ ಸಂಸಾರದ ಹಂಬಲವು ದಿನದಿನಕ್ಕೆ ತಪ್ಪುತ್ತಾ ಬಂದಂತೆಲ್ಲಾ ಕಮಲಾಬಾಯಿಗೆ-ತಮಗೆ ಮಕ್ಕಳಿಲ್ಲವಲ್ಲಾ, ಮಕ್ಕಳಿಲ್ಲದವರಿಗೆ ಸದ್ಗತಿಯೆಂತು ಲಭಿಸೀತು ? ತಮ್ಮ ವಂಶವು ಮುಂದೆ ಬೆಳೆಯುವ ಪರಿಯೆಂತು?—ಎಂಬ ಹಂಬಲವು ಹೆಚ್ಚಾಗಸಾಗಿತು. ಆದರೆ ತನ್ನ

ಮನಸ್ಸಿನಲ್ಲಿ ದಾವಾಗ್ನಿಯಂತೆ ಜ್ವಲಿಸುತ್ತಿದ್ದ ಈ ಹಂಬಲದ ವಿಚಾರವನ್ನು ತನ್ನ ಪತಿಗೆ ತಿಳಿಸದೆ, ಸದಾ ದೇವರನ್ನು 'ಧ್ಯಾನಿಸುತ್ತಾ, - ದೇವಾ, ನಮ್ಮ ಮೇಲೆ ಏಕಿಷ್ಟು ನಿರ್ದಯನಾದೆ?' ಎಂದು ಶ್ರೀ ಜಗನ್ನಾಥಸ್ವಾಮಿಯನ್ನು ಸದಾ ಪ್ರಾರ್ಥಿಸುತ್ತಾ, ಗೃಹಕೃತ್ಯಗಳಲ್ಲಿ ತೊಡಗಿ ಕಾಲ ಕಳೆಯುತ್ತಿದ್ದಳು. ಒಂದಾನೊಂದು ಸಾರಿ, ಪತಿ ಪತ್ನಿಯರಿಬ್ಬರೂ, ಶ್ರೀ ಜಗನ್ನಾಥಸ್ವಾಮಿಯ ದರ್ಶನಕ್ಕೆಂದು ತಮ್ಮ ಗ್ರಾಮದಿಂದ ಪ್ರಯಾಣಮಾಡಿ, ಅಲ್ಲಿ, ಜಗನ್ನಾಥ ಮೂರ್ತಿಯನ್ನು ಮನಸಾರೆ ಪೂಜಿಸಿ, ಧ್ಯಾನಿಸಿ, ಆ ರಾತ್ರಿ ಅಲ್ಲೇ ನಿದ್ರಾಪರವಶರಾಗಿ ಮಲಗಿದ್ದರು. ಆ ದಿನ ಕಮಲಾಬಾಯಿಯು ಎಂದಿಗಿಂತಲೂ ಅತಿಶಯವಾಗಿ,-'ದೇವಾ ನನ್ನ ಕೋರಿಕೆಗಳು ನಿನಗೆ ಅರಿಕೆಯಾಗಲಿಲ್ಲವೆ? ಒಂದು ಕಂದನಿಗಾಗಿ ಹಂಬಲಿಸಿ ಪಟ್ಟ ನಿಟ್ಟುಸಿರುಗಳು ನಿನ್ನ ಕಿವಿಗೆ ಕೇಳಿಸಲಿಲ್ಲವೆ? ದಯಾ ಸಮುದ್ರನಾದ ನೀನು ದೀನಳ ಈ ಒಂದು ಅಲ್ಪ ಪ್ರಾರ್ಥನೆಯನ್ನು ನೆರವೇರಿಸಿ-'ಭಕ್ತಾಭೀಷ್ಟಪ್ರದಾಯಕ' ಎಂಬ ನಿನ್ನ ನಾಮವನ್ನು ಸಾರ್ಥಕಪಡಿಸಿಕೊಳ್ಳಲಾರೆಯಾ? ದೇವಾ, ಕಲ್ಪವೃಕ್ಷ ಸದೃಶನಾದ ನಿನ್ನ ಸನ್ನಿಧಿಯಲ್ಲಿ ಮೊರೆಯಿಟ್ಟರೂ, ನನ್ನ ಇಷ್ಟಾರ್ಥವು ನೆರವೇರದಿದ್ದಮೇಲೆ, ನನ್ನ ದುರ್ವಿಧಿಯು ಇನ್ನೆಷ್ಟು ಕಠಿಣವಾಗಿದ್ದೀತು?'' ಎಂದು ಮುಂತಾಗಿ ಮನಸ್ಸಿನಲ್ಲೇ ಮರುಗಿಕೊಂಡು, ಹಲುಬಿಕೊಂಡು ಮಲಗಿದ್ದಳು. ಆ ದಿನ ರಾತ್ರಿ ಕಳೆದು ಬೆಳಗಿನ ಜಾವದಲ್ಲಿ ನಾರಾಯಣಭಟ್ಟನಿಗೆ ಒಂದು ಕನಸಾಯಿತು. ಅದರಲ್ಲಿ ಜಗನ್ನಾಥಸ್ವಾಮಿಯು ಒಬ್ಬ ವೃದ್ಧ ಬ್ರಾಹ್ಮಣ ವೇಷದಿಂದ ಬಂದು-'ಅಯ್ಯಾ ಬ್ರಾಹ್ಮಣೋತ್ತಮಾ, ಚಿಂತಿಸಬೇಡ. ನಿನ್ನ ಭಾರ್ಯೆಯ ಕೋರಿಕೆಯು ಶೀಘ್ರದಲ್ಲೇ ಸಫಲವಾಗುವುದು. ಆದರಿಂದ ನೀವೂ ನಿಮ್ಮ ವಂಶೀಕರೂ ಕೃತಾರ್ಥರಾಗುವಿರಿ'' ಎಂದು ನುಡಿದು ಕಣ್ಮರೆಯಾದಂತೆ ಅನುಭವವಾಯಿತು. ಭಟ್ಟನು ಒಡನೆ ಕಣ್ಣು ಬಿಟ್ಟು, ನಾರಾಯಣ ಸ್ಮರಣಪೂರ್ವಕ ಹಾಸಿಗೆಯಮೇಲೆ ಎದ್ದು ಕುಳಿತು-ಕನಸಿನಲ್ಲಿ ತಾನು ಕೇಳಿದ ಮಾತುಗಳನ್ನೇ ಮತ್ತೊಮ್ಮೆ ಜ್ಞಾಪಿಸಿಕೊಂಡನು. ತರುವಾಯ ಹೆಂಡತಿಯನ್ನೆಬ್ಬಿಸಿ-'ಎಲೌ ನನಗೆ ಈಗತಾನೆ ಒಂದು ಕನಸಿನಲ್ಲಿ ಒಬ್ಬ ವೃದ್ಧಬ್ರಾಹ್ಮಣನು ಗೋಚರವಾಗಿ, ನಿನ್ನ ಕೋರಿಕೆಯು ಶೀಘ್ರದಲ್ಲೇ ಫಲಪ್ರದವಾಗುವುದೆಂದು ಹೇಳಿದಂತಾಯಿತು. ನಿನ್ನ ಕೋ

ರಿಕೆಯೆಂತಹುದು ? ಯಾರನ್ನು ಏನುಬೇಕೆಂದು ಕೋರಿಕೊಂಡಿದ್ದೆ ? ಆ ವಿಚಾರವೇನು ?" ಎಂದು ಪ್ರಶ್ನಿಸಿದನು.

ಕಮಲಾಬಾಯಿಗೆ ಪರಮಾಶ್ಚರ್ಯವಾಯಿತು. ತನ್ನ ಕೋರಿಕೆಗೆ ಭಗವಾನನು ತನ್ನ ಪತಿಯು ಕನಸಿನಲ್ಲಿ ಪ್ರತ್ಯುತ್ತರಕೊಟ್ಟ ಕಾರಣವೇನೆಂದು ತೋರದಾಯಿತು ! ಆದರೂ, ತನ್ನ ಪತಿಯು ಪ್ರಶ್ನೆಗೆ ಪ್ರತ್ಯುತ್ತರವಾಗಿ-'ನಾಥಾ, ಮಕ್ಕಳಿಲ್ಲದವರಿಗೆ ಸದ್ಗತಿಯುಂಟಾಗದು, ಎಂಬ ಆರ್ಯವಾಕ್ಯದಲ್ಲಿ ನಂಬಿಕೆಯಿಟ್ಟು, ಇಷ್ಟು ಉತ್ತಮಸ್ಥಿತಿಯಲ್ಲಿ ಬಾಳಿ ಬದುಕಿದ್ದರೂ ಕೊನೆಗೆ ಗತಿಗಾಣದೆ ಹೋಗಬೇಕಾದ ದುರ್ವಿಧಿಯು ನಮಗೆ ಒದಗುವುದಲ್ಲಾ ಎಂದು ಚಿಂತಿಸಿ-ನಮಗೊಂದು ಪುತ್ರಸಂತಾನವನ್ನು ಕರುಣಿಸೆಂದು ಶ್ರೀಜಗನ್ನಾಥಸ್ವಾಮಿಯನ್ನು ಪ್ರಾರ್ಥಿಸಿಕೊಂಡಿದ್ದೆ. ಭಕ್ತವತ್ಸಲನಾದ ಶ್ರೀವರನು ದೀನಳಾದ ನನ್ನ ಪ್ರಾರ್ಥನೆಯನ್ನು ಲಾಲಿಸಿ ತಮ್ಮ ಕನಸಿನಲ್ಲಿ ಪ್ರತ್ಯುತ್ತರಕೊಟ್ಟಿದ್ದಾನೆ ' ಎಂದು ಹಸನ್ಮುಖದಿಂದ ತನ್ನ ಸಂತೋಷವನ್ನು ಸೂಚಿಸಿದಳು.

ತನ್ನ ಪತ್ನಿಯ ಉದರದಲ್ಲಿ ಭಗವದ್ವರಪ್ರಸಾದ ಬಲಿಮೆಯಿಂದ ಒಬ್ಬ ಪುತ್ರನು ಉದಯಿಸುತ್ತಾನೆಂಬುದನ್ನು ಕೇಳಿದರೂ, ನಾರಾಯಣಭಟ್ಟನು ಸಂತೋಷಗೊಳ್ಳಲಿಲ್ಲ. ಮೇಲಾಗಿ-' ಎಲೈ, ಮಕ್ಕಳಿಂದ ಸದ್ಗತಿಯುಂಟಾಗುತ್ತದೆಂದು ನಿನಗಾರು ಹೇಳಿದರು ? ಮಕ್ಕಳುಮರಿಗಳಿಂದ ಇನ್ನೂ ದಿನದಿನಕ್ಕೆ ಸಂಸಾರದ ಬಂಧಕವು ಹೆಚ್ಚಾಗಿ, ಚಿತ್ತವು ಭಗವಾನನ ಪಾದಗಳಿಂದ ತಪ್ಪಿ ಹಲವೆಡೆಗಳಲ್ಲಿ ಹರಿಯಲು ಅವಕಾಶವಾಗುವುದು, ಎಂಬುದನ್ನು ಮರೆತೆಯಾ ? ಭಗವಂತನನ್ನು ಪ್ರಾರ್ಥಿಸಿ ನಿತ್ಯಸುಖವನ್ನು ಕೋರಿಕೊಳ್ಳುವುದನ್ನುಬಿಟ್ಟು, ಆ ದೇವರದೇವನನ್ನು ಸಂತಾನ ಸಂಪತ್ತುಗಳೆಂಬ ಕ್ಷಣಿಕ ಸುಖದಾಯಕಗಳಾದ, ದುಃಖಸ್ವರೂಪೀ ವರಗಳನ್ನು ಪಡೆಯಬಹುದೆ ? ' ಎಂದುಕೇಳಿ ಆಪೇಕ್ಷಿಸಿದನು. ಆಗಲಾ ಸಾಧ್ವಿಯು-'ನಾಥಾ, ಸಂತಾನವೂ ಸಂಪತ್ತೂ ಪ್ರಾಪ್ತವಾದ ಮಾತ್ರಕ್ಕೇ ಆ ಸರ್ವೇಶ್ವರನನ್ನು ಮರೆಯಬೇಕೆಂದು ಹೇಳಿದವರಾರು ? ಸರ್ವೇಶ್ವರನ ಪಾದಪದ್ಮಗಳಲ್ಲಿ ಅನನ್ಯಭಾವದಿಂದ ನೆಲೆಗೊಂಡಿರುವ ಚಿತ್ತವು, ನೀರಮೇಲಿನ ಗುಳ್ಳೆಯಂತೆ ಕ್ಷಣಮಾತ್ರವಿದ್ದು ಮರೆಯಾಗುವ ಈ ವಸ್ತುಗಳಿಂದ ಚಲಿಸಬೇಕಾದ ಕಾರಣವೇನು ? ಅಷ್ಟು

ಮಾತ್ರ ಯುಕ್ತಾಯುಕ್ತ ತಾರತಮ್ಯ ಜ್ಞಾನವಿಲ್ಲದಿದ್ದ ಮೇಲೆ ನಾವು ಗೃಹಸ್ಥ ಧರ್ಮದಲ್ಲಿರಲು ಎಂತು ಯೋಗ್ಯರಾದೇವು ? ಪ್ರಾಣಮನೋಹರಾ - ಹಾಗಲ್ಲ, ತಮಗೆ ತಿಳಿದು ಹೇಳುವ ಸಾಮರ್ಥ್ಯವು ನನಗಿಲ್ಲವೆಂಬುದನ್ನು ಬಲ್ಲೆನು ? ಆದರೂ ಚಿತ್ತವಿಟ್ಟು ಲಾಲಿಸಬೇಕು. ಗೃಹಸ್ಥಾಶ್ರಮದ ಕರ್ತವ್ಯಗಳಲ್ಲಿ, ದೇವ ಋಷಿ ಪಿತೃಋಣಗಳನ್ನು ತೀರಿಸಿಕೊಳ್ಳಬೇಕೆಂಬುದೂ ಸೇರಿದೆಯಲ್ಲವೆ ? ನಮ್ಮ ಹಿರಿಯರಿಂದ ನಮ್ಮವರೆಗೆ ನಡೆದುಬಂದ ನಮ್ಮ ವಂಶವು-ನಮ್ಮಿಂದ ಮುಂದೆ ನಡೆಯಲು ನಾವು ಶ್ರಮಪಡದಿದ್ದರೆ, ಈ ವಂಶವನ್ನು ಇಲ್ಲಿಗೇ ನಿಲ್ಲಿಸಿದ ದುಷ್ಕರ್ಮವು ನಮ್ಮನ್ನು ಸುತ್ತುವುದಲ್ಲವೆ ? ಅದಂತಿರಲಿ ! ನಮ್ಮ ಕರ್ತವ್ಯವನ್ನಾದರೂ ನಾವು ನೆರವೇರಿಸಬೇಕಷ್ಟೆ ! ಭಗವದತ್ತವಾದ ಈ ಸಂಸಾರವನ್ನೂ ಸಂತಾನಾದಿಗಳನ್ನೂ ಲೀಲಾ ನಾಟಕ ಸೂತ್ರಧಾರಿಯಾದ ಆತನ ಲೀಲೆಯೆಂದೇ ತಿಳಿಯದೆ, ಬಂಧಕ ಸ್ವರೂಪವಾದುದೆಂದು ತಿಳಿದು ಮರುಗಬೇಕೇಕೆ ? ಇದನ್ನು ಕುರಿತೇ ನಾನು ಭಗವಾನನನ್ನು ಹೀಗೆ ಪ್ರಾರ್ಥಿಸಿದೆನು. ತಪ್ಪಿದ್ದರೆ ಕ್ಷಮಿಸಿರಿ ' ಎಂದು ನುಡಿದಳು.

ನಾರಾಯಣಭಟ್ಟನು. ತನ್ನ ಪತ್ನಿಯ ವಾಕ್ಯವು ಸಮಂಜಸವಾದುದೆಂದು ತಿಳಿದನು. ಮುಂದೆ ಆ ವಿಚಾರದಲ್ಲಿ ವಿರೋಧಭಾವವನ್ನು ವ್ಯಕ್ತಪಡಿಸಲಿಲ್ಲ. ಪ್ರಾತಃಕಾಲ ಎದ್ದು ಇಬ್ಬರೂ ಪುನಃ ಜಗನ್ನಾಥಸ್ವಾಮಿಯನ್ನು ಆರಾಧಿಸಿ, ಪರಮ ಸಂತೋಷದಿಂದ ಸ್ವಗ್ರಾಮಾಭಿಮುಖವಾಗಿ ಪ್ರಯಾಣಮಾಡಿದರು. ಗ್ರಾಮವನ್ನು ಸೇರಿದ ಕೆಲವು ದಿನಗಳಲ್ಲೇ ಕಮಲಾಬಾಯಿಗೆ ಗರ್ಭಚಿಹ್ನೆಗಳು ತೋರಲಾದುವು. ಪ್ರಕೃತಿವಿಧಿಯಂತೆ, ನವಮಾಸಗಳು ಪೂರ್ತಿಯಾಗಿ ಕಳೆಯಲು, ಮುಂದೊಂದು ಶುಭದಿನದ ಶುಭ ಮುಹೂರ್ತದಲ್ಲಿ, ಕಮಲಾದೇವಿಯ ಗರ್ಭಸುಧಾಂಬುಧಿಯಲ್ಲಿ, ಶ್ರೀ ಜಗನ್ನಾಥಸ್ವಾಮಿಯ ವರಪ್ರಸಾದ ಮಹಿಮೆಯಿಂದಲೋ ಎಂಬಂತೆ, ಒಂದು ಪುರುಷಶಿಶುವು ಜನನವಾಯಿತು. ನಾರಾಯಣಭಟ್ಟನು ಜನನಕಾಲದ ಮುಹೂರ್ತ ಬಲೀಯವನ್ನು ನೋಡಿ. ತನ್ನಾಪುತ್ರನು ಮುಂದೆ ಮಹಾ ಸಾಧುಶಿರೋಮಣಿಯೆನ್ನಿಸಿಕೊಂಡು ಜಗತ್ಪ್ರಖ್ಯಾತನಾಗಿ ತನ್ನ ವಂಶಕೀರ್ತಿಯನ್ನು ಲೋಕದಲ್ಲಿ ಶಾಶ್ವತಗೊಳಿಸುವನೆಂಬುದನ್ನು ತಿಳಿದು - ಆ ಪುತ್ರ ಜನನಕ್ಕೆ ಕಾರಣಳಾದ ತನ್ನ ಪತಿಯ ಸದ್ಭಾವವನ್ನು ಕುರಿತು ಆಕೆಯ

ನ್ನು ತನ್ನ ಮನಸ್ಸಿನಲ್ಲೇ ಅಭಿನಂದಿಸುತ್ತಾ-'ಹೆಂಡತಿ ಸಂತತಿ ಸಾವಿರವಾಗಲಿ' ಎಂದು ಹರಸುತ್ತಿದ್ದನು.



## ಅಧ್ಯಾಯ ೨ "ವಿವಾಹ ಮಹೋತ್ಸವ"

ಶ್ರೀ ಜಯದೇವ ಕವಿಯ ಜನನ ವಿಚಾರದಲ್ಲಿ ಶ್ರೀ ಮಹಾಭಕ್ತಿ ವಿಜಯದಲ್ಲಿ ಒಂದು ಕಥೆಯು ಹೇಳಲ್ಪಟ್ಟಿದೆ.—''ವೈಕುಂಠದಲ್ಲಿ ಶ್ರೀಮನ್ಮಹಾವಿಷ್ಣುವು ಶೇಷಶಾಯಿಯಾಗಿ ಪವಡಿಸಿದ್ದನು. ಗರುಡ ಶೇಷಾದಿಗಳೂ ಮುನಿ ಮನುಗಳ ಸಮೂಹವೂ ಆತನನ್ನು ಓಲಗಿಸುತ್ತಿದ್ದಿತು. ಆಗ ಭೂಲೋಕದಲ್ಲಿ ಕಲಿ ಪ್ರಾಬಲ್ಯದಿಂದ, ವೇದಗಳಿಗೆ ಅಪಾರ್ಥಮಾಡೋಣವೂ ನಾಸ್ತಿಕತೆಯೂ ಅಗಾಧ ಪಾಪಕರ್ಮವೂ ಅಜ್ಞಾನವೂ ಹೆಚ್ಚಿ ಹೋಯಿತೆಂದು ಸ್ವಾಮಿಗೆ ಅರಿಕೆಯಾಯಿತು. ಆಗಲಾ ದೇವರ ದೇವನು, ಅಲ್ಲೇ ಕುಳಿತಿದ್ದ ವೇದವ್ಯಾಸ ಮಹರ್ಷಿಯನ್ನು ಕುರಿತು,-'ಋಷಿಪುಂಗವಾ, ನೀನು ಹಿಂದೆ ಅವತಾರಮಾಡಿ ವಿಭಜಿಸಿಕೊಟ್ಟ ವೇದಗಳಿಗೆ ಸರಿಯಾದ ಅರ್ಥವನ್ನು ತಿಳಿದುಕೊಳ್ಳಲಾರದೆ ಲೋಕದಲ್ಲಿ ಜನರು ಅಜ್ಞಾನಾಂಧಕೂಪದಲ್ಲಿ ಬಿದ್ದು ನರಳುತ್ತಿದ್ದಾರೆ. ಆದುದರಿಂದ ಪುನಃ ನೀನು ಭೂಮಿಯಲ್ಲಿ ಅವತಾರ ಮಾಡಿ ಅವರನ್ನು ಉದ್ಧರಿಸು'' ಎಂದು ಆಜ್ಞಾಪಿಸಿದನು. ಒಡನೆ ವ್ಯಾಸ ಮಹರ್ಷಿಯು-'ಅಪ್ಪಣೆ'ಯೆಂದು ನುಡಿದು -ಅಗಾಧ ದೇವರ ಸೇವೆಯಿಂದಲೂ ವ್ರತನಿಯಮಾದಿಗಳಿಂದಲೂ ಪರಿಶುದ್ಧವಾಗಿದ್ದ ನಾರಾಯಣಭಟ್ಟನ ಪತ್ನಿಯ ಗರ್ಭವೆಂಬ ಪವಿತ್ರ ಕ್ಷೇತ್ರವನ್ನು ಆಶ್ರಯಿಸಿ ಪುತ್ರತ್ವೇನ ಅವತರಿಸಿದನು'' ಎಂಬುದು ಆ ಕಥೆಯ ಸಾರಾಂಶ.

ನಾರಾಯಣಭಟ್ಟನು, ಮಹಾ ಸುಕೃತಶಾಲಿಯಾದ ಪುತ್ರನು ಜನಿಸಿದನಲ್ಲಾ ಎಂಬುದನ್ನು ತಿಳಿದು, ಅಗಾಧ ಸಂಭ್ರಮದಿಂದ ಆ ಶಿಶುವಿಗೆ ಜಾತಕರ್ಮ ನಾಮಕರಣ ಮುಂತಾದ ಪ್ರಾರಂಭದ ಕರ್ಮಗಳನ್ನು ವಿಶೇಷ ವಿಜೃಂಭಣೆಯಿಂದ ನೆರವೇರಿಸಿ, ಆ ಶಿಶುವನ್ನು-'ಜಯದೇವ' ಎಂಬ

ಹೆಸರಿನಿಂದ ಸಂಬೋಧಿಸಿದನು. ಶಿಶುವು ದಿನದಿನಕ್ಕೆ ಶುಕ್ಲಪಕ್ಷದ ಚಂದ್ರನ ಕಳೆಯಂತೆ ಅಭಿವೃದ್ಧಿಯಾಗುತ್ತಾ, ಮಗ್ಗುಲಾಗಿ, ಬೋರಲಾಗಿ ಅಂಬೆಗಾಲಿಕ್ಕುತ್ತಾ ಜೊಲ್ಲು ಸುರಿಸಿಕೊಂಡು ಮನೆಯಲ್ಲೆಲ್ಲಾ ಓಡಾಡುತ್ತಿದ್ದುದೂ, ಮುಂದೆ ಕ್ರಮವಾಗಿ ತಪ್ಪುಹೆಜ್ಜೆ ತೊದಲು ನುಡಿಗಳಿಂದ ಬಳಿಗೆ ನಡೆದು ತನ್ನ ತಂದೆ ತಾಯಿಗಳನ್ನು-'ಮ್ಮ-ಪ್ಪ' ಎಂದು ಸಂಬೋಧಿಸುತ್ತಿದ್ದುದೂ ನಾರಾಯಣಭಟ್ಟ ಕಮಲಾದೇವಿಯರನ್ನು ಆನಂದ ಸಾಗರದಲ್ಲಿ ಓಲಾಡಿಸುತ್ತಿದ್ದಿತು. ಭಟ್ಟನು ಮಗುವಿಗೆ ಅನ್ನಪ್ರಾಶನವನ್ನೂ, ಮುಂದೆ ಕ್ರಮವಾಗಿ ವಯಸ್ಸು ಹೆಚ್ಚಿದಂತೆಲ್ಲಾ ಚೂಡಾಕರ್ಮ ಅಕ್ಷರಾಭ್ಯಾಸ ಉಪನಯನವೇ ಮುಂತಾದ ಕುಲಧರ್ಮಕ್ಕೆ ಯುಕ್ತವಾದ ಕರ್ಮಗಳನ್ನೂ ಸಾಂಗವಾಗಿ ನೆರವೇರಿಸಿದನು. ಜಯದೇವನಿಗೆ ಉಪನಯನವಾದೊಡನೆಯೇ, ನಾರಾಯಣಭಟ್ಟನು ವೇದಪಾಠವನ್ನೂ ಆರಂಭಿಸಿ ಕ್ರಮವಾಗಿ ವೇದಗಳು ಉಪನಿಷತ್ತುಗಳು ಶಾಸ್ತ್ರಗಳು ಮುಂತಾದುವುಗಳನ್ನೂ ಧರ್ಮರಹಸ್ಯಗಳನ್ನೂ, ಪುರಾಣಗಳ ಅಂತರಾರ್ಥಗಳನ್ನೂ ಅಭ್ಯಾಸಮಾಡಿಸಿದನು. ಬಾಲಕ ಜಯದೇವನು ಕುಶಾಗ್ರಮತಿಯಾದುದರಿಂದ, ತಂದೆಯು ಒಂದು ವಿಚಾರವನ್ನು ಹೇಳಲು ಆರಂಭಿಸಿದೊಡನೆಯೇ ಅದರ ಸಂಪೂರ್ಣ ವಿವರಣೆಯನ್ನೂ ಗ್ರಹಿಸಿಬಿಟ್ಟನೇನೋ ಎಂಬಂತೆ 'ಮಿಕ್ಕ ಎಲ್ಲವೂ ಹೀಗಲ್ಲವೆ' ಎಂದು ತಾನೇ ಹೇಳಿಬಿಡುತ್ತಾ. ಬಹು ಸ್ವಲ್ಪ ಕಾಲದಲ್ಲೇ ವೇದಶಾಸ್ತ್ರ ಪುರಾಣ ಇತಿಹಾಸಾದಿಗಳಲ್ಲಿ ಅದ್ವಿತೀಯ ಪಾಂಡಿತ್ಯವನ್ನು ಗಳಿಸಿ,-'ತಂದೆಗಿಂತಲೂ ಮಗನು ಬುದ್ಧಿಶಾಲಿ, ಎಂಬ ಪ್ರಶಂಸೆಗೆ ಪಾತ್ರನಾದನು. ಕಾಶಿ ನವದ್ವೀಪ ಮುಂತಾದ ಸ್ಥಳಗಳ ಸಂಸ್ಕೃತ ಪಂಡಿತ ಮಂಡಲಿಯವರು ಜಯದೇವನ ವಿದ್ಯಾ ಪ್ರೌಢಿಮೆಯನ್ನು ಮೆಚ್ಚಿಕೊಂಡು, ನಾರಾಯಣ ಭಟ್ಟನನ್ನು ಅಭಿನಂದಿಸಿದರು. ಭಟ್ಟನು-'ಸಜ್ಜನರ ಪ್ರಶಂಸೆಗೆ ಪಾತ್ರನಾಗುವಂತಹ ಸದ್ಗುಣಶಾಲಿಯಾದ ಪುತ್ರನನ್ನು ಪಡೆದೆನಲ್ಲಾ! ನನ್ನ ಸಮಾನ ಧನ್ಯನಾರು' ಎಂದು ತನ್ನಲ್ಲಿ ತಾನೇ ಸಮಾಧಾನಪಟ್ಟುಕೊಂಡು ಆನಂದಿಸುತ್ತಿದ್ದನು.

ಶ್ರೀ ಜಯದೇವನು ಅಗಾಧ ವಿದ್ಯಾನಿಧಿಯಾಗಿದ್ದುದು ಮಾತ್ರವಲ್ಲ-ವಿನಯಾದಿ ಸದ್ಗುಣಗಳಿಂದ ವಿಭೂಷಿತನಾಗಿಯೂ ಇದ್ದನು. ಸಭೆಯಲ್ಲಿ

ದಿಗ್ಗಂತಿ ಪಂಡಿತರನ್ನು ಸೋಲಿಸುವ ಪಾಂಡಿತ್ಯವೂ ಸ್ಫೂರ್ತಿಯೂ ಇದ್ದು
ವಾದರೂ, ಯಾರಿಗೂ ಅವಮಾನವನ್ನುಂಟುಮಾಡಿ ಅವರ ಮನಸ್ಸನ್ನು
ನೋಯಿಸುವಂತಹ ಧೂರ್ತತನವು ಆತನಲ್ಲಿ ಪ್ರವೇಶಗೊಂಡಿರಲಿಲ್ಲ. ದೇವ
ತರಂಗಿಣಿಯಂತೆ ತಡೆಬಡೆಯಿಲ್ಲದೆ ಪ್ರವಹಿಸುವ ವಾಗ್ಝರಿಯಿಂದ ಸಹಸ್ರಾ
ವಧಿ ಶ್ರೋತೃಗಳನ್ನು ಮೆಚ್ಚಿಸುವಂತಹ ವಾಗ್ವಿಜೃಂಭಣೆಯಿಂದ ಪ್ರಸಂ
ಗಮಾಡುವ ಅದ್ಭುತ ಶಕ್ತಿ ಸಂಪನ್ನನಾಗಿದ್ದರೂ, ಒಂದು ಅಪಶಬ್ದವಾಗ
ಲೀ ಆ ಮಹನೀಯನ ಬಾಯಿಂದ ಹೊರಟುದಿಲ್ಲ. ಆತನ ಮುಖ ಕಮಲ
ವು ಸದಾ ವಿಕಸಿಸಿದ್ದು ತನ್ನನ್ನು ದರ್ಶಿಸುವ ಸಕಲ ಜನರ ಹೃದಯಗಳನ್ನೂ
ಆಹ್ಲಾದಗೊಳಿಸುವುದು. ದಯೆ, ನಮ್ರತೆ, ಮೃದುವಾಕ್ಯ ಮುಂತಾದ
ಸುಗಂಧಗಳು ಆ ವದನ ಕಮಲದಿಂದ ಹೊರಟು ಸಮೀಪದಲ್ಲಿದ್ದ ಸಕಲರ
ಮನಸ್ಸಿಗೂ ಸಂತೋಷವನ್ನುಂಟುಮಾಡುವುವು. ಈ ಎಲ್ಲಾ ಸದ್ಗುಣಗ
ಳೊಂದಿಗೆ ಆತನಲ್ಲಿ ಶ್ರೀ ಜಗನ್ನಾಥಸ್ವಾಮಿಯ ಪಾದ ಪದ್ಮಗಳಲ್ಲಿ ಅನನ್ಯ
ಭಕ್ತಿಭಾಗ್ಯವೂ ಅಕ್ಷಯವಾಗಿ ನೆಲೆಸಿದ್ದಿತು. ನಿರಂತರವೂ ಆ ದೇವರ
ದೇವನ ಪಾದಕಮಲಗಳಲ್ಲೇ ನಟ್ಟಮನಸ್ಸುಳ್ಳವನಾಗಿ, ಸ್ವಾಮಿಯ ಅಗಾಧ
ಮಹಿಮೆಗಳನ್ನೇ ಸದಾ ಚಿಂತಿಸುತ್ತಾ, ಆತನು ಸ್ವಾಮಿಯ ನಾಮಗಳನ್ನೇ
ಸದಾ ಧ್ಯಾನಿಸುತ್ತಾ, ಸಂತೋಷಚಿತ್ತದಿಂದ ಇರುತ್ತಿದ್ದನು.

ದುಷ್ಟರನ್ನು ಆಶ್ರಯಿಸುವ ದ್ರವ್ಯವು ಪರಪೀಡನೆಗೂ, ದೇಹಬಲವು
ಅಶಕ್ತರ ನಿಗ್ರಹಕ್ಕೂ, ವಿನಿಯೋಗವಾಗಿ ತನ್ಮೂಲಕ ಪಾಪಸಾಧನೆಗೆ
ಸಹಾಯಕವಾಗುವಂತೆಯೇ, ದುರಹಂಕಾರಿಗಳಲ್ಲಿ ಬಂದು ಸೇರಿದ ವಿದ್ಯೆ
ಯೂ ಸಹ ಪರದೂಷಣೆಗೂ ಪರಾಪಮಾನಕ್ಕೂ ತರ್ಕವಾದಕ್ಕೂ ಮಾತ್ರ
ವೇ ಪ್ರಯೋಜನವಾಗುವುದಲ್ಲದೆ, ಅವರ ಸದ್ಗತಿಗೆ ಸಾಧನವಾಗದು. ಯಾ
ವ ವಿದ್ಯೆಯಿಂದ ಅವರು ನಿತ್ಯಾನಿತ್ಯ ವಸ್ತುವಿವೇಕವನ್ನು ತಿಳಿದುಕೊಂಡು
ಭಗವಂತನ ಅಗಾಧ ಮಹಿಮೆಗಳನ್ನು ಮನನಮಾಡಿಕೊಂಡು ಜ್ಞಾನಸಂಪ
ನ್ನರಾಗಿ, ಮೋಕ್ಷ ಸುಖವನ್ನು ಗಳಿಸಬಹುದೋ ಅದೇ ವಿದ್ಯೆಯ ಬಲದಿಂ
ದಲೇ ಆ ಮೂಢಾತ್ಮರು ತಮ್ಮಲ್ಲಿ ಅಹಂಕಾರ ಮಮಕಾರಗಳನ್ನು ಶೇಖರಿ
ಸಿಕೊಂಡು, ಆತ್ಮಪ್ರಶಂಸೆ ಪರನಿಂದೆಗಳಲ್ಲಿ ನಿರತರಾಗಿ, ಸ್ವಾರ್ಥಸಾಧನೆ
ಗಾಗಿ ನಿಷ್ಠುರವಾಕ್ಯದಿಂದ ಪರರ ಮನಸ್ಸನ್ನು ನೋಯಿಸುತ್ತಾ, ಅಗಾಧ

ಪಾಪಸಾಧನೆಯನ್ನೇ ಮಾಡಿಕೊಂಡು ದುರ್ಗತಿಗೆ ಇಳಿಯುವರು. ಕಿಲುಬಿದ ಪಾತ್ರೆಯಲ್ಲಿ ಬಿದ್ದ ಅಮೃತಮಯ ಕ್ಷೀರವೂ ಸಹ ಕೆಟ್ಟು ದುರ್ಗಂಧವಾಗುವಂತೆ, ಆ ನೀಚರ ದೇಹಪಾತ್ರೆಯನ್ನು ಹೊಕ್ಕ ಸರಸ್ವತಿಯೂ ಭ್ರಷ್ಟತೆಯನ್ನು ಹೊಂದಿ, ತನ್ನನ್ನು ದುಷ್ಪ್ರಥಕ್ಕೆಳೆದು, ದುರ್ನೀತಿಯಲ್ಲಿ ನಡೆಯಿಸಿದ ಆ ನೀಚನು ತಮೋಮಯ ನರಕದಲ್ಲಿ ಬಿದ್ದು ನರಳಲೆಂದು ಶಪಿಸದಿರಲಾರಳು. ಮಹಾನುಭಾವನಾದ ಜಯದೇವನಾದರೋ, ತನ್ನ ವಿನಯ ಸತ್ಯವಾಕ್ಯ ಮೃದುಭಾಷಣ ದಯಾಭಾವ ಮುಂತಾದ ಸದ್ಗುಣಗಳಿಂದ ಪರರಿಗೆ ಉದಾಹರಣ ಸ್ವರೂಪನಾಗಿಯೂ, ತನ್ನ ಆತ್ಮೋದ್ಧಾರಕನಾಗಿಯೂ ಇದ್ದು ಮಹನೀಯನೆನ್ನಿಸಿಕೊಂಡು ಸಕಲರ ಗೌರವ ಆದರಗಳಿಗೂ ಪಾತ್ರನಾಗಿದ್ದನು.

ವಿದ್ಯಾವಂತರಿಗೆ ಲೇಖನಿಯೆಂಬುದೊಂದು ಅಮೌಲ್ಯ ಆಯುಧವು ಶೂರನ ಕೈಯ ಖಡ್ಗವು ಎಂತಹ ಕೆಲಸ ಮಾಡಬಲ್ಲುದೋ ಅಂತಹ ಕೆಲಸವನ್ನೇ ಬರಹಗಾರನ ಲೇಖನಿಯೂ ಮಾಡಬಲ್ಲುದು. ಮಾತ್ರವಲ್ಲ-ಅದಕ್ಕೆ ಸಹಸ್ರಾರುಪಾಲು ಅಧಿಕವಾದ ಕೆಲಸವನ್ನೂ ಮಾಡಬಲ್ಲುದು. ಆ ಶೂರನು ಸಜ್ಜನನೂ ಆಗಿದ್ದರೆ, ಅವನ ಕೈಕತ್ತಿಯು ಹುಲಿಯನ್ನು ಕೊಂದು ಗೋವಿನ ಪ್ರಾಣ ರಕ್ಷಣೆಮಾಡಿ - ದುಷ್ಟರನ್ನು ಮರ್ದಿಸಿ ಶಿಷ್ಟರನ್ನು ಕಾಪಾಡಿ ಹೇಗೆ ಸದ್ಗತಿಗೆ ಸಾಧಕವಾಗಬಹುದೋ, ಹಾಗೆಯೇ ವಿದ್ಯಾವಂತನೂ ಸಜ್ಜನನಾಗಿದ್ದರೆ, ತನ್ನ ಲೇಖನಿಯಿಂದ ಓದುಗರಿಗೆ ಸದ್ಗುಣ ಸನ್ನಡತೆಗಳು ದೇಶಭಕ್ತಿ ದೈವಭಕ್ತಿಗಳು, ಆಸ್ತಿಕತೆ ಆತ್ಮ ಚಿಂತನೆಗಳು, ಶೌರ್ಯ ಧೈರ್ಯೌದಾರ್ಯಾದಿಗಳು ಉಂಟಾಗುವಂತಹ ಸದ್ಭಾವಗಳನ್ನು ಉಂಟುಮಾಡುವ ಬರೆಹವನ್ನು ಬರೆದು ತನ್ಮೂಲಕ ತನ್ನ ಮತ್ತು ಪರರ ಆತ್ಮೋನ್ನತಿಗೆ ಪ್ರಯತ್ನಿಸುವನು. ಆದರೆ ಅವನು ಧೂರ್ತನಾದರೆ, ಅದೇ ವಿದ್ಯೆಯ ಬಲದಿಂದಲೇ ಈ ಲೇಖನಿಯೆಂಬ ಅಸ್ತ್ರಪ್ರಯೋಗಮಾಡಿ, ಎಷ್ಟೋ ಜನರ ಮನೆಯನ್ನು ಮುಳುಗಿಸಲೂ, ಅವರ ಆಸ್ತಿಪಾಸ್ತಿಗಳನ್ನು ಅಪಹರಿಸಲೂ, ಅವರ ಮನಸ್ಸಿನಲ್ಲಿ ಕಾಮ ಕ್ರೋಧಾದಿ ವಿಕಾರಗಳನ್ನು ಹುಟ್ಟಿಸಿ ಹಬ್ಬಿಸಲು ಸಾಧಕವಾದ ದುಷ್ಟ ಬರವಣಿಗೆಗಳನ್ನು ಬರೆಯಲೂ ಪರಸ್ಪರರಲ್ಲಿ ವಿರೋಧ ಭಾವವನ್ನು ಬೆಳೆಯಿಸುವ ಲೇಖನಗಳನ್ನು ಬರೆದು ತನ್ಮೂಲಕ ದ್ವೇಷಾಸೂಯೆಗ

ಳನ್ನು ಲೋಕದಲ್ಲಿ ಹಬ್ಬಿಸಲೂ, ನೀಚವರ್ಣನೆಗಳಿಂದ ಕವನಗಳನ್ನು ಬರೆದು ಜನರಿಗೆ ಚಿತ್ತವಿಕಾರಗಳನ್ನುಂಟು ಮಾಡಲೂ ಕಾರಣನಾಗುವನು. ಜನರ ದೇಹ ಮನಸ್ಸು ಬುದ್ಧಿಗಳನ್ನು ಕೆಡಿಸಲು ಸಹಾಯಕವಾಗುವ-ಅವರಲ್ಲಿ ದ್ವೇಷಾಸೂಯೆಗಳನ್ನು ಪ್ರಬಲಗೊಳಿಸಲು ಕಾರಣವಾಗುವ - ಗ್ರಂಥಗಳನ್ನೂ ಲೇಖನಗಳನ್ನೂ ಬರೆದು ಪ್ರಚುರಗೊಳಿಸುವುದು, ಪ್ಲೇಗು ಕಾಲರಾ ಸಿಡುಬು ಮುಂತಾದ ಪ್ರಜಾ ನಾಶಕರವಾದ ಮಹಾ ವ್ಯಾಧಿಗಳು ಹಬ್ಬಿ ಹರಡಲು ಕಾರಣವಾದಂತೆಯೇ ಮಹಾ ಪಾಪಸಾಧನೆಯಾಗಲಾರದೇ ? ಅಕ್ಕಟಾ! ಮಹಾತಾಯಿ ಸರಸ್ವತಿಯು ಭಗವದ್ಗುಣವರ್ಣನೆಗೆ ಸಾಧಕವಾಗಲೆಂದೂ, ಪರೋಪಕಾರ ಭೂತದಯೆ, ದೇಶಾಭಿವೃದ್ಧಿ ಧರ್ಮಾಭಿವೃದ್ಧಿಗಳಿಗೆ ಸಹಾಯಕವಾಗಲೆಂದೂ, ಪರಮಾನುಗ್ರಹಮಾಡಿ ದಯೆಪಾಲಿಸಿದ ಈ ವಿದ್ಯೆಯೆಂಬ ಪರಮ ಸಾಧನವನ್ನು-ಈ ಲೇಖನಿಯೆಂಬ ನಿಶಿತಾಯುಧವನ್ನು ದುರುಪಯೋಗಪಡಿಸುವ ಮತ್ತು ಭಗವದ್ದತ್ತ ಈ ಸಾಧನವನ್ನು ಭ್ರಷ್ಟಗೊಳಿಸುವ ನೀಚರನ್ನು ಆ ತಾಯಿಯು ಶಪಿಸದಿರುವಳೆ! ಆಕೆಯ ಶಾಪದಿಂದ ಆ ಮದಾಂಧರು ನಾಶವಾಗದಿರುವರೆ ?

ನಮ್ಮ ಕಥಾನಾಯಕನಾದ ಜಯದೇವನಿಗೆ ವಿದ್ಯಾ ಪ್ರೌಢಿಮೆಯೊಂದಿಗೆ ಅಗಾಧ ಕವಿತಾ ಪ್ರೌಢಿಮೆಯೂ ಪ್ರಾಪ್ತವಾಯಿತು. ಸ್ವಾಭಾವಿಕವಾಗಿಯೇ ಭಗವತ್ಪರ ಚಿತ್ತವೃತ್ತಿಯುಳ್ಳವನಾದ ಆ ಪಂಡಿತಾಗ್ರಣಿಯು ತನಗೆ ಒದಗಿದ ಪಾಂಡಿತ್ಯ ಕವಿತಾಪ್ರೌಢಿಮೆ, ಲೇಖನ ಸಾಮರ್ಥ್ಯ, ಈ ಸೌಭಾಗ್ಯಗಳನ್ನು ಶ್ರೀಜಗನ್ನಾಥ ಸ್ವಾಮಿಯ ಸೇವೆಗೇ ವಿನಿಯೋಗಿಸಬೇಕೆಂದು ಸಂಕಲ್ಪಿಸಿ-'ಗೀತಗೋವಿಂದ' ಎಂಬೊಂದು ಅಮೌಲ್ಯ ಪ್ರಬಂಧವನ್ನು ರಚನೆ ಮಾಡಿದನು. ಅದು ಪದ್ಮಪುರಾಣೋಕ್ತವಾದ ರಾಧಾವಿಲಾಸವೆಂಬ ಶ್ರೀ ಕೃಷ್ಣ ಚರಿತ್ರವನ್ನು ಒಳಗೊಂಡಿರುವುದು. ಅಲ್ಲದೆ ಅದರಲ್ಲಿ ಗೋಕುಲದಲ್ಲಿ ನಡೆಯಿಸಿದ ಶ್ರೀ ಕೃಷ್ಣನ ಬಾಲಲೀಲೆಯ ಸಮಗ್ರ ವರ್ಣನೆಯೂ ಬಂದಿರುವುದು. ಮೃದು ಮಧುರವಾದ ಅಮೃತ ರಸವನ್ನು ತೊಟ್ಟಿಕ್ಕಿಸುವಂತಹ ಜಯದೇವ ಕವಿಯ ಸತ್ವಮಯವಾಣಿಯೆಂಬ ಕುಂದಣದಲ್ಲಿ ನರಾವತಾರಿಯಾದ ಪುರುಷೋತ್ತಮನ ಅಗಾಧ ಲೀಲೆಗಳೆಂಬ ರತ್ನಗಳು ಕೆತ್ತಲ್ಪಟ್ಟಿರಲು, ಆ ಗೀತಗೋವಿಂದವೆಂಬ ಗ್ರಂಥಾಭರಣವು

ಸಕಲರ ಕವಿತಪ್ರದೇಶವಲ್ಲೂ ವಿರಾಜಿಸುವ ಅಮೌಲ್ಯ ಭೂಷಣವಾಯಿತೆಂ ಬುದರಲ್ಲಿ ಅತಿಶಯೋಕ್ತಿಯೇನು? ಆ ಗ್ರಂಥದ ರಚನಾಚಮತ್ಕಾರ, ಶಬ್ದ ಸೌಷ್ಟವ, ಅರ್ಥ ಗಾಂಭೀರ್ಯ, ವರ್ಣನಾಲಂಕಾರ ಮುಂತಾದುವುಗಳು ಆ ಕಾಲದ ಪಂಡಿತ ಪಾಮರರೆಲ್ಲರ ಮನಸ್ಸನ್ನೂ ಅಪಹರಿಸಿದುವು. ಸಕ ಲರೂ ಆ ಮನೋಹರ ಗೀತವನ್ನು ಬರೆದುಕೊಂಡೂ ಕಂಠಪಾಠಮಾಡಿ ಯೂ ತಮ್ಮ ತಮ್ಮ ಮನೆಗಳಲ್ಲಿ ಪಾಠಮಾಡಿಕೊಳ್ಳಸಾಗಿದರು. ಕೆಲವು ದಿವಸಗಳಲ್ಲೇ ಆ ಗ್ರಂಥದ ಪ್ರಶಂಸೆಯೂ ಅದರ ಜನಕನಾದ ಜಯದೇವ ಕವಿಶೇಖರನ ಕೀರ್ತಿಯೂ ದೇಶದಲ್ಲೆಲ್ಲ ಹರಡಿದುವು.

ತನ್ನ ಉದರ ಸಂಭೂತನು, ವಿದ್ವಾಂಸನು, ಸಜ್ಜನನು, ಭಗವದ್ಭ ಕ್ತನು, ಕವೀಶ್ವರನು, ಸಾಧುಶಿರೋಮಣಿಯು ಎಂದು ಹತ್ತಿರದೂರದ ಜನಸಮುದಾಯವು ವರ್ಣನೆ ಮಾಡುತ್ತಿದ್ದರೆ ಯಾವ ತಂದೆತಾಯಿಗಳು ತಾನೆ ಕೇಳಿ ಆನಂದಿಸಲಾರರು. ನಾರಾಯಣ ಭಟ್ಟನೂ ಕಮಲಾದೇವಿ ಯೂ ಸ್ವಸ್ಥಳದ ಅನೇಕಾನೇಕ ವಿದ್ವಾಂಸರೂ ಪಂಡಿತರೂ ಸಾಮಾನ್ಯರೂ ತಮ್ಮ ಮಗನ ಕೀರ್ತಿಯನ್ನು ವರ್ಣಿಸುತ್ತಿರುವುದನ್ನು ಕೇಳಿ-'ಪುತ್ರನನ್ನು ಪಡೆದು ಧನ್ಯರಾದೆವು; ನಮ್ಮ ವಂಶವು ಪಾವನವಾಯಿತು. ನಮ್ಮ ಜನ್ಮ ಗಳು ಸಾರ್ಥಕವಾದುವು' ಎಂದು ಪರಮ ಸಂತುಷ್ಟರಾಗಿದ್ದರು.

ಮಕ್ಕಳನ್ನು ಪಡೆದ ತಂದೆ ತಾಯಿಗಳಿಗೆ ತಮ್ಮ ಮಕ್ಕಳು ವಿವಾಹಿತ ರಾಗಿ ಸಂಸಾರ ಮಾಡಿಕೊಂಡಿರುವುದನ್ನು ನೋಡಿ ಆನಂದಿಸಬೇಕೆಂಬ ಅಪೇಕ್ಷೆಯಿರುವುದು ಸ್ವಾಭಾವಿಕವಲ್ಲವೆ? ಕಮಲಾದೇವಿಯೂ ನಾರಾ ಯಣ ಭಟ್ಟನೂ ಹಾಗೆಯೇ ಯುಕ್ತ ವಯಸ್ಕನಾದ ತಮ್ಮ ಪುತ್ರನಿಗೆ ಯೋಗ್ಯಳಾದ ಒಬ್ಬ ಕನ್ನಿಕೆಯನ್ನು ತಂದು ಲಗ್ನಮಾಡಿ, ತಾವಿನ್ನು ವಾನ ಪ್ರಸ್ಥಾಶ್ರಮ ಸ್ವೀಕಾರಮಾಡಿ ತೀರ್ಥಯಾತ್ರೆಗೆ ಹೊರಡಬೇಕೆಂದು ಯೋಚಿಸಿಕೊಂಡಿದ್ದರು. ಜಯದೇವನಿಗೆ ಎಲ್ಲಾದರೂ ಯೋಗ್ಯ ಕನ್ಯೆ ಯನ್ನು ವಿಚಾರಿಸಬೇಕು' ಎಂದುಕೊಂಡು ಅದಕ್ಕಾಗಿ ಹೊರಡುವ ಸನ್ನಾಹ ಮಾಡುತ್ತಿರಲು, ಒಂದಾನೊಂದು ದಿನ ಮಧ್ಯಾಹ್ನ ಕಾಲಕ್ಕೆ ಜಗನ್ನಾಥ ಕ್ಷೇತ್ರವಾಸಿಯಾದ ಒಬ್ಬ ಅಗ್ನಿಹೋತ್ರಿ ಬ್ರಾಹ್ಮಣೋತ್ತಮನು ಅವರ ಮನೆಗೆ ಬಂದು ನಾರಾಯಣ ಭಟ್ಟನನ್ನು ಕಂಡನು. ಭಟ್ಟನು ಆ ಅಭ್ಯಾಗತ

ನನ್ನು ಅತಿಶಯ ಆದರೋಪಚಾರಗಳಿಂದ ಸತ್ಕರಿಸಿ ಭೋಜನ ಮಾಡಿಸಿದನು. ತರುವಾಯ ಸುಖವಾಗಿ ವಿಶ್ರಮಿಸಿಕೊಂಡ ಆ ಬ್ರಾಹ್ಮಣನು, ಭಟ್ಟನನ್ನು ಕುರಿತು— ಮಹಾಶಯ, ನನಗೆ ಬಹುಕಾಲ ಮಕ್ಕಳಿಲ್ಲದಿರಲು ಜಗನ್ನಾಥ ಸ್ವಾಮಿಯನ್ನು ಆರಾಧಿಸಿ ಒಬ್ಬ ಮಗಳನ್ನು ಪಡೆದೆನು. ಆಕೆಯ ಸೌಂದರ್ಯ ಸೌಶೀಲ್ಯಾದಿಗಳಿಗೆ ಮೆಚ್ಚಿ ನಮ್ಮ ಅಗ್ರಹಾರದವರು ಅವಳನ್ನು ಲಕ್ಷ್ಮೀದೇವಿಯೆಂದು ಸಂಬೋಧಿಸುತ್ತಿದ್ದಾರೆ. ನಾನು ಭಗವದ್ಭಕ್ತನೂ. ಲಕ್ಷ್ಮೀಸ್ವರೂಪಳೂ ಆದ ಆಕೆಯನ್ನು ಸ್ವಾಮಿಗೆ ಒಪ್ಪಿಸುವುದೇ ವಿಹಿತವೆಂದು ತಿಳಿದು ಆಕೆಯನ್ನು ಶ್ರೀ ಜಗನ್ನಾಥ ಸ್ವಾಮಿಗೇ ಅರ್ಪಿಸುವೆನಲ್ಲದೆ ಮಾನುಷರಿಗೆ ಆಕೆಯನ್ನಿತ್ತು ಲಗ್ನಮಾಡೆನೆಂದು ಸಂಕಲ್ಪಿಸಿದ್ದೇನೆ. ಆದರೆ ಈವರೆಗೂ ಸ್ವಾಮಿಯ ಅಪ್ಪಣೆಯಾಗದೆ, ಆಕೆಗೆ ವಿವಾಹದ ವಯಸ್ಸು ಮೀರಿ ಹೋಗುತ್ತಾ ಬಂದುದರಿಂದ ವ್ಯಸನಾಕ್ರಾಂತನಾಗಿ, 'ಆ ಕನ್ಯೆಯನ್ನು ಸ್ವೀಕರಿಸಿ ರಕ್ಷಿಸೆಂದು ಸ್ವಾಮಿಗೆ ಮೊರೆಯಿಟ್ಟೆನು. ಆ ದಯಾನಿಧಿಯು ನಿನ್ನೆಯರಾತ್ರಿಯ ಕನಸಿನಲ್ಲಿ-'ಎಲೈ ಭಕ್ತನೇ ನಿನ್ನ ಕೋರಿಕೆಯು ಅರಿಕೆಯಾಯಿತು. ನಾನು ಈಗ ಬೌದ್ಧಾವತಾರವನ್ನೆತ್ತಿರುವೆನಾದುದರಿಂದ ನಿನ್ನ ಕುವರಿಯನ್ನು ವರಿಸಿ ವಿವಾಹವಾಗಲಾರೆನು. ಆದರೆ ವ್ಯಾಸರೂಪಿಯಾದ ನನ್ನ ಅವತಾರವೇ ಜಯದೇವನಾದುದರಿಂದ ನನಗೆಂದು ಸಂಕಲ್ಪಿಸಿದ ಈ ಕನ್ಯೆಯನ್ನು ಆತನಿಗೆ ಕೊಟ್ಟು ಲಗ್ನಮಾಡು. ನನಗೆ ತೃಪ್ತಿಯಾಗುವುದು' ಎಂದು ಆಜ್ಞಾಪಿಸಿದನು. ಆ ಭಗವದ್ವಾಕ್ಯದಲ್ಲ ವಿಶ್ವಾಸವಿಟ್ಟು ತಮ್ಮಲ್ಲಿಗೆ ಬಂದಿದ್ದೇನೆ? ತಮ್ಮ ಪುತ್ರನಿಗೆ ನನ್ನ ಕನ್ಯೆಯನ್ನು ಸ್ವೀಕಾರ ಮಾಡಿ, ನನ್ನನ್ನು ಕೃತಾರ್ಥನನ್ನಾಗಿ ಮಾಡಬೇಕು' ಎಂದು ಪ್ರಾರ್ಥಿಸಿದನು.

ಆ ಬ್ರಾಹ್ಮಣನಾಡಿದ ಮಾತುಗಳನ್ನು ಕೇಳಿ, ನಾರಾಯಣ ಭಟ್ಟ ಕಮಲಾದೇವಿಯರಿಗೆ ಪರಮಾಶ್ಚರ್ಯದೊಂದಿಗೆ ಪರಮಾನಂದವೂ ಉಂಟಾಯಿತೆಂದು ಹೇಳಬೇಕೇನು ? ಒಡನೆ ಸಮ್ಮತಿಸಿದರು. ಜ್ಯೋತಿಷ್ಕರಿಂದ ಘಟಿತಾರ್ಥವನ್ನು ನೋಡಿಸಲು ಮೂವತ್ತಾರು ಗುಣಗಳೂ ಕೂಡಿ ಬಂದು ಸರ್ವೋತ್ತಮ ಸಂಬಂಧವೆಂದು ಸಿದ್ಧವಾಯಿತು. ಒಡನೆ ಅಗ್ನಿಹೋತ್ರಿ ಬ್ರಾಹ್ಮಣನು ಲಗ್ನನಿಶ್ಚಯಮಾಡಿ, ಎಲ್ಲರೊಂದಿಗೆ ಸ್ವಗ್ರಾಮವನ್ನು ಕುರಿತು ಪ್ರಯಾಣಮಾಡಿ, ಜಯದೇವನಿಗೆ ಸಾಲಂಕೃತ ಕನ್ಯಾ

ದಾನ ಮಾಡಿ ವಿಶೇಷ ಉಡಿಗೆರೆ ಉತ್ಸವಾದಿಗಳನ್ನು ಕೊಟ್ಟು ಪೂಜಿಸಿದನು. ಆ ವಿವಾಹದಲ್ಲಿ ಕನ್ಯಾವರರು ಪರಸ್ಪರರ ರೂಪ-ಗುಣ-ಚರ್ಯೆಗಳಿಂದಲೂ ಬಂಧುಗಳು ಉಭಯಸತ್ಕುಲಗಳು ಏಕತ್ರ ಸಮಾಗಮವಾದುದರಿಂದಲೂ ಪ್ರೇಕ್ಷಕರು ಮಹದುತ್ಸವಗಳ ನೋಟದಿಂದಲೂ ಭೂಸುರವರ್ಗವೂ ಅತಿಥಿ ಅಭ್ಯಾಗತರೂ ಮಿಷ್ಟಭೋಜನ ತಾಂಬೂಲ ದಕ್ಷಿಣೆ ದಾನಾದಿಗಳಿಂದಲೂ ಹೀಗೆ ಎಲ್ಲರೂ ಪರಮ ಸಂತುಷ್ಟರಾದರು. ಅನಿರೀಕ್ಷಿತವಾಗಿ ಹೀಗೆ ನೆರವೇರಿದ ತನ್ನ ವಿವಾಹಮಹೋತ್ಸವವು ಮುಗಿದ ತರುವಾಯ ಜಯದೇವನು, ಪತ್ನಿಯೊಂದಿಗೂ, ಮಾತಾಪಿತೃಗಳೊಂದಿಗೂ ಪುನಃ ಹೊರಟು ಬಿಲ್ವಗ್ರಾಮಕ್ಕೆ ಪ್ರಯಾಣವಾಗಿ ನಡೆದನು.



## ಅಧ್ಯಾಯ ೩   " ಅರ್ಥಮನರ್ಥಂ "

ಮಗನೂ ಸೊಸೆಯೂ ಪ್ರಾಪಂಚಿಕ ಪದ್ಧತಿಯನ್ನನುಸರಿಸಿ ಅನ್ಯೋನ್ಯ ಪ್ರೀತಿ ವಿಶ್ವಾಸಗಳಿಂದ ಸಂಸಾರಮಾಡಿಕೊಂಡಿದ್ದುದನ್ನು ನಾರಾಯಣಭಟ್ಟನೂ, ಕಮಲಾಬಾಯಿಯೂ ಕಂಡು ಕಂಡು ಸಂತೋಷಪಟ್ಟು, —"ನಮ್ಮ ಜನ್ಮ ಸಾರ್ಥಕವಾಯಿತು. ವಂಶೋದ್ಧಾರವಾಯಿತು. ಇನ್ನು ನಮ್ಮ ಸದ್ಗತಿಗಾಗಿ ತೀರ್ಥಕ್ಷೇತ್ರಾದಿಗಳ ಯಾತ್ರೆಮಾಡಿ ಆಯುಸ್ಸನ್ನು ಕಳೆಯೋಣ"ವೆಂದುಕೊಂಡು, ಮಗನಿಗೂ ಸೊಸೆಗೂ ಸಮಯೋಚಿತ ಬುದ್ಧಿವಾದಗಳನ್ನು ಹೇಳಿ, ಮನೆಯನ್ನು ಬಿಟ್ಟು ಪ್ರಯಾಣಮಾಡಿದರು. ಜಯದೇವನು ಪ್ರತ್ಯಕ್ಷ ದೇವತಾ ಸ್ವರೂಪಿಗಳೂ ಅತಿಶಯ ಪ್ರೇಮಾಸ್ಪದರೂ ಆಗಿದ್ದ ತನ್ನಾಪ್ರಿಯ ಮಾತಾಪಿತೃಗಳ ಅಗಲಿಕೆಯಿಂದ ಕೆಲವು ಕಾಲ ವ್ಯಸನಾಕ್ರಾಂತನಾಗಿದ್ದು, ಕ್ರಮಕ್ರಮವಾಗಿ ಆ ವ್ಯಸನವನ್ನು ನೀಗಿದನಾದರೂ ಮುಂದೆ ಆತನ ಮನಸ್ಸು ಸಂಸಾರ ಮಗ್ನವಾಗದೆ ವೈರಾಗ್ಯವನ್ನು ಆಶ್ರಯಿಸಿತು. ವೈರಾಗ್ಯವೆಂದಮಾತ್ರಕ್ಕೆ ಸಂಸಾರಯಾತ್ರೆಯ ವಿಷಯದಲ್ಲಿ ಅಸಹ್ಯಭಾವವನ್ನು ಪ್ರಕಟಿಸದೆ, ಅದನ್ನು ಗೃಹಸ್ಥನಾದ ತನ್ನ

ಕರ್ತವ್ಯವೆಂದು ನಿರ್ವಹಿಸುತ್ತಿದ್ದನಾದರೂ, ಆ ವಿಷಯದಲ್ಲೇ ವಿಶೇಷ ಮೋಹಗೊಂಡು ಬದ್ಧನಾಗದೆ, ಜಲದಲ್ಲಿನ ತಾವರೆಯೆಲೆಯಂತೆ ಯಾವುದೊಂದನ್ನೂ ಅಂಟಿಸಿಕೊಳ್ಳದಂತೆ ನಿಸ್ಪೃಹನಾಗಿದ್ದುಬಿಟ್ಟನು. ಮನೆಯಲ್ಲಿ ಅತಿಥಿ ಅಭ್ಯಾಗತರಿಗೆ ಆದರ ಉಪಚಾರಗಳೂ ಶಿಷ್ಯರಿಗೆ ಪಾಠ ಪ್ರವಚನಗಳೂ, ದೀನಾನಾಥರಿಗೆ ಪೋಷಣೆಯೂ ಎಂದಿನಂತೆ ನಡೆಯುತ್ತಿದ್ದುವಾದರೂ, ತಾನುಮಾತ್ರ ಯಾವುದಕ್ಕೂ ಕಾರಣಕರ್ತನಲ್ಲವೆಂಬ ಮನೋಭಾವವು, ದಿನದಿನಕ್ಕೆ ಆತನಲ್ಲಿ ಸ್ಥಿರಗೊಳ್ಳುತ್ತಾ ನಡೆದಿದ್ದಿತು. ಆತನ ಭಾರ್ಯೆಯಾದ *ಪದ್ಮಾವತೀದೇವಿಯು ಸಹಾ, ಮಹಾ ಪತಿವ್ರತೆಯಾದುದರಿಂದ ಪತಿಯ ಚಿತ್ತವೃತ್ತಿಯನ್ನು ತಿಳಿದು ಅದಕ್ಕೆ ಯಾವ ಭಾಗದಲ್ಲಿಯೂ ಪ್ರತಿಬಂಧಕವನ್ನುಂಟುಮಾಡದೆ, ಸಕಲ ವಿಧಗಳಲ್ಲೂ ಭರ್ತನುಸಾರಿಣಿಯಾಗಿದ್ದು, ಆತನ ಮೆಚ್ಚುಗೆಗೆ ಪಾತ್ರಳಾದಳು.

ಪಂಡಿತ ಜಯದೇವನಿಗೆ ದಿನದಿನಕ್ಕೆ ಸಂಸಾರ ವಿಚಾರದ ವ್ಯಾಮೋಹವು ಕಡಮೆಯಾಗುತ್ತ ವೈರಾಗ್ಯಭಾವವು ಮನಸ್ಸನ್ನು ಆಕ್ರಮಿಸುತ್ತಾ ನಡೆಯಿತೆಂದ ಮಾತ್ರಕ್ಕೆ ಸಂಸಾರ ವಿಚಾರದಲ್ಲಿ ಉದಾಶೀನತೆಯು ಉಂಟಾಗಲಿಲ್ಲ. ಲೋಕದ ಸೃಷ್ಟಿ ಸ್ಥಿತಿಲಯ ಕಾರ್ಯಗಳನ್ನು ಪ್ರಭುವು ಲೀಲಾವಿನೋದಿಯಾಗಿ ಮಾಡುವನಾದುದರಿಂದ, ಲೋಕದ ನಿತ್ಯದ ಕಾರ್ಯಕಲಾಪಗಳಲ್ಲಿ ನಮ್ಮ ಪಾಲಿಗೆ ಬಂದ ಕೆಲಸಗಳನ್ನು ನಾವೂ ನಿರ್ವಂಚನೆಯಿಂದಲೂ, ಶ್ರದ್ಧಾಪೂರ್ವಕವಾಗಿಯೂ ನಡೆಯಿಸಿ ಆ ಜಗದೀಶ್ವರನ ಲೀಲೆಯಲ್ಲಿ ಭಾಗಿಗಳಾಗಿ ಜಗನ್ನಾಟಕವನ್ನು ಸಾಗಿಸಬೇಕೆಂದು ಭಾವಿಸಿ ಆತನು ಸದಾ ಸಂತೋಷಚಿತ್ತನಾಗಿ, ಸರ್ವ ಕಾರ್ಯಗಳನ್ನೂ ಭಗವತ್ಸೇವೆಯೆಂಬ ಮನೋಭಾವದಿಂದಲೇ ನೆರವೇರಿಸುತ್ತಿದ್ದನು. ಭಗವದ್ಗುಣವರ್ಣನೆಯ ದಿವ್ಯಗೀತಗಳನ್ನು ರಚಿಸಿ ಮೃದುಮಧುರ ಕಂಠಸ್ವರದಿಂದ ಪಾಡಿ ಆನಂದಿಸುವನು. ದಿನದಿನಕ್ಕೆ ಭಕ್ತಿ ಭಾಗ್ಯವು ಆತನ ಹೃದಯದಲ್ಲಿ ಮನೆಮಾಡಿಕೊಂಡಿತು.

---

*ಮಂಗಳ ಸ್ವರೂಪಿಣಿಯಾದುದರಿಂದ ಎಲ್ಲರೂ ಆಕೆಯನ್ನು ಮಹಾಲಕ್ಷ್ಮಿಯಂತೆ ಕಾಣುತ್ತಿದ್ದರು ಮಾತ್ರ! ಆಕೆಯ ನಿಜವಾದ ನಾಮಧೇಯವು ಪದ್ಮಾವತೀದೇವಿಯೆಂದು ತಿಳಿಯಬೇಕು.

ಪಂಡಿತಕವಿ ಜಯದೇವನು, ಶ್ರೀ ಜಗನ್ನಾಥಸ್ವಾಮಿಯ ಪದ ಕಮಲಗಳಲ್ಲಿ ಅನನ್ಯ ಭಕ್ತಿಭಾವದಿಂದ ನಡೆದುಕೊಳ್ಳುತ್ತಿದ್ದುದೂ, ಆತನಲ್ಲಿ ಹುಟ್ಟಿ ಅಭಿವೃದ್ಧಿಯಾಗುತ್ತಿದ್ದ ಭಕ್ತಿ ಜ್ಞಾನ ವೈರಾಗ್ಯ ಭಾಗ್ಯಗಳು ಭಗವದನುಗ್ರಹಕ್ಕೆ ಅತನನ್ನು ಪಾತ್ರನನ್ನಾಗಿ ಮಾಡಿದುದೂ, ಆ ಕಾಲದಲ್ಲಿ ನಡೆಯಿತೆಂದು ಹೇಳುವ ಒಂದು ಕಥೆಯಿಂದ ವಿಶೇಷ ಸ್ಪಷ್ಟರೀತಿಯಿಂದ ವ್ಯಕ್ತವಾಗುತ್ತಿದೆ. "ಜಗನ್ನಾಥದಲ್ಲಿ ಆ ಉತ್ಕಲದೇಶಕ್ಕೆ ಅರಸನಾದ ಸಾತ್ವಿಕನೆಂಬೊಬ್ಬ ರಾಜನು, ವಿಶೇಷ ಪಾಂಡಿತ್ಯ ಸಂಪಾದನೆಮಾಡಿದ್ದನಂತೆ! ಆತನು ಜಯದೇವನ ಗೀತಗೋವಿಂದ ಗ್ರಂಥಕ್ಕೆ ಪಂಡಿತ ಮಂಡಲಿಯಿಂದಲೂ, ಪ್ರಜಾಸಮುದಾಯದಿಂದಲೂ ದೊರೆತ ಮನ್ನಣೆಯನ್ನು ಕಂಡು ಅಸೂಯೆಪಟ್ಟು,-"ಆತನಂತೆಯೇ ನಾನೂ ಏಕೆ ಪ್ರಶಂಸೆಗೆ ಪಾತ್ರನಾಗಬಾರದು, ಏಕೆ ಕೀರ್ತಿಯನ್ನು ಹೊಂದಬಾರದು? ಬಡವನಾದ ಜಯದೇವನೇ, ಮಹಾಕವಿಯೆಂಬ ಪ್ರಖ್ಯಾತಿಗೆ ಪಾತ್ರನಾಗಿರುವಲ್ಲಿ-ಆತನಂತೆಯೇ ಪಂಡಿತನೂ ಕವಿಯೂ ರಾಜನೂ ಆದ ನನ್ನ ಗ್ರಂಥಕ್ಕೂ ಮರ್ಯಾದೆ ದೊರೆಯಲಾರದೆ" ಎಂದುಕೊಂಡು ಗೀತಗೋವಿಂದದಂತಹ ಮತ್ತೊಂದು ಗ್ರಂಥವನ್ನು ರಚನೆಮಾಡಿ, ಕಾಶೀ, ನವದ್ವೀಪ, ದ್ವಾರಕಾ, ಬೃಂದಾವನ, ಹರಿದ್ವಾರ ಮುಂತಾದ ಹತ್ತಿರದ ದೂರದ ಹಲವುಮಂದಿ ಪಂಡಿತರ ಬಳಿಗೆ ಅದರ ಪ್ರತಿಗಳನ್ನು ಕಳುಹಿಸಿ, ಅದನ್ನು ಪಠಿಸಿ, ಜನಗಳಲ್ಲಿ ಅದಕ್ಕೆ ವಿಶೇಷ ಪ್ರಚಾರವನ್ನುಂಟುಮಾಡಿರೆಂದು ಸಂದೇಶವನ್ನೂ ಕಳುಹಿಸಿದನು. ವಿದ್ವಾಂಸರು, ಸಾತ್ವಿಕರಾಜನ ಆ ಗ್ರಂಥವು ಯಾವ ಭಾಗದಲ್ಲೂ ಗೀತಗೋವಿಂದದೊಂದಿಗೆ ಸರಿತೂಗಲಾರದುದನ್ನು ಕಂಡುಹಿಡಿದು ಅದನ್ನು ಗಮನಿಸದೆಯೇ ಇದ್ದುಬಿಟ್ಟರು. ಆಗ ರಾಜನು, ತನ್ನ ಗ್ರಂಥಕ್ಕೆ ಪ್ರಾಶಸ್ತ್ಯವನ್ನು ಕೊಡದಿದ್ದ ಕಾರಣವೇನು ಎಂದು ವಿಚಾರ ನಡೆಸಿದನು. ಆಗ ಆ ವಿದ್ವಾಂಸರು - 'ಅಯ್ಯಾ ರಾಜನೇ, ನಾವು ಕೇವಲ ಗುಣಗ್ರಹಣ ಮಾಡತಕ್ಕವರಲ್ಲದೆ, ಮುಖ ದಾಕ್ಷಿಣ್ಯಕ್ಕೆ ಬದ್ಧರಾಗಲು ಸಾಧ್ಯವಿಲ್ಲ. ನಿನ್ನಿಂದ ರಚಿತವಾದ ಈ ಗ್ರಂಥವು, ಜಯದೇವನ ಕವಿತೆಗೆ ಸಮಾನವಾಗಲಾರದು. ಲೋಕದಲ್ಲಿ ಅವರವರು ಮಾಡಿದ ಕೆಲಸವು ಅವರವರಿಗೆ ಮೆಚ್ಚಿಕೆಯಾಗುವುದು ಸಹಜ. ಹಾಗೆಯೇ ನಿನ್ನ ಕವಿತಾ ರಚನೆಯೂ ನಿನಗೆ

ಪ್ರಿಯವಾಗಿರುವುದು ಸ್ವಾಭಾವಿಕವು. ಆದರೆ, ಒಂದು ವಸ್ತುವಿನ ಗುಣಾವಗುಣಗಳನ್ನು ಪರರು ವಿಮರ್ಶಿಸಿ ಅಭಿಪ್ರಾಯಗಳನ್ನು ಕೊಡುವುದರ ಮೂಲಕ ಅದರ ಉತ್ತಮಾಧಮ ಸ್ಥಿತಿಗಳನ್ನು ನಿರ್ಧರಿಸಬೇಕಲ್ಲದೆ, ಅದರ ಗುಣವನ್ನು ನಾವೇ ಹೊಗಳಿಕೊಳ್ಳುವುದರಿಂದಲ್ಲ. - ಅಥವ ರಾಜಾಜ್ಞೆಯಿಂದ ಒಂದು ಗ್ರಂಥಪಠನೆಯನ್ನು ಜನಗಳಮೇಲೆ ಹೊರಿಸುವುದೂ ಯೋಗ್ಯವಲ್ಲ" ಎಂದು ನಿರ್ದಾಕ್ಷಿಣ್ಯದಿಂದ ಹೇಳಿಬಿಟ್ಟರು. ಆಗ ರಾಜನು-'ಎಲೈ ಪಂಡಿತರೆ, ಜಯದೇವನು ಭಗವದ್ಗುಣ ವರ್ಣನೆಯನ್ನು ಮಾಡಿ ಗ್ರಂಥವನ್ನು ರಚಿಸಿರುವಂತೆಯೇ ನಾನೂ ರಚಿಸಿದ್ದೇನೆ. ಈ ಎರಡರಲ್ಲಿ ಯಾವುದು ಹರಿಗೆ ಸಮ್ಮತವಾದುದು ಎಂಬುದನ್ನು ನಿರ್ಧರಿಸೋಣ. ನಮ್ಮಿಬ್ಬರ ಗ್ರಂಥಗಳನ್ನೂ ಒಂದು ರಾತ್ರಿ ಜಗನ್ನಾಥಸ್ವಾಮಿಯ ಸನ್ನಿಧಿಯಲ್ಲಿ ಇಟ್ಟಿರೋಣ! ಅವುಗಳಲ್ಲಿ ಭಗವತ್ಕೃಪೆಗೆ ಪಾತ್ರವಾದುದನ್ನು ಸ್ವಾಮಿಯು ತನ್ನ ಸಮೀಪದಲ್ಲೇ ಇರಿಸಿಕೊಂಡು ಮತ್ತೊಂದನ್ನು ಹೊರಕ್ಕೆ ಬಿಸಾಡಲಿ! ಅದರಿಂದ ಒಂದೊಂದರ ಗುಣವೂ ಯೋಗ್ಯತೆಯೂ ಗೊತ್ತಾಗುತ್ತದೆ' ಎಂದನು. ಅದು ಪಂಡಿತರಿಗೂ ಯುಕ್ತವೆಂದು ತೋರಿತು, ಮಾರನೆಯ ದಿನವೇ ಇಬ್ಬರ ಗ್ರಂಥಗಳನ್ನೂ ಒಯ್ದು ಸ್ವಾಮಿಯ ಸನ್ನಿಧಿಯಲ್ಲಿಟ್ಟು, ಈ ಎರಡರಲ್ಲಿ ಯಾವುದು ಹರಿಗೆ ಪ್ರಿಯವಾದುದೋ ಅದು ನಿರ್ಧರವಾಗಲಿ ಎಂದು ಸ್ವಾಮಿಯನ್ನು ಪ್ರಾರ್ಥಿಸಿಕೊಂಡು, ದೇವಾಲಯದ ಬಾಗಿಲುಗಳನ್ನು ಬೀಗ ಮುದ್ರೆಗಳಿಂದ ಭದ್ರಗೊಳಿಸಿ ಎಲ್ಲರೂ ಅವರವರ ಮನೆಗಳಿಗೆ ನಡೆದರು. ಆಶ್ಚರ್ಯವಾಶ್ಚರ್ಯವು! ಮಾರನೆಯ ಪ್ರಾತಃಕಾಲ ಎಲ್ಲರೂ ದೇವಾಲಯಕ್ಕೆ ಬಂದು ನೋಡುವವೇಳೆಗೆ, ರಾಜನ ಗ್ರಂಥವು, ಮಹಾದ್ವಾರದ ಬಳಿ ಬಂದು ಬಿದ್ದಿದ್ದಿತು. ಜಯದೇವನ ಕವಿತಾ ಗ್ರಂಥವು ಎಂದಿನಂತೆ ಸ್ವಾಮಿಯ ಬಳಿಯಲ್ಲೇ ಇದ್ದಿತು. ತನ್ನ ಗ್ರಂಥವು ಹೀಗೆ ವ್ಯರ್ಥವಾದುದು ರಾಜನಿಗೆ ಮಹಾ ವ್ಯಥೆಯನ್ನುಂಟುಮಾಡಿತು. ರಾಜನು ಸ್ವಾಮಿ ಸನ್ನಿಧಿಯಲ್ಲಿ ನಿಂತು,-'ಮಹಾಪ್ರಭೋ, ನೀನು ಪತಿತಪಾವನನೆಂದೂ ಭಕ್ತವತ್ಸಲನೆಂದೂ ಈವರೆಗೆ ತಿಳಿದಿದ್ದೆನು. ಏನು ? ಪಕ್ಷಪಾತವು ನಿನ್ನಲ್ಲೂ ಉಂಟಾಗಲು ಅವಕಾಶವೊದಗಿದೆ. ಸರ್ವ ವಸ್ತುಗಳಲ್ಲೂ ಸಮಾನ ರೀತಿಯಿಂದ ನೆಲೆಸಿರುವ ಸರ್ವೋತ್ತಮ ವಸ್ತುವಾದ ನೀನು, ಒಬ್ಬರನ್ನು

ಭೂಷಿಸಿ-ಮತ್ತೊಬ್ಬರನ್ನು ದೂಷಣೆಗೆ ಗುರಿಮಾಡುವುದು ನ್ಯಾಯವೆ? ಈಗ ಜಯದೇವನ ಕವಿತೆಯನ್ನು ಪುರಸ್ಕರಿಸಿ ನನ್ನ ಗ್ರಂಥವನ್ನು ತಿರಸ್ಕರಿಸಿ ದುದರ ಅರ್ಥವೇನು? ಇಬ್ಬರಿಗೂ ಗ್ರಂಥರಚನೆ ಮಾಡಬೇಕೆಂದು ಪ್ರೇರಣೆಯನ್ನುಂಟುಮಾಡಿದವನು ನೀನೇ ಅಲ್ಲವೆ? ಆತನಿಂದ ಹಾಗೆ ನುಡಿಸಿರುವೆ, ನನ್ನಿಂದ ಹೀಗೆ ನುಡಿಸಿರುವೆ? ಈಗ ಅದು ಉತ್ತಮವೆಂದು ನಿನ್ನಬಳಿಯಲ್ಲಿಟ್ಟುಕೊಂಡು ಅದಕ್ಕೆ ಗೌರವವನ್ನುಂಟುಮಾಡಿ, ನನ್ನದನ್ನು ದೂರಬಿಸಾಡಿ, ಅದು ನೀಚವಾದುದು ಎಂಬ ಅಪಕೀರ್ತಿವಾರ್ತೆಯು ಜನಗಳಲ್ಲಿ ಹುಟ್ಟಿ ಹಬ್ಬಲು ಅವಕಾಶವನ್ನು ಕಲ್ಪಿಸಿದೆಯಲ್ಲವೆ? ನಿನ್ನ ಸನ್ನಿಧಿಯಲ್ಲೂ ಇಂತಹ ಅನ್ಯಾಯ ನಡೆಯಬಹುದೆ? ಛೆ, ನನ್ನ ಜನ್ಮವು ವ್ಯರ್ಥವಾಯಿತು. ದಯಾಮಯನಾದ ಭಗವಂತನೇ ನನ್ನನ್ನು ನಿರಾಕರಿಸಿದಮೇಲೆ ನಾನಿನ್ನು ಯಾವ ಪುರುಷಾರ್ಥ ಸಾಧನೆಗಾಗಿ ಈ ಲೋಕದಲ್ಲಿ ಜೀವಿಸಿರಲಿ? ಇನ್ನು ಸಾಕು. ಈ ಪ್ರಾಣವೂ, ಭಗವಂತನ ಅಡಿದಾವರೆಗೇ ಸಮರ್ಪಿತವಾಗಲಿ?" ಎಂದು ಹಟತೊಟ್ಟು ಪ್ರಾಯೋಪವೇಶಕ್ಕೆ ಸಿದ್ಧನಾಗಿ ಸ್ವಾಮಿ ಸನ್ನಿಧಿಯಲ್ಲಿ ಕುಳಿತುಬಿಟ್ಟನು. ಹೀಗೆ ಪ್ರಾಯೋಪವೇಶಮಾಡಿ ಪ್ರಾಣತ್ಯಾಗಕ್ಕೆ ಸಿದ್ಧನಾಗಿ ಕುಳಿತ ರಾಜನನ್ನು ನೋಡಿ, ಸ್ವಾಮಿಯು ಕನಿಕರದಿಂದ-'ಅಯ್ಯಾ ಯೋಚಿಸಬೇಡ. ನಿನ್ನ ಗ್ರಂಥಕ್ಕೂ ಪ್ರಾಶಸ್ತ್ಯವನ್ನುಂಟುಮಾಡುತ್ತೇನೆ' ಎಂದು ಆತನ ಗ್ರಂಥದಿಂದ ಇಪ್ಪತ್ನಾಲ್ಕು ಉತ್ತಮ ಶ್ಲೋಕಗಳನ್ನು ಎತ್ತಿ, ಜಯದೇವನ ಗ್ರಂಥದೊಂದಿಗೆ ಸೇರಿಸಿ, ಆ ಮೂಲಕ ಅನುಗ್ರಹಿಸಿದನಂತೆ! ಅದರಿಂದ ರಾಜನಿಗೂ ಎಷ್ಟೋಮಟ್ಟಿಗೆ ಸಮಾಧಾನವುಂಟಾಗಿ ಪ್ರಾಯೋಪವೇಶವನ್ನು ನಿಲ್ಲಿಸಿ ಜೀವಿಸಿದನು. ಪರಮಾತ್ಮನಿಂದಲೇ ಸ್ವೀಕೃತವಾದುದೆಂಬ ಪ್ರಾಶಸ್ತ್ಯವೂ ಪ್ರಾಪ್ತವಾದಮೇಲೆ, ಮೊದಲೇ ಪಂಡಿತ ಮಂಡಲಿಯಿಂದ ಪರಿಗೃಹೀತವಾಗಿ ಜನಮೆಚ್ಚುಗೆಗೆ ಪಾತ್ರವಾಗಿದ್ದ ಆ ಗ್ರಂಥಕ್ಕೆ ಈಗ ಚಿನ್ನಕ್ಕೆ ಪುಟವಿಟ್ಟಂತೆ ಆಯಿತು. ಜನಗಳು ಮತ್ತೂ ಹೆಚ್ಚು ರೀತಿಯಿಂದ ಅದನ್ನು ಪಾಠಮಾಡುತ್ತ, ಪರಮಾನಂದದಿಂದ ಅದರ ಗೀತಗಳನ್ನು ಗಾನಮಾಡಿಕೊಳ್ಳುತ್ತ, ಅದರ ಕರ್ತೃವಾದ ಜಯದೇವ ಕವಿಯ ಕೀರ್ತಿಯನ್ನು ಹೊಗಳುತ್ತಾ ಇದ್ದರು. ಜಗನ್ನಾಥಸ್ವಾಮಿಯು ಹೀಗೆ

ಸಾಕ್ಷಾತ್ತಾಗಿ ಜಯದೇವನ ಕವಿತೆಯನ್ನು ಅಂಗೀಕರಿಸಿದನೆಂದು ಈ ಕಥೆಯು ಹೇಳುತ್ತದೆ.

ಇಷ್ಟುಮಟ್ಟಿಗೆ ತನಗೂ ತನ್ನ ಗ್ರಂಥಕ್ಕೂ ಭಗವತ್ಕಟಾಕ್ಷವೊದಗಿದುದನ್ನು ಕಂಡು, ಜಯದೇವಕವಿಯು ಮುಂದೆ ಕಂದುಬಿಲ್ವಾ ಗ್ರಾಮವನ್ನು ಬಿಟ್ಟು ಜಗನ್ನಾಥದಲ್ಲೇ ಬಂದು ನೆಲೆಸಿ, ಸರ್ವದಾ ಸ್ವಾಮಿ ಸೇವೆಯಲ್ಲೇ ಕಾಲ ಕಳೆಯಸಾಗಿದನು. ಭಗವದ್ಗುಣಗಳನ್ನು ವಿವಿಧ ರೀತಿಗಳಿಂದ ವರ್ಣನೆಮಾಡುವ ದಿವ್ಯ ಕವಿತೆಗಳನ್ನು ರಚಿಸಿ, ಸುಮನೋಹರವಾದ ತನ್ನ ಮಧುರ ಕಂಠಸ್ವರದಿಂದ ಅದನ್ನು ಸ್ವಾಮಿ ಸನ್ನಿಧಿಯಲ್ಲಿ ಹಾಡಿಕೊಂಡು ಭಕ್ತಿ ಪರವಶನಾಗಿ ನರ್ತನಮಾಡುವನು. ಗಾನ ಮಾಡುತ್ತ ಮಾಡುತ್ತ ದೇಹದಮೇಲೆ ಮಾನಾಪಮಾನಗಳೆಂಬ ಭಾವವು ಸಂಪೂರ್ಣ ಮುಚ್ಚಿಹೋಗಿ, ಭಗವದ್ಭಜನೆಯಲ್ಲಿ ತಲ್ಲೀನನಾಗಿಬಿಡುವನು. ಆನಂದಬಾಷ್ಪವು ಕಣ್ಣುಗಳಿಂದ ಧಾರಾಳವಾಗಿ ಸುರಿದುಹೋಗುವುದು. ದೇಹವು ಪುಳಕಾಂಕಿತವಾಗುವುದು. ಕಣ್ಣುಗಳು ಮುಚ್ಚಿಹೋಗಿ ಬಾಹ್ಯ ದೃಷ್ಟಿಯೂ ಬಾಹ್ಯಜ್ಞಾನವೂ ಶೂನ್ಯವಾಗಿ ಆ ಭಕ್ತಶ್ರೇಷ್ಠನು ಎಷ್ಟೋ ಹೊತ್ತಿನವರೆಗೆ ಆ ಆನಂದಾಮೃತ ಶರಧಿಯಲ್ಲಿ ಮಗ್ನನಾಗಿದ್ದುಬಿಡುವನು.

ಜಯದೇವನು ಭಕ್ತಶಿರೋಮಣಿಯೆಂದೂ, ಕವಿತಿಲಕನೆಂದೂ, ಸಾಧುವರ್ಯನೆಂದೂ ಜನಗಳು ಬಹು ಒಗೆಯಿಂದ ಆತನನ್ನು ಹೊಗಳಿ ಗೌರವಿಸಲು ಆರಂಭವಾಯಿತು. ಹಲವುಮಂದಿ ಶ್ರದ್ಧಾವಂತರು ಆತನನ್ನು ಆಶ್ರಯಿಸಿ ತನ್ಮೂಲಕ ಭಗವದನುಗ್ರಹಕ್ಕೆ ಪಾತ್ರರಾಗಬೇಕೆಂದು ಇಚ್ಛಿಸಿದರು. ಜಯದೇವನು ಆ ಕಂದುಬಿಲ್ವಾ ಗ್ರಾಮದಿಂದ ಜಗನ್ನಾಥಕ್ಕೆ ಹೊರಟುಬಂದ ತರುವಾಯ, ತನ್ನ ಜನ್ಮಸ್ಥಳವಾದ ಆ ಗ್ರಾಮದ ವಿಚಾರವೇ ಇಲ್ಲದೆ, ಜಗನ್ನಾಥದಲ್ಲಿ ಸ್ವಾಮಿ ಸನ್ನಿಧಿಯಲ್ಲೇ ಇದ್ದುಬಿಟ್ಟನಷ್ಟೆ ! ಅತ್ತ, ಆ ಗ್ರಾಮದಲ್ಲಿದ್ದ ಆಸ್ತಿಕರನೇಕರಿಗೆ, ಭಕ್ತ ಶ್ರೇಷ್ಠನಾದ ಆತನು ತಮ್ಮ ಗ್ರಾಮದಿಂದ ಹೊರಟುಹೋದನಲ್ಲಾ, ಆತನನ್ನು ಹೇಗಾದರೂಮಾಡಿ ಪುನಃ ಕರೆದುಕೊಂಡು ಬಂದು ಇಟ್ಟುಕೊಂಡು ತನ್ಮೂಲಕ ತಮ್ಮ ಸದ್ಗತಿ ಸಾಧನೆಗೆ ಅವಕಾಶ ಕಲ್ಪಿಸಿಕೊಳ್ಳಬೇಕೆಂಬ ಅಪೇಕ್ಷೆಯು ತಲೆದೋರಿತು. ಒಡನೆ, ಹಿರಿಯರ ಕಾಲದಿಂದಲೂ, ಜಯದೇವನ ವಂಶದವರ ವಿಷಯದಲ್ಲಿ ಭಕ್ತಿ

ವಿಶ್ವಾಸಗಳನ್ನಿಟ್ಟುಕೊಂಡು ಅವರನ್ನೇ ತನ್ನ ಗುರುಗಳೆಂದು ನಂಬಿಕೊಂಡಿದ್ದ ಕಂದುಬಿಲ್ವ ಗ್ರಾಮದ ಭಗವಾನ್‌ದಾಸನೆಂಬ ಸಾಹುಕಾರನೊಬ್ಬನು, ಜಗನ್ನಾಥಕ್ಕೆ ಬಂದು ಜಯದೇವನನ್ನು ಕಂಡು-'ಮಹಾಸ್ವಾಮಿ ನಮ್ಮ ಮೇಲೆ ಏಕಿಷ್ಟು ನಿರ್ದಯಮಾಡಿರಿ ? ಭಗವಂತನ ಸನ್ನಿಧಾನದಲ್ಲಿದ್ದು ನೀವು ಮಾತ್ರವೇ ಮುಕ್ತಿಸಾಧನೆಮಾಡಿಕೊಳ್ಳುತ್ತಿದ್ದರೆ, ಪಾಮರರಾದ ನಮ್ಮ ಗತಿಯೇನು ? ನಮ್ಮನ್ನು ಕೇಳುವರಾರು ? ದಯೆಮಾಡಿ ನಮ್ಮೊಂದಿಗೆ ಗ್ರಾಮಕ್ಕೆ ಬಿಜಮಾಡಿಸಿ, ಅಲ್ಲೂ ನಾಲ್ಕು ದಿನಗಳಿದ್ದು, ತಮ್ಮ ಬೋಧನೆಗಳಿಂದ ನಮ್ಮ ಅಂತಸ್ತಾಪಗಳನ್ನು ತೊಲಗಿಸಿ ತರುವಾಯ ಪುನಃ ಹೊರಟುಬರುವಷ್ಟು ಕೃಪೆಮಾಡಬೇಕು" ಎಂದು ಪ್ರಾರ್ಥಿಸಿಕೊಂಡನು. ಜಯದೇವನೂ ಆ ಪ್ರಾರ್ಥನೆಯನ್ನು ಲಾಲಿಸಿ, ಹಾಗೆಯೇ ಆಗಲೆಂದು ಅಂಗೀಕರಿಸಿ ಆತನೊಂದಿಗೆ ಪ್ರಯಾಣಮಾಡಿದನು.

ಮಹಾಭಗವದ್ಭಕ್ತನೆಂದೂ, ಕವಿಶೇಖರನೆಂದೂ, ಸಾಧುಶಿರೋಮಣಿಯೆಂಗೂ ಪ್ರಖ್ಯಾತನಾದ ಜಯದೇವನು ಪುನಃ ತಮ್ಮ ಗ್ರಾಮಕ್ಕೆ ಬಂದುದಕ್ಕಾಗಿ ಆ ಗ್ರಾಮಸ್ಥರೆಲ್ಲರೂ ಪರಮಾನಂದದಿಂದ ಎದುರುಗೊಂಡು, ಗ್ರಾಮವನ್ನು ತಳಿರು ತೋರಣ ಚಪ್ಪರ ಪತಾಕೆಗಳಿಂದ ಸಿಂಗರಿಸಿ, ಆತನನ್ನು ಉನ್ನತಾಸನದಲ್ಲಿ ಕೂರಿಸಿ, ಆತನ ಗುಣವರ್ಣನೆಮಾಡಿ ಗೌರವಿಸಿದರು. ಭಗವಾನ್‌ದಾಸನು, ಜಯದೇವನನ್ನು ತನ್ನ ಭವ್ಯವಾದ ಮನೆಯಲ್ಲೇ ಇಟ್ಟುಕೊಂಡು, ನಿತ್ಯವೂ ಆತನ ಭಜನೆಗೂ, ಧರ್ಮಸಂಬಂಧ ಪ್ರಸಂಗಗಳಿಗೂ ಕೀರ್ತನಾದಿಗಳಿಗೂ ಅವಕಾಶವನ್ನುಂಟುಮಾಡಿಕೊಟ್ಟನು. ಪ್ರತಿದಿನವೂ, ನೂರಾರು ಜನರು ನೆರೆಯುವರು. ಜಯದೇವನು ತನ್ನ ಸ್ಪಷ್ಟವಾದ ಸುಮನೋಹರವಾದ ಕಂಠಸ್ವರದಿಂದ ಸ್ವಾಮಿಯ ಕಲ್ಯಾಣ ಗುಣಗಳನ್ನು ಗಾನಮಾಡುತ್ತಿರಲು ಸಭೆಯಲ್ಲಿದ್ದವರು ಚಿತ್ರಪ್ರತಿಮೆಗಳಂತಾಗಿ, ಪರಮಾನಂದಮಗ್ನರಾಗುವರು. ಚಿಕ್ಕ ಮಗುವಾಗಿದ್ದಾಗಿನಿಂದಲೂ ತಮ್ಮ ಗ್ರಾಮದಲ್ಲೇ ನೋಡುತ್ತಿದ್ದ ತಮ್ಮ ನಾರಾಯಣಭಟ್ಟನ ಮಗನು, ಇಂತಹ ಭಕ್ತಶ್ರೇಷ್ಠನೂ ಪಂಡಿತಾಗ್ರೇಸರನೂ ಆದುದು ಅವರೆಲ್ಲರಿಗೂ ಪರಮಸಂಭ್ರಮದಾಯಕವಾಗಿದ್ದಿತು. ಭಗವಾನ್‌ದಾಸನು ಹೀಗೆ ತನ್ನ ಗುರುವನ್ನು ಸುಮಾರು ಹದಿನೈದು ಇಪ್ಪತ್ತು ದಿನಗಳವರೆಗೆ ಇಟ್ಟುಕೊಂಡು,

ಆದರಿಸಿ ಸೇವಿಸಿ ಗೌರವಿಸಿದನು. ತರುವಾಯ ಜಯದೇವನು,-' ಸ್ವಾಮಿ ಸನ್ನಿಧಿಯನ್ನು ಬಿಟ್ಟು ಬಂದು ಬಹುದಿನಗಳಾದುವು. ಇನ್ನು ಹೋಗಬೇಕು' ಎನ್ನಲು, ಭಗದ್ದಾಸನು ಅದಕ್ಕೆ ಪ್ರತಿಹೇಳಲಾರದೆ, ಆ ದಿನ ತನ್ನಾಗು ರುವನ್ನು ಅರ್ಘ್ಯಪಾದ್ಯಾಚಮನಾದಿ ಷೋಡಶೋಪಚಾರಗಳಿಂದ ಸೇವಿಸಿ ಫಲ ಪುಷ್ಪಾದಿಗಳನ್ನು ಸಮರ್ಪಿಸಿ, ಕುಟುಂಬ ಸಮೇತನಾಗಿ ದೀರ್ಘ ದಂಡ ನಮಸ್ಕಾರಮಾಡಿ ಆಶೀರ್ವಾದ ಪಡೆದನು. ಗ್ರಾಮಸ್ಥ ಆಸ್ತಿಕರನೇಕರು ಬಂದು ನೆರೆದು ಅವರ ಆ ಅಮೃತಮಯ ಬೋಧನೆಗಳನ್ನು ಆಲಿಸಿ, ಆಶೀ ರ್ವಾದ ಪಡೆದರು. ಭಗವದ್ದಾಸನು ತನ್ನ ಜನ್ಮದಲ್ಲಿ ಅವಿಚ್ಛಿನ್ನನಾಗಿ ಹದಿ ನೈದು ದಿನಗಳಷ್ಟು ಕಾಲವಾದರೂ, ಮಹಾ ಸಾಧುಗಳಾದ ಅವರ ಸಹವಾಸ ವು ದೊರೆಯಿತಲ್ಲಾ ಎಂದು ಪರಮಸಂತುಷ್ಟನಾದನು.-' ತನ್ನ ಶ್ರದ್ಧಾ ಭಕ್ತಿಗಳನ್ನು ಯಾವರೀತಿ ಗುರುಗಳಿಗೆ ತೋರಿಸಲಿ! ಅವರು ಅಲ್ಲಿಂದ ಇಲ್ಲಿ ಗೆಬಂದು, ಪರಮಾನುಗ್ರಹಮಾಡಿ ದಿವ್ಯ ಬೋಧನೆಗಳಿಂದ ಅಜ್ಞಾನವೆಂಬ ತಿಮಿರವನ್ನು ಹೋಗಲಾಡಿಸಿದ ಮಹೋಪಕಾರದ ಹೊರೆಯನ್ನು ಯಾವ ಕಾಣಿಕೆಯನ್ನು ಸಮರ್ಪಿಸಿ ತೀರಿಸಿಕೊಳ್ಳಲಿ' ಎಂದು ಹಂಬಲಿಸಿ ಹಂಬಲಿ ಸಿ, ಕೊನೆಗೆ ಅದಕ್ಕೊಂದು ಉಪಾಯವನ್ನು ಕಂಡುಹಿಡಿದನು.-' ನಾನು ದ್ರವ್ಯವಸ್ತ್ರ ಭೂಷಣಾದಿ ಯಾವ ಕಾಣಿಕೆಯನ್ನು ಸಮರ್ಪಿಸಿದರೂ, ಪರಮ ನಿಸ್ಪೃಹರಾದ ಇವರು ಅದನ್ನು ಗ್ರಹಿಸುವುದಿಲ್ಲ. ಆದುದರಿಂದ ಅದು ಹೇ ಗಾದರೂ, ಗುರುಪತ್ನಿಯಾದ-ನಮ್ಮ ಮಾತೆ ಪದ್ಮಾವತೀದೇವಿಗಾದರೂ ಸಮರ್ಪಣೆಯಾಗುವಂತೆ ಅನುವುಗೊಳಿಸಬೇಕೆಂದು ತನ್ನ ಮನಸ್ಸಿನಲ್ಲೇ ಉದ್ದೇಶಿಸಿ, ಗುರುಗಳ ಪ್ರಯಾಣಕ್ಕಾಗಿ ಸಿದ್ಧಗೊಳಿಸಿದ ಪಾಲಕಿಯೊಳಭಾ ಗದಲ್ಲಿ ಪೀಠದ ಕೆಳಗಿದ್ದ ಸ್ಥಳದಲ್ಲಿ ವಿಶೇಷ ಧನಕನಕಗಳನ್ನೂ, ವಸ್ತ್ರ ಉಡು ಗೊರೆಗಳನ್ನೂ ಇರಿಸಿ, ಮೇಲೆ ಏನೂ ಕಾಣಿಸದಂತೆ ಅವರ ಆಸನಗಳನ್ನಿಟ್ಟು ಅವರೊಂದಿಗೆ ಹೊರಡಲಿದ್ದ ತನ್ನ ಸೇವಕರನು ಕುರಿತು,-' ಎಲೈ ದೂತರೇ, ನಮ್ಮಾ ಗುರುಗಳನ್ನು ಬಹು ಜೋಕೆಯಿಂದ ಕರೆದುಕೊಂಡುಹೋಗಿ ಜಗ ನ್ನಾಥದಲ್ಲಿ ಅವರ ಮನೆಯಲ್ಲಿ ಬಿಟ್ಟು, ತರುವಾಯ ಪಾಲಕಿಯ ಒಳಗೆ ಅಡ ಗಿಸಿರುವ, ಈ ಕನಕ ಭೂಷಣಗಳನ್ನೂ, ವಸ್ತ್ರಾದಿ ಉಡುಗೊರೆಗಳನ್ನೂ, ಹರಿದ್ರಾ ಕುಂಕುಮಾದಿ ಮಂಗಳ ದ್ರವ್ಯಗಳನ್ನೂ ಗುರು ಪತ್ನಿಯವರ

ಪಾದ ಸನ್ನಿಧಿಯಲ್ಲಿ ಸಮರ್ಪಿಸಿ, ಅವರ ಅಪ್ಪಣೆ ಪಡೆದು ಹೊರಟು ಬರತಕ್ಕದ್ದು' ಎಂದು ಆಜ್ಞಾಪಿಸಿ ಕಳುಹಿಸಿದನು. ಆ ಸಾಧುಶೀಲರ ಸಹವಾಸವನ್ನು ಬಿಡಲಾರದೆ ಮೇಲೆ ಮೇಲೆ ಪುನಃ ಪುನಃ ನಮಸ್ಕಾರಮಾಡುತ್ತಾ, ದಿವ್ಯಪಾದದರ್ಶನವು ಪುನಃ ಎಂದಿಗೆ ಲಭ್ಯವಾಗುವುದೋ ಎಂದು ಅಂಗಲಾಚಿಕೊಳ್ಳುತ್ತಾ, ಅವರ ಪಾಲಕಿಯೊಂದಿಗೇ ಪಾದಚಾರಿಯಾಗಿ ಬಹುದೂರ ನಡೆದು ಬಂದನು. ತರುವಾಯ ಜಯದೇವನು.-'ಅಯ್ಯಾ ಭಗವಾನ್ ದಾಸನೇ, ನಿನ್ನ ಶ್ರದ್ಧಾಭಕ್ತಿಗಳಿಗಾಗಿಯೂ ಆದರೋಪಚಾರಕ್ಕಾಗಿಯೂ. ಧರ್ಮಬುದ್ಧಿಗಾಗಿಯೂ ಅತಿಶಯ ತೃಪ್ತನಾಗಿದ್ದೇನೆ. ನೀನು ಭಗವದನುಗ್ರಹಕ್ಕೆ ಪಾತ್ರನಾಗಿರುವೆ. ಬಹುದೂರ ಬಂದು ಬಿಟ್ಟೆ. ಇನ್ನು ನಿಲ್ಲು' ಎಂದು ನುಡಿದು, ತನ್ನನ್ನು ಅನುಸರಿಸಿ ಬಂದ ಜನರೆಲ್ಲರನ್ನೂ ಪ್ರೇಮ ಕಟಾಕ್ಷದಿಂದ ಅಭಿನಂದಿಸಿ ಕಳುಹಿಸಿ, ಹೊರಟು ಮುಂದೆ ಪ್ರಯಾಣ ಮಾಡಿದನು.

ಜಯದೇವನಿಗೆ ಭಗವಾನ್‌ದಾಸನು ಗುಪ್ತದಾನಮಾಡಿದ್ದಾನೆಂಬ ಸಂಗತಿಯನ್ನು ನಾಲ್ಕುಮಂದಿ ಚೋರರು ಹೇಗೋ ತಿಳಿದು ಅದನ್ನು ಅಪಹರಿಸಬೇಕೆಂದು, ಪಾಲಕಿಯನ್ನು ಅನುಸರಿಸಿ ಮಾರ್ಗಸ್ಥರಂತೆಯೇ ನಡೆಯುತ್ತಿದ್ದರು. ಮಾರ್ಗಮಧ್ಯದಲ್ಲಿ ನಿರ್ಜನವಾಗಿದ್ದ ಒಂದು ಅರಣ್ಯ ಪ್ರದೇಶಕ್ಕೆ ಬಂದೊಡನೆಯೇ, ಆ ಚೋರರು ಭಯಂಕರವಾದ ಖಡ್ಗಗಳನ್ನು ಕೈಗಳಲ್ಲಿ ಧರಿಸಿ ಝಳಪಿಸುತ್ತಾ ಪಾಲಕಿಗೆ ಅಡ್ಡವಾಗಿ ಬಂದರು. ಅವರನ್ನು ಕಂಡೊಡನೆಯೇ ಪಾಲಕಿಯನ್ನು ಹೊತ್ತ ಬೋಯಿಗಳು ಭಯಗೊಂಡು, ಅದನ್ನು ಇಳಿಸಿ ಉಪಾಯತೋರದೆ ನಿಂತು ಬಿಟ್ಟರು. ಚೋರರು ದೊಣ್ಣೆಗಳನ್ನು ಎತ್ತಿಕೊಂಡು-ಖಡ್ಗಗಳನ್ನು ಝಳಪಿಸುತ್ತಾ ಅವರ ಮೇಲೇರಿ ಬಂದರು. ಯಮದೂತರಂತೆ ಭಯಂಕರಾಕಾರರಾದ ಅವರನ್ನು ಕಂಡು, ಆ ಸೇವಕರೂ ಬೋಯಿಗಳೂ ಪ್ರಾಣಭಯದಿಂದ ನಡುಗತೊಡಗಿದರು. ಚೋರರು, ಮಹಾ ರಭಸದಿಂದ ಓಡಿ ಬಂದು, ಒಬ್ಬೊಬ್ಬನಿಗೂ ದೊಣ್ಣೆಗಳಿಂದ ನಾಲ್ಕು ನಾಲ್ಕು ಪ್ರಹಾರಮಾಡಲು, ಆ ಪೆಟ್ಟುಗಳನ್ನು ತಡೆಯಲಾರದೆ, ಅವರು ಬದುಕಿದರೆ ಸಾಕೆಂದು ಎಲ್ಲವನ್ನೂ ಅಲ್ಲೇ ಬಿಟ್ಟು ಓಡಿಹೋದರು. ಜಯದೇವನು ಅಕಸ್ಮಾತ್ತಾಗಿ ಪ್ರಾಪ್ತವಾದ ಆ ಅಪಾಯವನ್ನು ಕಂಡು,

ಒಡನೆ ಕೆಳಕ್ಕಿಳಿದು ತನ್ನವರಾರೂ ಇಲ್ಲದೆ, ತಾನು ಕಳ್ಳರ ಮಧ್ಯದಲ್ಲಿ ಏಕಾಕಿಯಾಗಿ ಸಿಕ್ಕು ಬಿದ್ದಿರುವುದನ್ನು ತಿಳಿದು. ಈ ಸಮಯದಲ್ಲಿ ಅವರನ್ನು ಪ್ರತಿಭಟಿಸಿ ನುಡಿವುದು ಅಪಾಯಕರವೆಂದು ತಿಳಿದು—'ಅಯ್ಯಾ, ಇಗೋ ಈ ಪಾಲಕಿಯಲ್ಲಿ ಏನಾದರೂ ಧನಕನಕಗಳಿರಬಹುದೆಂದಲ್ಲವೆ ನಮ್ಮನ್ನು ಘಾತಿಸಿ ಅವನ್ನು ಅಪಹರಿಸಲು ಬಂದಿದ್ದೀರಿ. ಇಗೋ ನೋಡಿಕೊಳ್ಳಿ, ಅರ್ಥವೆಂಬುದು ಮಹಾ ಅನರ್ಥಕಾರಿಯಾದುದು. ಈ ಎಲ್ಲವನ್ನೂ ತೆಗೆದುಕೊಂಡು ತೃಪ್ತರಾಗಿರಿ' ಎಂದು ನುಡಿದು. ಅದನ್ನೆಲ್ಲವನ್ನೂ ಅವರಿಗೆ ವಹಿಸಿಕೊಟ್ಟು, ಮುಂದೆ ಮುಂದೆ ಕಾಲು ನಡೆಯಿಂದಲೇ ಪ್ರಯಾಣಮಾಡ ತೊಡಗಿದನು. ಆಗಲಾ ಚೋರರು, ಇವನು ಮುಂದೆ ನಡೆದು ರಾಜದೂತರೊಂದಿಗೆ, ನಾವು ತನ್ನನ್ನು ಅಡ್ಡಗಿಸಿ ದೋಚಿಕೊಂಡೆವೆಂದು ಹೇಳಿ ಶಿಕ್ಷೆಗೆ ಗುರಿಮಾಡಬಹುದೆಂದು ಯೋಚಿಸಿ—'ಏ ಹಾರುವಾ ಎಲ್ಲಿಗೆ ಹೋಗುತ್ತಿರುವೆ? ನಿಲ್ಲಲ್ಲಿ' ಎಂದು ಗರ್ಜಿಸಿ ನುಡಿದರು. ಜಯದೇವನು, ಉಪಾಯವಿಲ್ಲವೆಂದು ನಿಂತುಬಿಟ್ಟನು. ಅವರಲ್ಲೊಬ್ಬನು, ಖಡ್ಗದಿಂದ ಆತನ ಶಿರಚ್ಛೇದನ ಮಾಡಲು ಉದ್ಯುಕ್ತನಾದನು. ಅಷ್ಟರಲ್ಲಿ ಬೇರೊಬ್ಬ ಚೋರನು ಅಡ್ಡಬಂದು, ಇವನನ್ನು ಸಂಹರಿಸುವುದು ಬೇಡ. ಕಾಲು ಕೈಗಳನ್ನು ಕತ್ತರಿಸಿ, ನಡೆದು ಹೋಗಿ ನಮ್ಮ ಮೇಲೆ ದೂರಿಕೊಳ್ಳಲು ಅವಕಾಶವಿಲ್ಲದಂತೆ ಮಾಡಿಬಿಡೋಣ ಇವನಿಗೆ ಅಷ್ಟೇ ಶಿಕ್ಷೆಯು ಸಾಕು' ಎಂದು ಸಲಹೆಯಿತ್ತನು. ಮಿಕ್ಕ ಚೋರರಿಗೂ ಅದು ಸಮ್ಮತವಾಯಿತು. ಒಡನೆ ಆ ಘಾತುಕರು ತಮ್ಮ ನಿಶಿತ ಖಡ್ಗಗಳಿಂದ ಆ ಸಾಧುವರ್ಯನ ಕಾಲುಗಳನ್ನೂ ಕೈಗಳೆರಡನ್ನೂ ಕತ್ತರಿಸಿ, ಆತನನ್ನು ಎತ್ತಿಕೊಂಡೊಯ್ದು ಸಮೀಪದಲ್ಲೇ ಇದ್ದ ಒಂದು ಹಾಳುಬಾವಿಯಲ್ಲಿ ಎತ್ತಿಹಾಕಿ, ಪಾಲಕಿಯಲ್ಲಿದ್ದ ಒಡವೆ ವಸ್ತ್ರ ಮುಂತಾದ ಸಮಸ್ತ ಪದಾರ್ಥಗಳನ್ನೂ ಅಪಹರಿಸಿಕೊಂಡು ಪರಾರಿಯಾಗಿ ಬಿಟ್ಟರು. ಅರ್ಥವು ಅನರ್ಥಹೇತುವೆಂಬುದು ಇಂತು ಸಿದ್ಧವಾಯಿತು.



## ಅಧ್ಯಾಯ ೪ " ಅದ್ಭುತಪ್ರಸಂಗ "

ಕಾಲು ಕೈಗಳೆರಡೂ ಖಂಡಿಸಲ್ಪಟ್ಟ ಒಡನೆಯೇ, ಜಯದೇವನಿಗೆ ದೇಹದಮೇಲೆ ಸ್ಮೃತಿತಪ್ಪಿಹೋಯಿತು. ಆದರೆ ಆ ಬಾವಿಯ ಅಡಿಯಲ್ಲಿ ಎಲ್ಲೋ ಸ್ವಲ್ಪನೀರಿದ್ದುದರಿಂದ ಆ ತಣ್ಣನೆಯ ನೀರು ಆತನ ದೇಹಕ್ಕೆ ಸೋಕಿ ಬಹುಹೊತ್ತಿನಮೇಲೆ ಜ್ಞಾನಬಂದಂತಾಯಿತು. ಆದರೂ ಅಧಿಕಾಧಿಕ ರಕ್ತವು ದೇಹದಿಂದ ಹರಿದು ಹೋದುದರಿಂದ ಸಹಿಸಲಸಾಧ್ಯವಾದ ಬಾಧೆಯುಂಟಾಗಿ, ಜಯದೇವನು ಅತ್ತಿತ್ತ ಕದಲಲು ತ್ರಾಣವಿಲ್ಲದೆ, ಮೇಲೆ ಮೇಲೆ ಕಣ್ಣುಮುಚ್ಚಿ ಹೋಗುತ್ತಿರಲು, ಯಾವ ಬಗೆಯಿಂದಲೂ ತನ್ನನ್ನು ತಾನು ರಕ್ಷಣೆಮಾಡಿಕೊಳ್ಳಲು ಸಾಧ್ಯವಿಲ್ಲದೆ, ಆ ವೇಳೆಯಲ್ಲಿ ತನ್ನ ಗತಿಯೇನೆಂದು ಚಿಂತಿಸಲಾರಂಭಿಸಿದನು. ತನ್ನ ಪ್ರಾಣಗಳು ಆ ಸ್ಥಿತಿಯಲ್ಲಿ ಇನ್ನು ಬಹುಕಾಲ ದೇಹದಲ್ಲಿ ನಿಂತಿರಲಾರವೆಂದು ಬೋಧೆಯಾಯಿತು. ಒಡನೆ, ಅನಾಥ ರಕ್ಷಕನೂ, ಆಪದ್ಬಾಂಧವನೂ ಆದ ಶ್ರೀಮನ್ನಾರಾಯಣನನ್ನು ಮೊರೆಹೊಕ್ಕು, ಆತನ ನಾಮ ಭಜನೆಮಾಡುವುದೊಂದೇ ಆ ಮರಣ ಕಾಲದಲ್ಲಿ ತನ್ನ ಪಾಲಿಗೆ ಉಳಿದಿರುವ ಸಾಧನವೆಂದು ನಂಬಿ ಉಚ್ಚಸ್ವರದಿಂದ—'ಓ ನಾರಾಯಣಾ, ಆಪದ್ಬಾಂಧವಾ, ಅನಾಥರಕ್ಷಕಾ, ಪ್ರಹ್ಲಾದವರದಾ, ದಯಾನಿಧೇ ನನಗೆ ಇದಾವ ಜನ್ಮದ ಪ್ರಾರಬ್ಧ ಕರ್ಮವು ಇಂತಹ ಅಗಾಧ ಶಿಕ್ಷೆಗೆ ನನ್ನನ್ನು ಗುರಿಮಾಡಿದೆಯಲ್ಲಾ! ಪ್ರಭೋ, ನಾನು ಬುದ್ಧಿಪೂರ್ವಕವಾಗಿ ಯಾರಿಗೂ ಏನೊಂದು ಅಪರಾಧವನ್ನೂ ಮಾಡಲಿಲ್ಲವಲ್ಲಾ! ಆದರೂ ನನಗೆ ಈ ಬಗೆಯ ಘೋರಶಿಕ್ಷೆಯನ್ನು ಏಕೆ ವಿಧಿಸಿದೆ! ಅಕ್ಕಟಾ, ಈ ಬಾಧೆಯನ್ನು ನಾನು ಹೇಗೆ ಸಹಿಸಲಿ! ದೇವಾ ನನ್ನ ಮೇಲೆ ನಿನಗೇಕೆ ದಯೆಯುಂಟಾಗದು! ಎಂದು ಸ್ವಲ್ಪ ಹೊತ್ತು ಸಂಕಟದಿಂದ ಹಲುಬಿಕೊಂಡು, ತರುವಾಯ ನಿಧಾನವಾಗಿ ಯೋಚಿಸಿಕೊಂಡು—'ದೇವರು ದಯಾಮಯನು, ಪ್ರಾಣದ ಮೇಲೆ ಬಂದಿದ್ದ ಈ ಅಪಾಯವು, ಕಾಲು ಕೈಗಳನ್ನು ಮಾತ್ರ ಕೊಂಡು ಹೋಗುವಂತೆ ಅನುಗ್ರಹ ಮಾಡಿದನಲ್ಲವೆ! ಈ ದೇಹಕ್ಕೆ ಪ್ರಾಪ್ತವಾಗುವ ಸುಖವೂ ದುಃಖವೂ ಅನಿತ್ಯವಾದುವುಗಳು. ಇವುಗಳಿಗಾಗಿ ಮರುಗುವುದು ವ್ಯರ್ಥ! ನನ್ನ ಯಾವುದೋ ಜನ್ಮದ ದುಷ್ಕರ್ಮಫಲಾನುಭವಕ್ಕಾಗಿಯಲ್ಲ

ಇದ್ದರೆ, ಉಪದ್ರಷ್ಟೃಕನಾದ ಶ್ರೀ ನಾರಸಿಂಹನು ನನಗೆ ಈ ಶಿಕ್ಷೆಯಾಗಲು ಏಕೆ ಅನುಮತಿಸುತ್ತಿದ್ದನು? ಸರ್ವಾಂತರ್ಯಾಮಿಯಾದ ಆತನ ಅನುಮತಿಯೂ ಪ್ರೇರಣೆಯೂ ಇಲ್ಲವಿದ್ದರೆ ಈ ವಿಶಾಲ ಭೂಲೋಕದಲ್ಲಿ ಯಾವ ಪ್ರಾಣಿಗೆ ತಾನೇ ಏನು ಕಾರ್ಯ ಮಾಡಲು ಸಾಧ್ಯವಾದೀತು! ನಾನು ಯಾವ ಜನ್ಮದಲ್ಲಿ ಯಾರಿಗೆ ಈ ಬಗೆಯ ದುಃಖವನ್ನು ಉಂಟುಮಾಡಿದ್ದೆನೋ ಆ ದುಃಖದ ಪ್ರತಿಕ್ರಿಯೆಯು ನನಗಲ್ಲದೆ ಮತ್ತಾರಿಗೆ ಪ್ರಾಪ್ತವಾದೀತು! ಅದನ್ನು ನಾನಲ್ಲದೆ ಮತ್ತಾರು ಅನುಭವಿಸಬೇಕು! ದೇವಾ, ನಿನ್ನ ಚಿತ್ತಕ್ಕೆ ಬಂದಂತಾಗಲಿ' ಎಂದು ತನ್ನಲ್ಲಿ ತಾನೇ ಸಮಾಧಾನಮಾಡಿಕೊಂಡು, ಅನಿತ್ಯವಾದ ದೇಹದ ಮಮತೆಯನ್ನು ನೀಗಿ, ಉಚ್ಚಸ್ವರದಿಂದ ಭಗವನ್ನಾಮಗಳನ್ನು ಭಜನೆಮಾಡಿಕೊಳ್ಳ ತೊಡಗಿದನು.

ಕರ್ಮವು ಸಂಚಿತವೆಂದೂ ಪ್ರಾರಬ್ಧವೆಂದೂ ಆಗಾಮಿಯೆಂದೂ ಮೂರು ವಿಧವಾಗಿರುವುದೆಂದು ಹಿಂದೆ ಒಂದೆಡೆ ಹೇಳಿದೆಯಷ್ಟೆ! ಈ ತ್ರಿವಿಧ ಕರ್ಮಗಳ ಸಂಕಲೆಯನ್ನು ತಪ್ಪಿಸಿಕೊಳ್ಳಲು ಯಾವ ಪ್ರಾಣಿಯಿಂದಲೂ ಸಾಧ್ಯವಿಲ್ಲ. ಇವುಗಳಲ್ಲಿ ಸಂಚಿತವೆಂಬುದು ಜನ್ಮಜನ್ಮಾಂತರಗಳಿಂದ ಸಂಪಾದಿತವಾಗಿ, ಮುಂದೆ ಅನೇಕಾನೇಕ ಜನ್ಮಗಳಿಗೆ ಬೀಜಭೂತವಾಗಿ ಒಂದೆಡೆ ಶೇಖರಿಸಲ್ಪಟ್ಟಿರುವುದು. ಪ್ರಾರಬ್ಧ ಕರ್ಮವೆಂಬುದು ಈ ಸಂಚಿತದ ಪೈಕಿ ಕರ್ಮಾಧಿದೇವತೆಗಳಿಂದ ಈ ಜನ್ಮದ ಅನುಭವಕ್ಕೆಂದು ವಿಂಗಡಿಸಿ ಕೊಡಲ್ಪಟ್ಟ ಭಾಗವಾಗಿರುವುದು. ಪ್ರಾಣಿಯು ಒಂದಾನೊಂದು ಪರಿಸ್ಥಿತಿಯಲ್ಲಿ ಜನ್ಮವೆತ್ತಲೂ, ಆ ಜನ್ಮದಲ್ಲಿ ಸುಖದುಃಖಾನುಭವಮಾಡಲೂ, ಸಚ್ಚಿಂತನೆ ದುಶ್ಚಿಂತನೆಗಳಿಗೆ ವಶನಾಗಿ ವಿವಿಧ ಕಾರ್ಯಕಲಾಪಗಳಲ್ಲಿ ಭಾಗಿಯಾಗಲೂ ಈ ಪ್ರಾರಬ್ಧಕರ್ಮವೇ ಕಾರಣವಾಗಿರುವುದು. ನಿತ್ಯದಲ್ಲೂ ಮನೋವಾಕ್ಕಾಯಗಳಿಂದ ಹೊಸದಾಗಿ ಸಂಪಾದಿತವಾಗುತ್ತಿರುವುದು ಆಗಾಮಿ ಕರ್ಮವೆನ್ನಲ್ಪಡುವುದು. ಇವುಗಳಲ್ಲಿ ಪರಮಾತ್ಮ ಜ್ಞಾನವನ್ನು ಸಂಪಾದಿಸಿಕೊಂಡರೆ, ಅರಳೆಯ ರಾಶಿಗೆ ಒಂದು ಕಿಡಿ ಬೆಂಕಿಯಿಟ್ಟಂತೆ ಆ ಜ್ಞಾನಾಗ್ನಿಯಿಂದ ಸಂಚಿತವನ್ನು ನಾಶಗೊಳಿಸಲು ಸಾಧ್ಯವುಂಟು. ತಾನು ನಿತ್ಯದಲ್ಲೂ ಮಾಡುವ ಕಾರ್ಯಗಳು ತನಗೆ ಬಂಧಕವಾಗದಂತೆ, ಯುಕ್ತಾಯುಕ್ತ ವಿವೇಚನೆಯಿಂದಲೂ ನಿರ್ಮಮತೆಯಿಂದಲೂ ನಡೆದು ಆಗಾಮಿ ಕರ್ಮವು

ತನ್ನ ಸಂಚಿತಕರ್ಮವನ್ನು ಅಭಿವೃದ್ಧಿಗೊಳಿಸಲು ಸಾಧ್ಯವಿಲ್ಲದಂತೆ ಮಾಡಿಕೊಳ್ಳಲೂ ಅವಕಾಶವುಂಟು. ಇವೆರಡು ಮನುಷ್ಯನ ಪುರುಷ ಪ್ರಯತ್ನಸಾಧ್ಯವಿರುವ ಕಾರ್ಯಗಳು. ಆದರೆ ಪ್ರಾರಬ್ಧಕರ್ಮದಿಂದ ಪ್ರಾಪ್ತವಾಗುವ ಸುಖವನ್ನಾಗಲೀ, ಕಷ್ಟವನ್ನಾಗಲೀ ಅನುಭವಿಸಿಯೇ ತೀರಬೇಕು. ಕರ್ಮಪಾಶವು ಅನುಭವಿಸದಲ್ಲದೆ ಕಿತ್ತುಹೋಗದು. ಇದನ್ನು ತಿಳಿದೇ ಭಗದ್ಭಕ್ತರಾದ ಸಾಧುಗಳು ಸುಖದುಃಖಗಳಿಗೂ, ಲಾಭನಷ್ಟಗಳಿಗೂ ಹಿಗ್ಗಿ ಮರುಗದೆ ಸರ್ವದಾ ತಮ್ಮ ಚಿತ್ತ ಶಾಂತತೆಯನ್ನು ಕಾಯ್ದುಕೊಂಡಿರುವರು. ಮೇಲಾಗಿ ಭಗವಂತನನ್ನು ಮೊರೆಹೊಗುವುದರಿಂದ ಈ ತ್ರಿವಿಧ ಕರ್ಮಗಳ ತಾಪವನ್ನೂ ಕಡಮೆಮಾಡಲು ಸಾಧ್ಯವಿರುವುದೆಂಬ ಮರ್ಮವನ್ನರಿತು ಸರ್ವದಾ ಸಕಲಾಪನ್ನಿವಾರಕನಾದ ಆ ದೇವ ದೇವನ ಭಜನೆಯಲ್ಲಿ ನಿರತರಾಗಿರುವರು.

ಇತ್ತ ಹಾಳುಭಾವಿಯಲ್ಲಿ ಬಿದ್ದ ಜಯದೇವನು, ನಿರಾಧಾರನಾಗಿ ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನೇ ದಿಕ್ಕೆಂದು ನಂಬಿ-' ಹರೇ, ಜನಾರ್ದನ, ಭಕ್ತವತ್ಸಲ, ದೀನದಯಾಪರ, ಸರ್ವೇಶ್ವರ, ಸರ್ವಲೋಕೋದ್ಧಾರಕ, ನಾರಾಯಣ, ಮುಕುಂದ, ಮುರಮರ್ದನ, ಶ್ರೀರಾಮಚಂದ್ರಪ್ರಭೋ' ಎಂದು ಮುಂತಾಗಿ ಭಜನೆ ಮಾಡುತ್ತಾ, ತನ್ನ ಕಷ್ಟಸಂಕಟಗಳನ್ನು ಮರೆಯುತ್ತಿದ್ದನು. ಆ ವೇಳೆಗೆ ಆ ಕಾಡಿನಲ್ಲಿ ಬೇಟೆಗೆಂದು ಬಂದಿದ್ದ, ಕ್ರೌಂಚರಾಜನೆಂಬ ಒಬ್ಬ ಅರಸು ಆ ಶಬ್ದವನ್ನು ಕೇಳಿ ಬಾವಿಯ ಒಳಗೆ ಬಂದು ನೋಡಿ, ಕೈಕಾಲುಗಳು ಕತ್ತರಿಸಲ್ಪಟ್ಟು ದೇಹವೆಲ್ಲವೂ ರಕ್ತಮಯವಾಗಿ ಬಿದ್ದಿದ್ದ ಆ ಮಾನವ ಪ್ರಾಣಿಯನ್ನು ಕಂಡು, ಅತ್ಯಂತ ಭಯಾಶ್ಚರ್ಯಗಳಿಂದ ತನ್ನ ಪರಿವಾರದವರ ಸಹಾಯದಿಂದ ಒಡನೆ ಮೇಲಕ್ಕೆತ್ತಿಸಿ ದಡದಲ್ಲಿ ಮಲಗಿಸಿದನು. ಊರ್ಧ್ವ ಪುಂಡ್ರಗಳಿಂದ ಅಲಂಕೃತವಾಗಿ ದಿವ್ಯತೇಜಸ್ವಿತೆಯಿಂದ ವಿರಾಜಮಾನವಾಗಿದ್ದ ಆ ಮುಖವು, ಆತನು ಸಾಮಾನ್ಯವ್ಯಕ್ತಿಯಲ್ಲವೆಂಬುದನ್ನು ಸೂಚಿಸುತ್ತಿದ್ದಿತು. ರಾಜನು-' ಮಹಾನುಭಾವ, ನೀನಾರು ? ನಿನಗೆ ಈ ದುರವಸ್ಥೆಯು ಯಾರಿಂದ, ಏಕೆ ಪ್ರಾಪ್ತವಾಯಿತು ? ' ಎಂದು ಪ್ರಶ್ನಿಸಿ,-' ಅಕ್ಕಟಾ, ಲೋಕದಲ್ಲಿ ನೀಚರು ಸಾಧುಗಳಿಗೆ ಎಷ್ಟು ಮಟ್ಟಿನ ದಾರುಣ ಹಿಂಸೆಗಳನ್ನುಂಟುಮಾಡಿ ಅಗಾಧ ಪಾಪಸಾಧನೆ ಮಾಡಿ

ಕೊಳ್ಳುವರಲ್ಲ !' ಎಂದು ಮರುಗಿದನು. ಸಾಧು ಶಿರೋಮಣಿಯಾದ ಜಯದೇವನು, ತನಗೆ ಅಕಸ್ಮಾತ್ತಾಗಿ ಪ್ರಾಪ್ತವಾದ ಆ ದುರ್ವಿಧಿಗೆ ತನ್ನ ಪುರಾಕೃತಕರ್ಮವೇ ಕಾರಣವೆಂಬುದನ್ನು ನಂಬಿದ್ದವನಾದುದರಿಂದ ಈ ವಿಷಯದಲ್ಲಿ ಆ ಚೋರರಮೇಲೆ ದೂರುಹೇಳಲು ಇಷ್ಟಪಡಲಿಲ್ಲ.— 'ರಾಜನೇ ಪ್ರತಿಯೊಂದು ಪ್ರಾಣಿಯೂ ತನ್ನ ಜನ್ಮಾಂತರಾರ್ಜಿತವಾದ ಕಷ್ಟಸುಖಗಳನ್ನು ಅನುಭವಿಸಬೇಕಲ್ಲವೆ? ಇದೂ ನನ್ನ ಕರ್ಮಫಲವು. ಆದರೆ ನಾನು ಒಂದು ವಿಷಯದಲ್ಲಿ ಮಾತ್ರ ವಿಶೇಷ ಸಮಾಧಾನ ಪಡುತ್ತೇನೆ. ನನ್ನ ದೇಹದ ಅಂಗಗಳು ಹೋದುವಲ್ಲಾ ಎಂಬ ವ್ಯಸನವು ನನಗಿಲ್ಲ. ವ್ಯರ್ಥಕಾರ್ಯಗಳಿಗಾಗಿ ಸಿಕ್ಕಲ್ಲಿಗೆ ನಡೆದು ಹೋಗುತ್ತಲೂ ನಿಷ್ಕಾರಣವಾಗಿಯೇ ಅನೇಕ ಪಾಪಕಾರ್ಯಗಳಲ್ಲಿ ತೊಡಗುತ್ತಲೂ ಇದ್ದ ಕಾಲು ಮತ್ತು ಕೈಗಳೆರಡನ್ನೂ ತೊಲಗಿಸಿ, ಒಂದೆಡೆಯಲ್ಲೇ ಕುಳಿತು ಸದಾ ಭಗವಂತನ ಪಾದಾರವಿಂದಗಳನ್ನು ಭಜನೆ ಮಾಡಿಕೊಂಡಿರಲು, ಈ ಮೂಲಕ ಅವಕಾಶವುಂಟಾಯಿತಲ್ಲವೆ! ಈ ಪರಿಸ್ಥಿತಿಯನ್ನು ನನಗೆ ಉಂಟುಮಾಡಿದ ಮಹನೀಯರಿಗೆ ಕೃತಜ್ಞನಾಗಿದ್ದೇನೆ" ಎಂದು ನುಡಿದನು.

ಕ್ರೌಂಚರಾಜನು—'ತನ್ನ ಕೈ ಕಾಲುಗಳನ್ನು ಕತ್ತರಿಸಿ ಹಾಕಿದವರಿಗೂ ಕೃತಜ್ಞನಾಗಿದ್ದೇನೆಂಬ ಈ ಪುರುಷನು ಮಹಾತ್ಮನಾಗಿರಬೇಕು. ಇಂತಹ ಸಂಕಟ ವೇಳೆಯಲ್ಲೂ ಈ ಮಹಾನುಭಾವನ ಬಾಯಲ್ಲಿ ಒಂದಾದರೂ ಪರದೂಷಣೆಯ ಶಬ್ದವು ಹೊರಡಲಿಲ್ಲವಲ್ಲಾ! ಈತನು ಮಹಾ ಜಗದ್ಭಕ್ತನು. ಸಾಧು ಶಿರೋಮಣಿಯು' ಎಂದುಕೊಂಡು, ಆತನನ್ನೂ ಪಾಲಕಿಯಲ್ಲಿ ಕೂರಿಸಿಕೊಂಡು ತನ್ನೊಂದಿಗೆ ರಾಜಧಾನಿಗೆ ಕರೆದೊಯ್ದು ರಾಜವೈದ್ಯರಿಂದ ಚಿಕಿತ್ಸೆ ಮಾಡಿಸಿದನು. ಜಯದೇವನ ಸಾಧು ಸ್ವಭಾವವೂ ನಿಷ್ಕಲ್ಮಷ ಭಗವದ್ಭಕ್ತಿಯೂ ಕ್ರಮ ಕ್ರಮವಾಗಿ ರಾಜನ ಮನಸ್ಸಿನಲ್ಲೂ ವಿಶೇಷ ಶ್ರದ್ಧಾಭಕ್ತಿಗಳು ಉದಯಿಸುವಂತೆ ಮಾಡಿದುವು. ರಾಜನು ಪ್ರಾರಂಭಕ್ಕೆ ದಿನವೂ ಸ್ವಲ್ಪಹೊತ್ತು ಜಯದೇವನ ಬಳಿಯಲ್ಲಿ ಒಂದು ಕುಳಿತು ಯೋಗಕ್ಷೇಮವನ್ನು ವಿಚಾರಿಸುತ್ತಾ, ಆತನ ಬೋಧನೆಗಳನ್ನು ಕಿವಿಗೊಟ್ಟು ಕೇಳಲು ಮೊದಲು ಮಾಡಿದನು. ಕೆಲವು ದಿನಗಳಲ್ಲೇ ಕೈಕಾಲುಗಳ ಗಾಯವು ಗುಣವಾಯಿತು. ಆ ಸಾಧುವರ್ಯನ ಬೋಧನೆಯು ರಾಜನ

ಚಿತ್ರವನ್ನು ಆಕರ್ಷಿಸಿತು. ರಾಜನು ಆತನನ್ನು ತನ್ನ ಪರಮ ಗುರುವನ್ನಾಗಿ ಮಾಡಿಕೊಂಡು, ದಿನದ ವಿಶೇಷ ಕಾಲವನ್ನು ಸತ್ಕಥಾಶ್ರವಣ, ಸದ್ಗ್ರಂಥ ಪಠನ ಮುಂತಾದುವುಗಳಲ್ಲೇ ವಿನಿಯೋಗಿಸತೊಡಗಿದನು. ಜಯದೇವನೂ ಆತನಿಗೆ ಭಗವದ್ಭಕ್ತರಾದ ಸಾಧುಗಳ ಸ್ವರೂಪವನ್ನೂ, ಭಗವನ್ಮಹಿಮೆಯನ್ನೂ ವರ್ಣಿಸಿ ಹೇಳಿ ಆತನ ಮನಸ್ಸಂತೋಷಪಡಿಸುತ್ತಿದ್ದನು.

ನಷ್ಟವಾಗಿ ಹೋಗಿದ್ದ ಜಯದೇವನ ಕರ ಚರಣಾದಿಗಳು ಪುನಃ ಲಭ್ಯವಾದ ವಿಷಯದಲ್ಲೂ. ಆತ್ಯಾಶ್ಚರ್ಯಕರವಾದ ಒಂದು ಕಥೆಯು ಹೇಳಲ್ಪಟ್ಟಿದೆ. ಅದನ್ನೂ ಇಲ್ಲಿ ಕೊಡುತ್ತೇವೆ. “ಹೀಗಿರುವಲ್ಲಿ ಕೆಲವು ದಿನಗಳು ಕಳೆದಮೇಲೆ, ಒಂದುದಿನ ಜಯದೇವನ ಕರಚರಣಗಳನ್ನು ಕತ್ತರಿಸಿ ಹಾಳುಬಾವಿಯಲ್ಲಿ ನೂಕಿದ್ದ ಕಳ್ಳರು ಸಾಧುವೇಷದಿಂದ ರಾಜನ ಅರಮನೆಗೆ ಬಂದರು. ಅವರನ್ನು ಕಂಡೊಡನೆಯೇ ಜಯದೇವನು ಗುರುತುಹಿಡಿದನು. ಅವರಿಗೂ, ಈತನೇ ನಮ್ಮಿಂದ ಕೈಕಾಲುಗಳನ್ನು ಕಳೆದುಕೊಂಡವನೆಂಬುದು ಗುರುತು ಸಿಕ್ಕಿತು. ಆತನು ರಾಜನ ಗುರುವಾಗಿರುವ ಈ ಸ್ಥಳಕ್ಕೆ ಬಂದುದು ಮೃತ್ಯುವಿನ ಬಾಯೊಳಕ್ಕೆ ತಾವಾಗಿ ಹಾರಿಬಿದ್ದಂತಾಯಿತೆಂದು ಭಯಗೊಂಡು, ಅಲ್ಲಿಂದ ತಪ್ಪಿಸಿಕೊಂಡು ಬದುಕಿ ಹೋಗುವುದು ಹೇಗೆಂದು ಯೋಚಿಸತೊಡಗಿದರು. ಆದರೆ ಮಹಾ ಸಾಧುಶಿರೋಮಣಿಯಾದ ಜಯದೇವನಿಗೆ ಶತ್ರುಮಿತ್ರರು ಎಂಬ ಭೇದಭಾವದೇ ಇಲ್ಲವಾದುದರಿಂದ, ಆತನು ಅವರನ್ನು ಕಂಡೊಡನೆಯೇ ತನ್ನ ಆಸನದಿಂದ ಧುಮುಕಿ ನಮಸ್ಕಾರಮಾಡಿ, ರಾಜನಿಗೆ-“ಸಾಧುಗಳು ಬಂದಿದ್ದಾರೆ. ಬಂದು ಅರ್ಘ್ಯಪಾದ್ಯಾದಿ ಉಪಚಾರಮಾಡು” ಎಂದು ಹೇಳಿಕಳುಹಿಸಿದನು. ರಾಜನು ಒಡನೆ ಬಂದು ಆ ಸಾಧುರೂಪೀ ಚೋರರನ್ನೂ ಸಕಲ ಬಗೆಗಳಿಂದಲೂ ಉಪಚರಿಸಿ, ಅವರ ವಾಸಕ್ಕೆಂದು ಒಂದು ಪ್ರತ್ಯೇಕ ಸ್ಥಳವನ್ನು ಏರ್ಪಡಿಸಿ ಕೊಟ್ಟನು. ಆದರೇನು! ಆ ಚೋರರು ಕಲ್ಮಷಚಿತ್ತರಾದುದರಿಂದ ಅವರ ಮನಸ್ಸಿನಲ್ಲಿ ಸದಾ ತಮಗೆ ಇಷ್ಟು ಉಪಚಾರಮಾಡುತ್ತಿರುವುದೂ ಸಹ, ಎಂದೋ ಒಂದು ದಿನ ಶಿರಚ್ಛೇದನ ಮಾಡುವುದಕ್ಕಾಗಿಯೇ! ಎಂಬ ಯೋಚನೆ ಉಂಟಾಗುತ್ತಿದ್ದಿತಲ್ಲದೆ, ಜಯದೇವನ ವಿಷಯದಲ್ಲಿ ನಂಬಿಕೆಯೂ, ಪೂಜ್ಯಭಾವವೂ ಉಂಟಾಗಲೇ ಇಲ್ಲ. ಹಾಗೆಯೇ ಮೂರು ನಾಲ್ಕು ದಿನಗಳು

ಕಳೆಯಲು,-ಇನ್ನು ಇಲ್ಲಿರಬಾರದು. ಯಾವ ಹೊತ್ತಿಗೆ ಏನವಾಯ ಒದಗುವುದೋ ಎಂದು ಪ್ರಾಣಭಯದಿಂದ ಸದಾ ಕೊರಗುತ್ತಿದ್ದರು. ಎಷ್ಟು ಬಗೆಯಿಂದ ಉಪಚಾರಮಾಡುತ್ತಿದ್ದರೂ, ಇನ್ನೂ ಕೃಶವಾಗುತ್ತಾ ಕಾಂತಿಹೀನರಾಗುತ್ತಾ ಇದ್ದ ಅವರ ವಿಷಯವನ್ನು ರಾಜನು ಜಯದೇವನಲ್ಲಿ ತಿಳಿಸಿದನು. ಆಗಲೂ ಆ ಸಾಧುವರ್ಯನು-'ಅವರು ಮಹಾ ವಿರಕ್ತರು. ಯಾವಸ್ಥಳದಲ್ಲೂ ಬಹುಕಾಲ ನಿಲ್ಲತಕ್ಕವರಲ್ಲ. ನಿನ್ನ ಪುಣ್ಯೋದಯದಿಂದ ಇಲ್ಲಿ ನಿಂತಿದ್ದಾರೆ. ಅವರು ಹೊರಡಬೇಕೆಂದರೆ, ಅಪೇಕ್ಷಿಸಿದಷ್ಟು ದ್ರವ್ಯವನ್ನು ಕೊಟ್ಟು ಉಪಚರಿಸಿ ಕಳುಹಿಸು' ಎಂದು ನುಡಿದನು. ರಾಜನು ಅವರ ಅಪೇಕ್ಷೆಯೇನೆಂದು ಪ್ರಶ್ನಿಸಲು-'ರಾಜನೇ ನಾವು ತೀರ್ಥವಾಸಿಗಳು. ಒಂದೇ ಸ್ಥಳದಲ್ಲಿ ಬಹುಕಾಲ ನಿಲ್ಲತಕ್ಕವರಲ್ಲ. ಎರಡು ರಥಗಳಲ್ಲಿ ದ್ರವ್ಯವನ್ನು ತುಂಬಿಸಿ ನಮ್ಮನ್ನು ಕಳುಹಿಸಿಕೊಡು' ಎಂದರು. ರಾಜನು ತಥಾಸ್ತುವೆಂದು, ಬೇಕಾದಷ್ಟು ಧನಕನಕಗಳನ್ನು ಕೊಟ್ಟು ಮರ್ಯಾದೆಮಾಡಿ ಕಳುಹಿಸಿದನು. ಮಾರ್ಗದಲ್ಲಿ ರಾಜ ಸೇವಕರು, ಆ ಕಪಟರೂಪೀ ಸಾಧುಗಳನ್ನು ಕುರಿತು,- ಸ್ವಾಮಿ, ನಮ್ಮ ರಾಜಗುರುಗಳು ಮಿಕ್ಕ ಎಲ್ಲಾ ಸಾಧುಗಳಿಗೂ ತಾವು ಕುಳಿತಿದ್ದ ಸ್ಥಳದಿಂದಲೇ ನಮಸ್ಕರಿಸುತ್ತಿದ್ದರು. ಆದರೆ, ನಿಮಗೆ ಮಾತ್ರ ಕೆಳಕ್ಕೆ ಧುಮುಕಿ ದೀರ್ಘದಂಡವಾಗಿ ನಮಸ್ಕಾರಮಾಡಿದ ಕಾರಣವೇನು' ಎಂದು ಕೇಳಿದರು. ಆಗಲಾ ಪಾತಕಿಗಳು-'ಎಲೈ ಕೇಳಿ, ಪೂರ್ವಾಶ್ರಮದಲ್ಲಿ ನಾವೂ ನಿಮ್ಮ ರಾಜನ ಗುರುಗಳೂ ಒಬ್ಬ ರಾಜನಲ್ಲಿ ಊಳಿಗಕ್ಕಿದ್ದೆವು. ನಿಮ್ಮ ರಾಜಗುರುವು ಒಂದಾನೊಂದು ಮಹಾಪರಾಧ ಮಾಡಿದುದರಿಂದ ರಾಜನು ಆತನನ್ನು ಶಿರಚ್ಛೇದಮಾಡಿ ಬನ್ನಿರೆಂದು ನಮ್ಮ ವಶಕ್ಕೆ ವಹಿಸಿದನು. ಆದರೆ ನಾವು ದಯೆಯಿಂದ ಕೊಲ್ಲದೆ ಕೈಕಾಲುಗಳನ್ನು ಮಾತ್ರ ಕತ್ತರಿಸಿ ಬದುಕಲಿತ್ತೆವು. ತರುವಾಯ ಆ ಕಾರ್ಯವೂ ನಮಗೆ ಮನಸ್ಸಿನಲ್ಲಿ ವಿಶೇಷ ಪರಿತಾಪವನ್ನುಂಟುಮಾಡಿದುದರಿಂದ ಎಲ್ಲವನ್ನೂ ಬಿಟ್ಟು ಈ ಆಶ್ರಮವನ್ನು ತೆಗೆದುಕೊಂಡು ತೀರ್ಥಯಾತ್ರೆಯನ್ನು ಮಾಡತೊಡಗಿದೆವು. ನಿಮ್ಮ ಗುರುವು ತನಗೆ ಪ್ರಾಣದಾನಮಾಡಿದವರೆಂಬ ಕೃತಜ್ಞತೆಯನ್ನು ತೋರಿಸಲು, ಹಾಗೆ ನಮಸ್ಕಾರಮಾಡಿ ರಾಜನಲ್ಲಿ ನಮ್ಮ ವಿಷಯ ಪ್ರಶಂಸೆಮಾಡಿ ಮರ್ಯಾದೆಮಾಡಿಸಿದನು'' ಎಂದು ನುಡಿದರು.

ಅಷ್ಟು ಮಾತುಗಳು ಅವರ ಬಾಯಿಂದ ಬಂದುದೇ ಸಾವಕಾಶವು. ಮಹದಾಶ್ಚರ್ಯದ ಸಂಗತಿ! ಒಡನೆ ಅವರು ನಿಂತಿದ್ದ ಸ್ಥಳದಲ್ಲಿ ನೆಲವು ಬಿರಿದು ಆ ಪಾಪಿಗಳು ಅದರಲ್ಲಿಳಿದು ಭೂ ಸಮಾಧಿಯಾಗಿ ಹೋದರು. ಅಕ್ಕಟಾ, ಸಾಧುಪ್ರಕೃತಿಯ ಆ ಮಹಾನುಭಾವನ ವಿಷಯದಲ್ಲಿ ಅಗಾಧ ದೋಷಾರೋಪಣೆಯನ್ನು ಮಾಡಿ, ಅಸತ್ಯವನ್ನಾಡಿದ ಆ ಘಾತುಕರನ್ನು ಭೂದೇವಿಯು ಹೇಗೆ ಹೊತ್ತು ಇರಬಲ್ಲಳು! ರಾಜದೂತರು, ಆ ಅನರ್ಥವನ್ನು ಕಂಡು ಮಹಾಭೀತರಾಗಿ, ನಡೆದ ಸಂಗತಿಯೆಲ್ಲವನ್ನೂ ರಾಜನಲ್ಲಿ ವಿಜ್ಞಾಪಿಸಿದರು. ರಾಜನು ಆ ಸಂಗತಿಯೇನೆಂದು ಜಯದೇವಸ್ವಾಮಿಯನ್ನು ಪ್ರಾರ್ಥಿಸಲು, ಆ ಸಾಧು ಪುಂಗವನು ಅವರ ಮರಣಕ್ಕಾಗಿ ಮಹಾ ವ್ಯಥೆಪಟ್ಟು-"ಓ ದೀನದಯಾಪರ, ಭಕ್ತವತ್ಸಲ, ನಿನ್ನ ಶತ್ರುಗಳಾದ ಕಂಸಚಾಣೂರ ಶಿಶುಪಾಲ ಮುಂತಾದವರಿಗೆ ಉತ್ತಮ ಗತಿಯನ್ನು ದಯಪಾಲಿಸಿದ ನೀನು, ನನ್ನ ಶತ್ರುಗಳಿಗೆ ಮಾತ್ರ ಹೀಗೆ ಅಧೋಗತಿಯನ್ನುಂಟುಮಾಡಲು ಕಾರಣವೇನು? ನಿನ್ನ ಶತ್ರುಗಳ ವಿಷಯದಲ್ಲಿ ಪರಮಾನುಗ್ರಹಮಾಡಿದ ನೀನು, ನನ್ನ ಶತ್ರುಗಳನ್ನು ಹೀಗೆ ನಿಗ್ರಹಿಸಿದೆಯೇಕೆ?" ಎಂದು ಹಾಡಿಕೊಂಡು ಮರುಗಿದನು. ಈ ಪ್ರಾರ್ಥನೆಯನ್ನು ಲಾಲಿಸಿದ ಭಕ್ತವತ್ಸಲನಾದ ಪರಮಾತ್ಮನು ಆತನ ಸಾಧು ಸ್ವಭಾವಕ್ಕೆ ಮೆಚ್ಚಿ ಪ್ರತ್ಯಕ್ಷವಾಗಿ, ತನ್ನ ಅಮೃತಮಯ ಹಸ್ತಗಳಿಂದ ಆತನ ದೇಹಸ್ಪರ್ಶಮಾಡಿ ಅನುಗ್ರಹಿಸಿದನು. ಒಡನೆ ಆತನ ಕರಚರಣಾದಿಗಳು ಬೆಳೆದು ದೇಹವು ಮೊದಲಿನಂತೆಯೇ ಸುಶೋಭಿತವಾಯಿತು. ಅತ್ತ ಆ ಚೋರರಿಗೂ ಸದ್ಗತಿಯುಂಟಾಯಿತು." ಹೀಗೆ ಸಜ್ಜನರಲ್ಲಿ ದ್ವೇಷವನ್ನು ಸಾಧಿಸಿದ ದುಷ್ಟರಿಗೂ ಕಾಲಾನುಕಾಲದಲ್ಲಿ ಉತ್ತಮ ಗತಿಯುಂಟಾಗುತ್ತದೆಂದೂ ಕತ್ತಲೆಯು ಘನೀಭೂತವಾಗಿ ಇದ್ದಷ್ಟೂ ದೀಪಕ್ಕೆ ಪ್ರಕಾಶವುಂಟಾಗುವಂತೆ, ದುರ್ಜನರ ಮೂಲಕವೇ ಸಜ್ಜನರ ಮತ್ತು ಸಾಧುಗಳ ಮಹಿಮೆಯು ಹೆಚ್ಚು ವ್ಯಕ್ತವಾಗುವುದೆಂದೂ ಆ ಕಥೆಯು ಹೇಳುತ್ತದೆ.

ಮೊಣಕಾಲು ಮೊಣಕೈಗಳವರೆಗೂ ಕತ್ತರಿಸಲ್ಪಟ್ಟು ವಿರೂಪವಾಗಿದ್ದ ತಮ್ಮ ಗುರುವಿನ ಹಸ್ತಪಾದಗಳು ಒಮ್ಮೆಗೇ ಬೆಳೆದುದನ್ನು ಕಂಡು ರಾಜನೂ ಪರಿವಾರದವರೂ ಪರಮಾಶ್ಚರ್ಯ ಮಗ್ನರಾದರು. ಈ ಅದ್ಭುತ ಪ್ರಸಂಗಕ್ಕೆ ಕಾರಣವೇನೆಂದೂ ಹಿಂದಣ ಸಂಗತಿಯನ್ನು ತಿಳಿಸಬೇಕೆಂದೂ

ಪ್ರಾರ್ಥಿಸಲು-ಜಯದೇವನು ಎಲ್ಲಾ ಸಂಗತಿಗಳನ್ನೂ ತಿಳಿಸಿದನು. ಮಹಾ ದಾರುಣವಾದ ಆ ವಾರ್ತೆಯನ್ನು ಕೇಳಿ, ಎಲ್ಲರೂ ತಮ್ಮ ಗುರುವಿನ ಮಹಾಸಾಧು ಸ್ವಭಾವಕ್ಕಾಗಿಯೂ ಭಗವಂತನ ಭಕ್ತಪರಾಧೀನತೆಗಾಗಿಯೂ, ಪರಮ ಸಂತುಷ್ಟರಾಗಿ ಜಯ ಜಯ ಧ್ವನಿಮಾಡಿದರು.



## ಅಧ್ಯಾಯ ೫ — “ಆನಂದಾಮೃತ ಶರಧಿ”

ಸಾಧುಗಳ ಚರಿತ್ರೆಯು ಪರಮಾಶ್ಚರ್ಯಕರವಾದುದು. ಅವರು ಕೇವಲ ಭಗವನ್ನಿರ್ಭರ ಚಿತ್ತವೃತ್ತಿಯುಳ್ಳವರಾಗಿರುವರಾದುದರಿಂದ, ಅವರ ಕಷ್ಟ ತಾಪತ್ರಯ, ಅನುವ್ರ-ಆಪತ್ತುಗಳನ್ನೆಲ್ಲ ದೇವರೇ ತಲೆಯಲ್ಲಿ ಹೊತ್ತು, ವಿಚಿತ್ರ ರೀತಿಯಿಂದ ಪಾರುಮಾಡುತ್ತಿರುವನು. ಆದರೆ ಅವು ಜಗತ್ತಿಗೆ ಅದ್ಭುತವೆಂದು ತೋರುವವು. ಭಗವಂತನು ಅಘಟನೆಗಳನ್ನಾದರೂ ಘಟನೆಮಾಡುವುದರಲ್ಲಿ ಸಮರ್ಥನು ಎಂಬ ವಿಚಾರವನ್ನೂ, ಭಗವದ್ಭಕ್ತರ ಚಿತ್ತಸ್ಥೈರ್ಯ ಶ್ರದ್ಧಾಭಕ್ತಿಗಳ ಪ್ರಮಾಣವನ್ನೂ ನಂಬಲಾರದವರು, ಇವುಗಳನ್ನು ಕೇವಲ ಅತ್ಯುಕ್ತಿ. ಅಸಾಧ್ಯ ಪ್ರಮೇಯಗಳೆಂದು ಹೇಳಿಬಿಡುವರು. ಮಾತ್ರವಲ್ಲ-ಮೂಢಭಾವನೆಯವರ ಕಟ್ಟುಕಥೆಗಳೆಂದು ಅವಹೇಳನಮಾಡಲೂ ಹಿಂದೆಗೆಯರು. ಅದಕ್ಕೆ ಉಪಾಯವಿಲ್ಲ. ಆದರೆ ಪ್ರಪಂಚವು ನಮ್ಮ ಕಣ್ಣಿಗೆ ಕಾಣುವ ದಿಗಂತದಷ್ಟು ಮಾತ್ರವಲ್ಲದೆ ಹೇಗೆ-ಅಗಾಧ ಅತ್ಯಗಾಧ ಪ್ರಮಾಣದಲ್ಲಿ ವಿಸ್ತಾರವಾಗಿದೆಯೋ ಹಾಗೆಯೇ, ಭಗವನ್ಮಹಿಮೆಯೂ ನಮ್ಮ ಕ್ಷುದ್ರ ಚಿತ್ತವೃತ್ತಿಯ ತಿಳುವಳಿಕೆಗೆ ಬಂದಷ್ಟು ಮಾತ್ರವಲ್ಲದೆ-ಅತ್ಯಗಾಧ ಪ್ರಮಾಣದಲ್ಲಿ ಇದೆಯೆಂದು ತಿಳಿಯಬೇಕು. ಅಷ್ಟೇ ಅಲ್ಲ! ಭಗವಂತನ ಅತ್ಯಾಶ್ಚರ್ಯಕರವಾದ ಈ ಸೃಷ್ಟಿಯಲ್ಲಿ, ನಮ್ಮ ಬಡ ವಿಜ್ಞಾನಶಾಸ್ತ್ರವು ಕಂಡು ಹಿಡಿದಿರುವುದಕ್ಕಿಂತಲೂ, ಅತಿಶಯವಾದ ಅನೇಕಾನೇಕ ಪದಾರ್ಥ ವಿಶೇಷಗಳು ಇವೆಯೆಂಬುದನ್ನೂ ವಿಚಾರವಂತರು ಮರೆಯಬಾರದು. ಬೆಟ್ಟದ ಮೇಲಕ್ಕೆ ಏರುತ್ತ ಏರುತ್ತ ದಿಗಂತವು ನಮ್ಮ ದೃಷ್ಟಿಯಲ್ಲಿ ವಿಸ್ತಾರಗೊಂಡು ಹೆಚ್ಚು ಹೆಚ್ಚು ಪದಾರ್ಥ

ಗಳೂ ಕಂಡುಬರುವಂತೆ, ನಮ್ಮಲ್ಲಿ ಬಣ ಹಮ್ಮೆಯು ನೀಗಿ, ಪರಮಾತ್ಮ ಜ್ಞಾನವು ಮನಸ್ಸಿನಲ್ಲಿ ಹೆಚ್ಚು ಹೆಚ್ಚು ಪರಿಸ್ಫುಟವಾಗಿ ಕಂಡುಬಂದಂತೆಲ್ಲಾ, ಭಗವದ್ವಿಷಯವೂ, ಭಗವನ್ಮಹಿಮೆಯೂ ಸ್ಪಷ್ಟರೀತಿಯಿಂದ ಕಂಡುಬರುವುವು ಈಗ ಅದ್ಭುತಗಳೆಂದು ತೋರುವ ಸಂಗತಿಗಳೆಲ್ಲವೂ ಆಗ ಸಹಜ ಸ್ವರೂಪದಿಂದ ದೃಷ್ಟಿಗೋಚರವಾಗುವುವು!

ನಮ್ಮ ಕಥಾನಾಯಕನ ಪತ್ನಿ ಪದ್ಮಾವತೀದೇವಿಯ ಪಾತಿವ್ರತ್ಯ ಪ್ರಭಾವವನ್ನು ವಿಶದಗೊಳಿಸುವ ಒಂದು ಅದ್ಭುತ ವಿಚಾರವು ನಡೆಯಿತೆಂದೂ ಆತನ ಚರಿತ್ರೆಯಲ್ಲಿ ಉಕ್ತವಾಗಿದೆ. ಕ್ರೌಂಚರಾಜನು ಜಯದೇವಸ್ವಾಮಿಯ ಅಗಾಧ ಮಹಿಮೆಯನ್ನೂ, ಭಕ್ತಿಪಾರವಶ್ಯತೆಯನ್ನೂ ಕಂಡು ಪರಮ ಸಂತುಷ್ಟನಾಗಿ-'ಆಹಾ, ಸಾಧುಗಳ ಜೀವನವು ಎಷ್ಟು ಪವಿತ್ರತಮವಾದುದು! ಇಂತಹ ಸರ್ವಶ್ರೇಷ್ಠ ಸಾಧು ಜೀವನ ಮಾರ್ಗವನ್ನು ಅವಲಂಬಿಸದಮೇಲೆ ಮನುಷ್ಯನಾಗಿ ಹುಟ್ಟಿಯೂ ಏನು ಸಾರ್ಥಕ? ಅತಿಶಯ ಕ್ಲೇಶದಾಯಕವಾದ ಈ ರಾಜತ್ವವೇಕೆ? ಈ ಸಂಸಾರವೇಕೆ?" ಎಂದು ಮುಂತಾಗಿ ಭಾವಿಸಿ, ಗುರುಗಳಲ್ಲಿಗೆ ನಡೆದರು-'ಮಹಾಸ್ವಾಮಿ, ಈ ಲೋಕಯಾತ್ರೆಯಲ್ಲಿ ನಡೆದು ಅಗಾಧ ಸಂತಾಪಗೊಂಡಿದ್ದೇನೆ. ನನಗೆ ಸನ್ಯಾಸವನ್ನು ಕೊಡಿರಿ' ಎಂದನು. ಜಯದೇವನು-'ಅಪ್ಪಾ ಸನ್ಯಾಸವೇಕೆ? ಕಾಷಾಯವಸ್ತ್ರ ದಂಡಕಮಂಡಲುಗಳಿಂದಲೇ ಸನ್ಯಾಸವೆಂಬುದು ಪ್ರಾಪ್ತವಾಗುವುದೆಂದು ತಿಳಿದಿರುವೆಯೇನು? ಅದು ಹುಟ್ಟಬೇಕಾದುದು ಮನಸ್ಸಿನಲ್ಲಿ! ಬಾಹ್ಯದಲ್ಲಲ್ಲ-ಬಾಹ್ಯದಲ್ಲಿ ಎಲ್ಲಾ ವಸ್ತು ಸಾಮಗ್ರಿಗಳೊಂದಿಗೂ ಬೆರೆತಿದ್ದರೂ, ಮನಸ್ಸು ಅವುಗಳಲ್ಲಿ ಪ್ರವೇಶಗೊಳ್ಳದಿದ್ದರಾಯಿತು. ಅದೇ ಸನ್ಯಾಸವು ನೋಡು. ಸಂಸಾರಿಯಾದ ನಾನಿಲ್ಲವೇ? ನಾನೇನು ಸನ್ಯಾಸಿಯೇ? ನೀನೂ ರಾಜ್ಯವನ್ನು ಆಳಿಕೊಂಡೇ ಸನ್ಯಾಸಿಯಾಗಿರು!" ಎಂದರು. ಅವರ ಈ ಹೇಳಿಕೆಯು ರಾಜನಿಗೆ ಪರಮಾಶ್ಚರ್ಯವನ್ನು ಉಂಟುಮಾಡಿತು. 'ತಾವು ಗೃಹಸ್ಥ ಧರ್ಮಿಗಳೇ!-ಹಾಗಿದ್ದರೆ ತಮ್ಮ ಪತ್ನಿಯೆಲ್ಲಿ?' ಎನ್ನಲು, ಜಯದೇವನು, ಕಂದುಬಿಲ್ವಗ್ರಾಮದ ಹಿಂದಿನ ತನ್ನ ವೃತ್ತಾಂತವನ್ನೆಲ್ಲ ಹೇಳಿದನು. ಒಡನೆ ರಾಜಾಜ್ಞೆಯಿಂದ ರಾಣೀವಾಸದ ಸ್ತ್ರೀ ಪರಿವಾರವು, ದಿವ್ಯವಸ್ತ್ರ ಭೂಷಣಗಳು, ಪಾಲಕಿ ಮುಂತಾದುವುಗಳನ್ನು ತೆಗೆದುಕೊಂಡು ಹೊರಟು ಕಂದುಬಿಲ್ವಾಗ್ರಾಮವನ್ನು ಸೇರಿ, ಪದ್ಮಾವತೀದೇವಿ (ಜಯದೇವ ಕವಿ)ಯು

ಮನೆಯನ್ನು ವಿಚಾರಿಸಿಕೊಂಡು, ಅಲ್ಲಿ ಮೇನೆಯನ್ನಿಳಿಸಿ ಗುರುಪತ್ನಿಗೆ ವಂದಿಸಿದರು.

ಹಿಂದೆ ಭಗವಾನ್‌ದಾಸನು ಜಯದೇವಸ್ವಾಮಿಯನ್ನು ಕರೆದುಕೊಂಡು ಹೋದಾಗ್ಗೆ ಪದ್ಮಾವತೀದೇವಿಯು ತನ್ನ ತಂದೆಯೊಂದಿಗೆ ತೌರುಮನೆಗೆ ಹೋಗಿದ್ದಳು. ಆದರೆ ಅಲ್ಲಿಂದ ಹಿಂದಿರುಗಿ ಬಂದು ನೋಡುವಾಗ್ಗೆ, ತನ್ನ ಭರ್ತನು ಎಲ್ಲಿಗೆ ಹೋದನೆಂಬುದೂ ಆತನ ವಿಚಾರವೇನೆಂಬುದೂ ತಿಳಿಯದೆ, ವ್ಯಸನಾಕ್ರಾಂತಳಾಗಿದ್ದಳು. ಮಾವನು ಆತನಿಗಾಗಿ ಎಲ್ಲೆಲ್ಲೋ ಹುಡುಕಿದನಾದರೂ, ಎಲ್ಲೂ ಆತನ ಗುರುತು ಸಿಕ್ಕಲಿಲ್ಲ. ಕೊನೆಗೆ ತನ್ನ ಭರ್ತನು ಎಲ್ಲೋ ಅರಣ್ಯದಲ್ಲಿ ಗುಹೆಯನ್ನು ಸೇರಿ ತಪೋನಿರತನಾದನೆಂದು ತಿಳಿದು ಪದ್ಮಾವತೀ ದೇವಿಯು ಕೇವಲ ಏಕವಸ್ತ್ರ-ಏಕಭುಕ್ತಗಳಿಂದ ವಿರಾಗಿಣಿಯಂತೆ ಕಾಲಯಾಪನೆ ಮಾಡುತ್ತ ಭಗವಧ್ಯಾನ ನಿರತಳಾಗಿದ್ದಳು. ಆದರೆ ಇಂದು ಪಾಲಕಿಯೊಂದಿಗೆ ರಾಜಸೇವಕರು ಬಂದು, ತನ್ನನ್ನು ಭರ್ತನೆಡೆಗೆ ಆಹ್ವಾನಿಸಿದುದು ಆಕೆಗೆ ಪರಮಾಶ್ಚರ್ಯವನ್ನುಂಟುಮಾಡಿತು. ಸ್ವರ್ಗವೇ ಕೈಗೆ ಸಿಕ್ಕಂತೆ ಆನಂದಿಸಿದಳು. ಪಾಲಕಿಯಲ್ಲಿ ಕುಳ್ಳಿರಲು ಮೊದಲು ಸಂಕೋಚಪಟ್ಟಳಾದರೂ, ನೆರೆಮನೆಯ ಸ್ತ್ರೀಪರಿವಾರದವರ ಪ್ರಾರ್ಥನೆಯನ್ನು ಮೀರಲಾರದೆ, ಕೊನೆಗೆ ಪಾಲಕಿಯಲ್ಲಿ ಕುಳಿತು ಪ್ರಯಾಣ ಮಾಡಿದಳು.

ಒಂದು ಕ್ಷುದ್ರಪರ್ಣ ಕುಟೀರದಲ್ಲಿ ವಾಸಿಸುತ್ತಿದ್ದ ಬಡಬ್ರಾಹ್ಮಣನಾದ ತನ್ನ ಭರ್ತನು ರಾಜ ಗುರುವಾಗಿ, ದಿವ್ಯ ಮಹಲಿನಲ್ಲಿ ವಾಸಿಸುತ್ತಿರುವುದನ್ನು ಕಂಡು, ಪದ್ಮಾವತೀದೇವಿಯು ಪರಮಾಶ್ಚರ್ಯಗೊಂಡು ಒಳಹೊಕ್ಕು ಸಾಷ್ಟಾಂಗ ನಮಸ್ಕಾರಮಾಡಿ, ಆನಂದ-ವ್ಯಸನಗಳ ಸಮ್ಮೇಳನದಿಂದ ಹೊರಡುತ್ತಿದ್ದ ದುಃಖಾಶ್ರು-ಆನಂದ ಬಾಷ್ಪಗಳೆರಡರಿಂದಲೂ ಆತನ ಪಾದಗಳನ್ನು ಅಭಿಷೇಕಿಸಿದಳು. ತರುವಾಯ ಇಬ್ಬರೂ ತಮಗೆ ಆವರೆಗೆ ಪ್ರಾಪ್ತವಾದ ಸುಖ ದುಃಖಗಳನ್ನೆಲ್ಲಾ ಕಥೆಯಾಗಿ ಒಬ್ಬರೊಂದಿಗೊಬ್ಬರು ಹೇಳಿಕೊಂಡರು. ತನ್ನ ಪ್ರಿಯಭರ್ತನಿಗೆ ಹಸ್ತಪಾದಾದಿಗಳು ಛೇದಿತವಾಗಿದ್ದುವೆಂದು ತಿಳಿದು ಪದ್ಮಾವತೀದೇವಿಯು ಅಧಿಕ ಸಂತಾಪಪಟ್ಟಳು. ತರುವಾಯ ಭಗವದನುಗ್ರಹದಿಂದ ಪ್ರಾಪ್ತವಾದ ಸರ್ವಾಂಗ ಪರಿಪೂರ್ಣತೆಗಾಗಿ ಆ ದೀನವತ್ಸಲನನ್ನು ಅನನ್ಯ ಮನಸ್ಕಳಾಗಿ ಹೊಗಳಿದಳು. ಆ ಗಂ

ಡಹೆಂಡಿರು, ಹೀಗೆ ಪರಮಸಂತೋಷದಿಂದ-ಹಿಂದಿನಂತೆಯೇ ಆ ದೇಶದವರೆಲ್ಲರಿಗೂ ಆದರ್ಶದಂಪತಿಗಳಾಗಿ ವಾಸಿಸಿದರು.

ಒಂದಾನೊಂದುದಿನ, ಪದ್ಮಾವತೀದೇವಿಯು ರಾಣೀವಾಸದಲ್ಲಿ ಅರಮನೆಯ ಸ್ತ್ರೀಜನರ ಮಧ್ಯದಲ್ಲಿ ಉನ್ನತಾಸನದಮೇಲೆ ಕುಳಿತು ಅಹಲ್ಯಾ, ಅನಸೂಯೆ, ಲೋಪಾಮುದ್ರೆ, ಸೀತೆ, ಸಾವಿತ್ರಿ, ಅರುಂಧತಿ ಮುಂತಾದ ಮಹಾಪತಿವ್ರತೆಯರ ದಿವ್ಯಚರಿತ್ರೆಗಳನ್ನು ಹೇಳುತ್ತಿದ್ದಳು. ಆವೇಳೆಗೆ, ಒಬ್ಬ ಚೇಟಿಯು ಬಂದು, ರಾಜನ ಬಂಧುವೊಬ್ಬನು ಮೃತನಾದನೆಂದೂ, ಆತನ ಪತ್ನಿಯು ಪತಿ ದೇಹದೊಂದಿಗೇ ಸಹಗಮನ ಮಾಡಿದಳೆಂದೂ ತಿಳಿಸಿದಳು. ಅಲ್ಲಿದ್ದ ಸ್ತ್ರೀಯರೆಲ್ಲರೂ, ಆಮಾತನ್ನು ಕೇಳಿ ಆಕೆಯ ಪಾತಿವ್ರತ್ಯ ಪ್ರಭಾವವನ್ನು ಹೊಗಳಿ ವಿಶೇಷ ಮೆಚ್ಚಿಕೊಂಡರು. ಆದರೆ, ಪದ್ಮಾವತೀದೇವಿ ಮಾತ್ರ ಆಸಂದರ್ಭದಲ್ಲಿ ಯಾವ ಆಶ್ಚರ್ಯವನ್ನೂ ಸೂಚಿಸದೆ, ಎಂದಿನಂತೆ ಮೌನವಾಗಿ ಕುಳಿತಿದ್ದಳು. ಅದನ್ನು ಕಂಡು ರಾಜಪತ್ನಿಯು- 'ತಾಯೇ, ಪಾಪಮಯವಾದ ಈ ಕಲಿಯುಗದಲ್ಲಿ ಆ ಪತಿವ್ರತೆಯು ತನ್ನ ಪತಿಯೊಂದಿಗೆ ದೇಹತ್ಯಾಗ ಮಾಡಿದುದು ಅದ್ಭುತವಲ್ಲವೆ! ಇದು ನಿಮಗೆ ಆಶ್ಚರ್ಯವನ್ನಾಗಲೀ ಆನಂದವನ್ನಾಗಲೀ ಉಂಟುಮಾಡುವುದಿಲ್ಲವೆ ? ' ಎಂದಳು. ಆದನ್ನು ಕೇಳಿದ, ಗುರುಪತ್ನಿಯು-'ಹಾಗಲ್ಲ, ಪತಿವ್ರತೆಯಾದವಳು, ಪತಿಯೊಂದಿಗೆ ದೇಹವನ್ನು ಅಗ್ನಿಗೆ ಒಪ್ಪಿಸುವುದರಲ್ಲಿ ಮಹತ್ವವಿಲ್ಲ. ಪತಿಯ ಮರಣವಾರ್ತೆಯು ತಿಳಿದೊಡನೆಯೇ, ದೇಹವನ್ನು ಬಿಟ್ಟು ಪ್ರಾಣವಾಯುವು ಹೊರಟುಹೋಗಬೇಕು. ಅದು ಮಾತ್ರ ಪಾತಿವ್ರತ್ಯವೆಂದಳು. ರಾಜಪತ್ನಿಯು ಆ ಮಾತನ್ನು ಕೇಳಿ ಅಸೂಯೆಗೊಂಡು, ಅದರ ಪರೀಕ್ಷೆಯನ್ನು ನೋಡಬೇಕೆಂದು ತನ್ನ ಮನಸ್ಸಿನಲ್ಲಿ ಸಂಕಲ್ಪ ಮಾಡಿದಳು.

ಮುಂದೆ ಒಂದುದಿವ ರಾಜನು ಬೇಟೆಗೆ ಹೊರಟು-ಒಂದಿಗೇ ನನ್ನ ಗುರುವಾದ ಜಯದೇವ ಸ್ವಾಮಿಯನ್ನೂ ಕರೆದೊಯ್ದನು. ರಾಜ ಪತ್ನಿಯು ಒಬ್ಬ ರಾಜಸೇವಕನನ್ನು ಕರೆದು-'ಎಲೈ, ಪದ್ಮಾವತೀದೇವಿಯು ತನ್ನ ಅಂತಃಪುರದಲ್ಲಿ ಕುಳಿತಿದ್ದ ವೇಳೆಯಲ್ಲಿ, ಬೇಟೆಯ ಪರಿವಾರದಿಂದ ಹಿಂದಿರುಗಿ ಬಂದವನಂತೆ ತೋರ್ಪಡಿಸಿಕೊಂಡು-'ಜಯದೇವಸ್ವಾಮಿಯು ಆರಣ್ಯದಲ್ಲಿ ಹುಲಿಯಿಂದ ಸಂಹೃತನಾದನೆಂದು ತಿಳಿಸು'' ಎಂದು ಆಜ್ಞಾಪಿಸಿದಳು.

ರಾಜನು ಬೇಟೆಗೆ ಹೊರಟ ಮೂರನೆಯದಿನ, ಅವನು ಬಂದು ಬಹು ಗಾಬರಿಗೊಂಡಂತೆ ನಟಿಸಿ ರಾಣಿಯು ಹೇಳಿದ್ದಂತೆಯೇ ತಿಳಿಸಿದನು. ರಾಜಪತ್ನಿಯು, ಹಾಹಾಕಾರಮಾಡುತ್ತ - 'ಅಕ್ಕಟಾ ಎಂತಹ ದುರಂತ ಸಂಕಟವು ಪ್ರಾಪ್ತವಾಯಿತು' ಎಂದು ರೋದಿಸತೊಡಗಿದಳು. ಅಲ್ಲೇ ಕುಳಿತಿದ್ದ ಪದ್ಮಾವತೀದೇವಿಯು ಆ ಸಂಗತಿಯನ್ನು ಕೇಳಿ-ರಾಜದೂತನನ್ನು ಕುರಿತು-'ಇದು ಸತ್ಯವೇ ! ಸತ್ಯವೇ !' ಎಂದು ಎರಡುಬಾರಿ ಕೇಳಿದಳು. ಅವನು ನಿಶ್ಚಯವೆಂದನು. ರಾಜಪತ್ನಿಯು-'ಅಯ್ಯೋ ಬೇಟೆಯಿಂದ ಬಂದ ಇವನು, ನೋಡಿಬಂದ ಸಂಗತಿಯನ್ನಲ್ಲದೆ ಸುಳ್ಳನ್ನೇಕೆ ಹೇಳುವನು ?' ಎಂದಳು. ಅಷ್ಟೆ ! ಅಷ್ಟುಮಾತುಗಳು ರಾಜಪತ್ನಿಯ ಬಾಯಿಂದ ಬಂದುದೇ ತಾವಕಾಶವು; ಪದ್ಮಾವತೀದೇವಿಯು ಒಡನೆ ನಿಶ್ಚೇಷ್ಟಿತಳಾಗಿ ಭೂಮಿಯ ಮೇಲೆ ಬಿದ್ದುಬಿಟ್ಟಳು. ರಾಜಪತ್ನಿಯು-'ಅಕ್ಕಟಾ ಘಾತವಾಯಿತು' ಎಂದುಕೊಂಡು, ಆಕೆಯ ಬಳಿಗೆ ಬಂದು ಕೈಹಿಡಿದು ನೋಡಿದಳು. ಆದರೇನು, ಆಗಲೇ ಪ್ರಾಣವಾಯುವು ದೇಹವನ್ನು ಬಿಟ್ಟು ಹೊರಟು ಹೋಗಿದ್ದಿತು.

ತನ್ನ ಮೂರ್ಖತೆಯಿಂದ ಪ್ರಾಪ್ತವಾದ ಆ ದುರಂತ ಕಾರ್ಯಕ್ಕಾಗಿ ರಾಣಿಯು ಮಹಾ ವ್ಯಸನಾಕ್ರಾಂತಳಾಗಿ, ಹೀಗೆ ಸ್ತ್ರೀಹತ್ಯಮಾಡಿದ ತನಗೆ ಗತಿಯೇನೆಂದು ಸಂಕಟಪಡುತ್ತಿದ್ದಳು. ಅಷ್ಟರಲ್ಲಿ ರಾಜಧಾನಿಗೆ ಬಂದ ರಾಜನಿಗೂ ಜಯದೇವನಿಗೂ ಈ ವೃತ್ತಾಂತವು ತಿಳಿಯಿತು. ರಾಜನು ತನ್ನ ಪತ್ನಿಯ ಅವಿವೇಕಕ್ಕಾಗಿ ನಿಂದಿಸತೊಡಗಿದನು. ಆದರೆ ಜಯದೇವನು, ತನಗೆ ಅಂತಹ ಅಪಕಾರ ಮಾಡಿದರೆಂದು ಯಾರನ್ನೂ ನಿಂದಿಸದೆ-ದ್ವೇಷಿಸದೆ, ಎಲ್ಲರನ್ನೂ ಸಮಾಧಾನವಾಗಿರಿರೆಂದು ಹೇಳಿ, ತನ್ನ ತಂಬೂರಿ ತಾಳ ಮುಂತಾದ ಭಜನೆಯ ಸಾಧನಗಳನ್ನು ತರಿಸಿ, ಸರ್ವಚೈತನ್ಯ ಸ್ವರೂಪನೂ ದೇವಾದಿದೇವನೂ, ಭಕ್ತವತ್ಸಲನೂ, ಆದ ಶ್ರೀಮನ್ನಾರಾಯಣನನ್ನು ಅನೇಕ ವಿಧ ಮನೋಹರ ದಿವ್ಯಗೀತೆಗಳಿಂದ ಸ್ತೋತ್ರಮಾಡಿಕೊಂಡು ಆಕೆಯ ಶವದ ಸುತ್ತಲೂ ನರ್ತನಮಾಡತೊಡಗಿದನು.—ಕೇವಲ ಭಕ್ತಿಪಾರವಶ್ಯದಿಂದ, ಜಯದೇವಸ್ವಾಮಿಯು ಅರೆದೆರೆದ ಕಣ್ಣುಗಳಿಂದ ಆನಂದ ಬಾಷ್ಪವು ಸುರಿಯುತ್ತಿರಲು, ಬಾಹ್ಯಜ್ಞಾನವನ್ನು ಮರೆತು ಮಾಡಿದ ಆ ಪ್ರಾರ್ಥನೆಯು ಶ್ರೀ ಮನೋಹರನಾದ ನಾರಾಯಣ ಮೂರ್ತಿಗೆ ಅರಿಕೆ

ಯಾಯಿತೋ ಎಂಬಂತೆ, ಒಡನೆ ಆ ಸಾಧ್ವೀಮಣಿಯು ಚೇತನಗೊಂಡು, ನಿದ್ರೆಹೋದವರು ಏಳುವಂತೆ, ಎದ್ದು ಪತಿಯ ಪಾದಗಳನ್ನು ಆಲಂಗಿಸಿ, ಕಣ್ಣೀರಿನಿಂದ ತೊಳೆದು ರೆಪ್ಪೆಗಳಿಂದ ಒರೆಸಿದಳು. ಆಗ ಆ ದೃಶ್ಯಗಳನ್ನೆಲ್ಲಾ ಅಲ್ಲೇ ನಿಂತು ನೋಡುತ್ತಿದ್ದ ರಾಜರಾಣಿಯರಿಗೂ, ಪರಿವಾರಕ್ಕೂ ಪ್ರಜಾಸಮುದಾಯಕ್ಕೂ ಎಷ್ಟುಮಟ್ಟಿನ ಆನಂದವಾಗಿದ್ದೀತು! ಭಗವಂತನ ಅಪಾರ ಮಹಿಮೆಯು ಈ ಬಗೆಯಲ್ಲಿ ಪ್ರಕಟವಾದುದನ್ನೂ, ಅದೃಶ್ಯನಾದ ಆ ದೇವರ ದೇವನನ್ನು ಅಷ್ಟುಮಟ್ಟಿಗೆ ಒಲಿಸಿಕೊಂಡಿರುವ ಜಯದೇವ ಸ್ವಾಮಿಯ ಅಪಾರ ಭಕ್ತಿ ಭಾಗ್ಯವನ್ನೂ ಹೊಗಳುತ್ತಾ, ಸಕಲರೂ, ಜಯದೇವನ ಭಜನೆಯೊಂದಿಗೆ ಬೆರೆದು ಭಜನೆಮಾಡುತ್ತಾ ಆನಂದಾಮೃತ ಶರಧಿಯಲ್ಲಿ ಮಗ್ನರಾಗಿಬಿಟ್ಟರು. ತರುವಾಯ ಶ್ರೀ ಜಯದೇವ-ಪದ್ಮಾವತೀ ದೇವಿಯರು ಬಹುಕಾಲ ಜಗದುದ್ಧಾರಕ್ಕಾಗಿ ಜೀವಿಸಿ, ಮುಂದೆ ಯುಕ್ತ ಕಾಲದಲ್ಲಿ ಯೋಗಮಾರ್ಗದಿಂದ ದೇಹತ್ಯಾಗಮಾಡಿ ಪರಮ ಪದವನ್ನು ಗಳಿಸಿಕೊಂಡರು.



# ಉಪಸಂಹಾರ.

‘ಗೀತ ಗೋವಿಂದ’ ಕಾವ್ಯರತ್ನವನ್ನು ಬರೆದ ಜಯದೇವ ಕವೀಶ್ವರನ ಚರಿತ್ರೆಯನ್ನು ಭಕ್ತಿವಿಜಯ ಗ್ರಂಥವನ್ನು ಅನುಸರಿಸಿ ಈ ವರೆಗೆ ಹೇಳಲಾಯಿತು. ಆದರಲ್ಲಿ ಆತನು ಯಾವ ಕಾಲದಲ್ಲಿ ಜೀವಿಸಿದ್ದನು ಎಂಬ ಮುಂತಾದ ವಿಚಾರಗಳು ಹೊರಪಡುತ್ತಲಿಲ್ಲ. ಆದರೆ, *‘ಗೀತ ಗೋವಿಂದಕಾವ್ಯಂ’ ಎಂಬ ಸಂಸ್ಕೃತ ಗ್ರಂಥದಲ್ಲಿ ಕೊಟ್ಟಿರುವ ಆತನ ಚರಿತ್ರೆಯು ಭಕ್ತಿವಿಜಯದ ಕಥೆಯಿಂದ ಸ್ವಲ್ಪಮಟ್ಟಿಗೆ ಭಿನ್ನಿಸುತ್ತದೆ. ಆದರಲ್ಲಿ “ಜಯದೇವನ ತಂದೆಯ ಹೆಸರು ಶ್ರೀ ಭೋಜದೇವ. ತಾಯಿಯ ಹೆಸರು ರಾಧಾದೇವಿ ಅಥವ ರಮಾದೇವಿ. ಪರಾಶರ ನಾಮಧೇಯನಾದ ಒಬ್ಬ ರಸಿಕ ಬ್ರಾಹ್ಮಣನು ಆತನ ಸ್ನೇಹಿತನಾಗಿದ್ದನು. ಆತನ ಭಾರ್ಯೆಯ ಹೆಸರು ಪದ್ಮಾವ

*ಮುಂಬಯಿಯ ‘ನಿರ್ಣಯಸಾಗರ’ ಛಾಪಖಾನಾಪ್ರತಿ. ಶ್ರೀಮಚ್ಚಂದ್ರದತ್ತಕೃತ ‘ಭಕ್ತಮಾಲಾಖ್ಯ’ ಗ್ರಂಥ.

ಶ್ರೀದೇವಿ. ಉಮಾಪತಿಧರ, ಶರಣ, ಗೋವರ್ಧನಾಚಾರ್ಯ, ಧೋಯಿಕವಿರಾಜ ಮುಂತಾದ ಕವಿಗಳು ಆತನ ಸಮಕಾಲೀನರು. ಆತನು ಕಿಂದುಬಿಲ್ವ ನಾಮಕ ಗ್ರಾಮದಲ್ಲಿ ವಾಸಿಸಿದ್ದನು. ವಂಗದೇಶಾಧಿಪನಾದ ಬಲ್ಲಾಳಸೇನನ ಮಗನಾದ ಲಕ್ಷ್ಮಣಸೇನನ ಆಸ್ಥಾನದಲ್ಲಿ ಆತನು ಮಹಾ ಕವಿಯಾಗಿದ್ದನು. ಆತನು ಹನ್ನೊಂದನೆಯ ಶತಮಾನದಲ್ಲಿ ಜೀವಿಸಿದ್ದನು' ಎಂದು ಮುಂತಾಗಿ ಹೇಳಲ್ಪಟ್ಟಿದೆ. ಆದರೆ ಮತ್ತೊಂದು †ಆಂಗ್ಲಭಾಷಾ ಗ್ರಂಥದಲ್ಲಿ ಆತನು ಹೆಚ್ಚು ಕಡಮೆ ಐನೂರು ವರ್ಷಗಳಿಗೆ ಮುಂಚೆ ಜೀವಿಸಿದ್ದಿರಬಹುದು ಎಂದು ಅಭಿಪ್ರಾಯ ಬರುತ್ತಿದೆ.

ಶ್ರೀ ರಾಧಾಕೃಷ್ಣರ ಪವಿತ್ರ ಪ್ರೇಮಾಮೃತರಸವನ್ನು ಗೀತಗೋವಿಂದವೆಂಬ ಕಾವ್ಯರೂಪ ಪಾತ್ರೆಯಲ್ಲಿ ಶೇಖರಿಸಿಟ್ಟಿರುವ ಶ್ರೀ ಜಯದೇವ ಕವಿ ಶೇಖರನು, ತನ್ನ ಅಪ್ರತಿಮ ಕವಿತಾ ಸಾಮರ್ಥ್ಯದಿಂದ, ಶ್ರೀಕೃಷ್ಣ ಸ್ವಾಮಿಯ ಮಾನುಷಲೀಲಾ ವಿನೋದಗಳನ್ನು ಮೃದು ಮಧುರ ಪದಪುಂಜಗಳಿಂದ ರಚಿಸಿ, ಭಾಷಾ ಭಾಂಡಾರಕ್ಕೆ ಅಮೌಲ್ಯ ಗೌರವವನ್ನು ಉಂಟು ಮಾಡಿದ್ದಾನೆ. ಶೃಂಗಾರ ರಸಪ್ರಧಾನವಾದ ಈ ಕಾವ್ಯವು, ಭಕ್ತಿರಸದ ಒರತೆಯನ್ನೂ ಒಳಗೊಂಡಿದೆ. ರಾಗಿ-ವಿರಾಗಿಗಳಿಗೆ ಪ್ರಿಯವಾದ ವಿಷಯಗಳೆರಡೂ ಇದರಲ್ಲಿ ದೊರೆಯುತ್ತಿವೆ

ಯಾವ ಆ ಕವಿಶೇಖರನು ಶ್ರೀಕೃಷ್ಣ ಭಕ್ತಿ ಭಾಗ್ಯದಿಂದ ತ್ರಿಲೋಕದ ಐಶ್ವರ್ಯವನ್ನೂ ತೃಣವೆಂದು ಬಗೆದಿದ್ದನೋ, ಯಾವ ಆ ಸಾಧು ಶಿರೋಮಣಿಯು, ಶತ್ರು ಮಿತ್ರರೆಂಬ ಭೇದ ಭಾವವನ್ನು ಮರೆತು, ಕೇವಲ ಸಾಧುಭಾವದಿಂದ ಜೀವಿಸಿ ಅಂದು ಲೋಕಕ್ಕೆ ಮಾರ್ಗದರ್ಶಕನಾದನೋ ಆ ಮಹಾಮಹಿಮನ ಜೀವಿತವು ಕಾಮಕ್ರೋಧಾದಿಗಳ ಪ್ರಭಾವದಿಂದ ಸಂಸಾರ ಪ್ರವಾಹದಲ್ಲಿ ಕೊಚ್ಚಿ ಹೋಗುತ್ತಿರುವ ಮಾನವ ಸಮುದಾಯಕ್ಕೆ ಇಂದೂ ಮಾರ್ಗತೋರಿ ರಕ್ಷಿಸಲಿ.

ತ ಥಾ ಸ್ತು.



---

†'Rambles in Vedanta' by, B. R. Rajam Iyer.

ಶ್ರೀರಾಮ ಸಹಾಯಂ

# ಸುಬೋಧ ಕುಸುಮಾಂಜಲಿ ಗ್ರಂಥ ಮಾಲಾ

## (ಸಚಿತ್ರ ಮಾಸ ಪುಸ್ತಕಾವಳಿ)

---

**ಮುನ್ನುಡಿ:—**

ಭಾರತದೇಶೀಯನ ಅತಿ ಮುಖ್ಯವಾದ ಒಂದು ಅಪೇಕ್ಷೆಯೆಂದರೆ, ಜನನ ಮರಣಗಳ ಕೋಟಲೆಯಿಂದ ಬಿಡುಗಡೆಹೊಂದಬೇಕೆಂಬುದು, ಮತ್ತು ಅತನಿಗೆ ಅತಿಶಯ ಭಯಪ್ರದ ವಿಚಾರವೆಂದರೆ, ಪುನಃ ಮಾತೃ ಗರ್ಭವಾಸದುಃಖವನ್ನನುಭವಿಸಿ ಪುನರ್ಜನ್ಮಹೊಂದಬೇಕೆಂಬುದು. ಅವನ ಜೀವಿತವೆಲ್ಲವೂ—ಲೌಕಿಕವಾಗಿ ಯಾವ ಮಾರ್ಗವನ್ನು ಅನುಸರಿಸಿಯಾದರೂ ಸಾಗಲಿ: ಕೊನೆಯ ಅವನ ಅಪೇಕ್ಷೆಯು ಮಾತ್ರ, ಈ ಜನನ ಮರಣ ಪ್ರವಾಹದಿಂದ ತಪ್ಪಿಸಿಕೊಳ್ಳಬೇಕೆಂಬುದೊಂದಲ್ಲದೆ ಬೇರೇನೂ ಅಲ್ಲ. ಭಾರತ ದೇಶದ ಸನಾತನ ವೈದಿಕ ಧರ್ಮವನ್ನು ಪ್ರತಿಪಾದಿಸುವ ದ್ವೈತಾದ್ವೈತ ವಿಶಿಷ್ಟಾದ್ವೈತಗಳು ಮಾತ್ರವಲ್ಲ—ಬೌದ್ಧ ಜೈನಮತಗಳ ಬೋಧನೆಗಳಾದರೂ ಈ ಅಪೇಕ್ಷೆಯನ್ನೇ ಪುಷ್ಟೀಕರಿಸುತ್ತವೆ.

—'ಲೌಕಿಕ ಜೀವನವು ಅತಿಶಯಕ್ಲೇಶದಾಯಕವಾದುದು; ಮಾತೃಗರ್ಭದವಾಸವು ಅತ್ಯಂತ ಬಂಧಕಸ್ವರೂಪವಾದುದು. ಆದುದರಿಂದ ಈ ಬಾಧೆಯನ್ನು ತಪ್ಪಿಸಿಕೊಂಡರೆ ಜೀವಾತ್ಮನು, ಸ್ವತಂತ್ರನಾಗಿ ನಿಶ್ಚಿಂತನಾಗಿ ಇರಬಹುದು' ಎಂಬ ಭಾವನೆಯೊಂದೇ—ಭಾರತೀಯನ ಜೀವನದ ಗುರಿಯು. ಆದರೆ ವೈದಿಕ ಧರ್ಮದರೀತ್ಯಾ ಈ ದುಃಖದಿಂದ ಬಿಡುಗಡೆಯೂ, ಪುನರ್ಜನ್ಮರಾಹಿತ್ಯವಾದ ಸುಖಪ್ರಾಪ್ತಿಯೂ ಜೀವನಿಗೆ ಲಭಿಸಬೇಕೆಂದರೆ, ಅವನು ಬ್ರಾಹ್ಮಣ ಜನ್ಮದಲ್ಲಿ ಹುಟ್ಟಿ, ಅದರಲ್ಲಿ ಆಶ್ರಮಧರ್ಮಗಳನ್ನು ಪಾಲನೆಮಾಡಿ, ಕ್ರಮಸನ್ಯಾಸವನ್ನು ಸ್ವೀಕಾರ ಮಾಡಿದರಲ್ಲದೆ ಸಾಧ್ಯವಿಲ್ಲ. ಈ ಬಗೆಯಲ್ಲಿ ದುರಂತ ಕಷ್ಟದಿಂದ ಬಿಡು

ಗಡೆಹೊಂದಿ ಸ್ವತಂತ್ರವಾಗಲು ನಡುವೆಹೀಗೆ ಅಡ್ಡವಾಗಿದ್ದ ಈ ಪ್ರತಿಬಂಧಕವೊಂದನ್ನು ನಿವಾರಿಸಿದರೆ, ತರುವಾಯ ಎಲ್ಲರೂ ಆ ಸುಖಮಯಸ್ಥಿತಿಯನ್ನು ಹೊಂದಲು ಯೋಗ್ಯರಾಗಬಹುದು, ಎಂಬೊಂದು ಭಾವನೆಯು ಈಗ್ಗೆ ಸುಮಾರು ಇಪ್ಪತ್ತೈರು ಶತಮಾನಗಳ ಹಿಂದೆ ಕೆಲವರ ಮನಸ್ಸಿನಲ್ಲಿ ಹುಟ್ಟಿತು. ಅಲ್ಲದೆ, ಈ ಭಾವನೆಯೊಂದಿಗೇ ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರ ಎಂಬೀ ಚತುರ್ವರ್ಣಗಳೂ ಕ್ರಮವಾಗಿ ಬ್ರಹ್ಮನ ಮುಖ ಬಾಹು ತೊಡೆ ಪಾದ ಎಂಬೀ ಅಂಗಗಳಿಂದ ಉದ್ಭವಿಸಿದುವುಗಳು ಎಂಬೀ ವೈದಿಕಧರ್ಮದ ಸಿದ್ಧಾಂತವಾದರೂ ಎಲ್ಲರಿಗೂ ಸಮ್ಮತವಾಗಲಿಲ್ಲ. ಕಷ್ಟನಿವಾರಣೆಗಾಗಿಯೂ,—ಬಂಧಕದಿಂದ ಬಿಡುಗಡೆಹೊಂದುವುದಕ್ಕೆ ಪ್ರಯತ್ನಿಸುವುದಕ್ಕಾಗಿಯೂ ಆದರೂ ಪ್ರತಿಯೊಬ್ಬನಿಗೂ ಸ್ವಾತಂತ್ರ್ಯವಿರಬೇಡವೇ ಎಂಬ ವಿಚಾರವು ಜನಮನದಲ್ಲಿ ಹೀಗೆ ಕೆಲಸಮಾಡತೊಡಗಲು, ಮೇಲ್ಕಂಡ ವೇದಮತದ ಅಭಿಪ್ರಾಯವನ್ನು ಪ್ರತಿಭಟಿಸುವ ಪ್ರಯತ್ನವು ನಡೆಯುಸಾಗಿತು. ಹಾಗೆ ಹುಟ್ಟಿದ ಚಳವಳಿಗೆ ಜನ್ಮದಾತರೂ ಅಗ್ರಗಾಮಿಗಳೂ ಆಗಿ ಮುಂದೆ ಬಂದವರು ಕ್ಷತ್ರಿಯವರ್ಗದವರು. ಹೀಗೆ ಅಂದೇ ಬ್ರಾಹ್ಮಣರ ಶ್ರೇಷ್ಠತೆಯನ್ನು ಪ್ರತಿಭಟಿಸಿ ಮುಂದೆ ಬಂದ ಬೌದ್ಧಮತದ ಸ್ಥಾಪಕರೂ ಮತ್ತು ಜೈನಮತದ ಉದ್ಧಾರಕರೂ ಸಹ ಈ ಕ್ಷತ್ರಿಯವರ್ಣದವರೇ ಆಗಿದ್ದಾರೆ.

ಜೈನರು ಹಿಂದುಗಳಂತೆ ದೇವರನ್ನು ವಿಗ್ರಹಾದಿಗಳ ರೂಪದಲ್ಲಿ ಪೂಜಿಸುವುದಿಲ್ಲ. ಆದರೆ ಅವರಿಗೆ ದೇವರೇ ಇಲ್ಲವೆಂಬ ಭಾವನೆಯು ಮಾತ್ರ ತಪ್ಪಾದುದು. ಅವರಿಗೆ ದೇವರ ಗುಣಗಳು ಮಾತ್ರ ಮುಖ್ಯವಲ್ಲದೆ, ನಾಮ ಮತ್ತು ರೂಪಗಳಲ್ಲ. *'ರಾಗ ದ್ವೇಷ ಮೊದಲಾದ ದುಷ್ಪರಿಣಾಮಗಳಿಲ್ಲದವನೂ, ಪತ್ನಿಪುತ್ರಾದಿ ವ್ಯಾಮೋಹವಿಲ್ಲದವನೂ, ದುಷ್ಟನಿಗ್ರಹ ಶಿಷ್ಟಪರಿಪಾಲನೆಯೆಂಬ ಜಂಜಾಟದಲ್ಲಿ ಸಿಲುಕದವನೂ

---

* Praktana Vimarsa vichakshana Rao Bahadur R. Narasimhachar M. A., M. R. A. S, Bangalore in 'Viswabandhu Special number' 22-10-1925. pp. 11.

ಶತ್ರುನಿಗ್ರಹಾರ್ಥವಾಗಿ ಅಸ್ತ್ರಶಸ್ತ್ರಗಳನ್ನು ಧರಿಸದಿರುವವನೂ, ಕೃತಕೃತ್ಯನೂ, ಕ್ರೌರ್ಯಸ್ವಭಾವವಿಲ್ಲದ ಶಾಂತಮೂರ್ತಿಯೂ, ಸರ್ವಜ್ಞನೂ, ಅನಂತ ಸುಖಾನಂದಮಯನೂ, ಕರ್ಮಮಲರಹಿತನೂ, ಆದ ಪರಿಶುದ್ಧ ಪರಮಾತ್ಮನು ದೇವರು' ಎಂಬುದು ಜೈನಮತೀಯರ ಭಾವನೆ. ಹಿಂದೂಗಳಂತೆ, ಹರಿ, ಹರ-ವಿನಾಯಕ-ಆಂಜನೇಯಾದಿ ದೇವತಾವಿಗ್ರಹಗಳನ್ನಲ್ಲ-ಜೈನರು, ತೀರ್ಥಂಕರರೆಂಬ ಇಪ್ಪತ್ತನಾಲ್ಕು ಮಂದಿ ಮಹಾಸಾಧು ಮೂರ್ತಿಗಳನ್ನು ಪೂಜೆಮಾಡುತ್ತಾರೆ. ಈ ತೀರ್ಥಂಕರರಲ್ಲಿ ಒಬ್ಬೊಬ್ಬರೂ ಅಗಾಧ ಸ್ವಾರ್ಥತ್ಯಾಗಮಾಡಿದವರು. ಕಾಮಕ್ರೋಧ ದಂಭ ದರ್ಪ ಮುಂತಾದ ಅಂತಶ್ಶತ್ರುಗಳ ಪ್ರಾಬಲ್ಯವನ್ನು ಅಗಾಧ ತಪಶ್ಚರ್ಯದಿಂದ ಹುಟ್ಟಡಗಿಸಿದ ಮಹನೀಯರು-ಮಹಾತ್ಮರು. ಈ ತೀರ್ಥಂಕರಲ್ಲಿ ಪ್ರಾಥಮಿಕನು ಋಷಭದೇವ ಅಥವ ಆದಿನಾಥನೆಂಬಾತನು. ಕೊನೆಯಾತನೇ ನಮ್ಮ ಕಥಾನಾಯಕನಾದ ವರ್ಧಮಾನ ಅಥವ ಮಹಾವೀರಸ್ವಾಮಿಯು. ಈ ಮಹಾಪುರುಷನ ಜೀವಿತವೇ ಸಂಗ್ರಹವಾಗಿ ಈ ಚಿಕ್ಕ ಪುಸ್ತಕದಲ್ಲಿ ಕೊಡಲ್ಪಡಲಿರುವುದು.

ಈ ಗ್ರಂಥ ಲೇಖನಕ್ಕೆ ಆವಶ್ಯಕವಾದ ಕೆಲವು ಸಾಧನಗಳನ್ನು ಒದಗಿಸಿಕೊಟ್ಟ ಬೆಂಗಳೂರಿನ ಶ್ರೀಮಾನ್ ಪಂಡಿತ ಯಲ್ಲಪ್ಪನವರೂ, ಮಹಾವೀರಸ್ವಾಮಿಯ ಜೀವಿತ ವಿಚಾರದಲ್ಲಿ ಜೈನ ಪುರಾಣೋಕ್ತವಾದ ಅನೇಕ ವಿಚಾರಗಳನ್ನು ತಿಳಿಸಿ ಸಹಾಯಮಾಡಿದ ಜೈನಸಾಧುವರ್ಯರೂ ಶ್ವೇತಾಂಬರ ಜೈನಪಂಗಡದ ಗುರುಗಳೂ ಆದ ಶ್ರೀ ಶ್ರೀ ಇತಿಹಾಸ ತತ್ವ ಮಹೋದಧಿ ಜೈನಾಚಾರ್ಯ ಇಂದ್ರಸೂರಿ ಸ್ವಾಮಿಜೀಯವರೂ ನಮ್ಮ ಕೃತಜ್ಞತೆಗೆ ಪಾತ್ರರಾಗಿದ್ದಾರೆ.

ಕರ್ಣಾಟಕ ಭಾಷಾಭಿಮಾನಿಗಳು, ಗ್ರಂಥಮಾಲೆಯ ಇತರ ಕುಸುಮಗಳಂತೆಯೇ ಇದನ್ನೂ ತಮ್ಮ ಸ್ವಾಭಾವಿಕ ಪ್ರೇಮದಿಂದ ಸ್ವೀಕರಿಸಿ ಗ್ರಂಥಮಾಲಾಭಿವೃದ್ಧಿಗಾಗಿ ಆಶೀರ್ವದಿಸಬೇಕಾಗಿ ಪ್ರಾರ್ಥನೆ.

ತಾ॥ ೧-೧೧-೧೯೩೦.
ಬೆಂಗಳೂರು ನಗರ

ಇತಿ ಸುಜನ ವಿಧೇಯ,
**ಯಂ. ರಾಮರಾವ್.**

ಶ್ಲೋಕ:—

ಯೋ ವಿಶ್ವಂ ವೇದವೇದ್ಯಂ ಜನನ ಜಲನಿಧೇರ್ಭಂಗಿನಃ ಪಾರದೃಶ್ವಾ
ಪೌರ್ವಾಪರ್ಯಾವಿರುದ್ಧಂ ವಚನ ಮನುಪಮಂ ನಿಷ್ಕಲಂಕಂ ಯದೀಯಂ
ತಂವಂದೇ ಸಾಧುವಂದ್ಯಂ ಸಕಲಗುಣನಿಧಿಂ ಧ್ವಸ್ತ ದೋಷದ್ವಿಷಂತಂ
ಬುದ್ಧಂವಾ ವರ್ಧಮಾನಂ ಶತದಲನಿಲಯಂ ಕೇಶವಂ ವಾ ಶಿವಂವಾ

ಅರ್ಥ:—" ಯಾವನು ತಿಳಿಯುವುದಕ್ಕೆ ಯೋಗ್ಯವಾದುದನ್ನೆಲ್ಲ ತಿಳಿದಿರುತ್ತಾನೋ, ಚಂಚಲವಾದ ಸಂಸಾರವೆಂಬ ಸಮುದ್ರದ ಪಾರವನ್ನು ನೋಡಿರುತ್ತಾನೋ, ಯಾವನ ವಚನವು ಪೂರ್ವಾಪರ ವಿರೋಧವಿಲ್ಲದುದೂ, ಅಸದೃಶವೂ ನಿರ್ದೋಷವೂ ಆಗಿದೆಯೋ ಸಾಧುಗಳಿಂದ ವಂದ್ಯನೂ, ಸಮಸ್ತ ಗುಣಗಳಿಗೆ ನಿಧಿಯೂ, ದೋಷಗಳೆಂಬ ಶತ್ರುಗಳನ್ನು ನಾಶಮಾಡಿರುವವನೂ ಆದ ಆ ದೇವರು ಬುದ್ಧನಾಗಿರಲಿ,--ವರ್ಧಮಾನನಾಗಿರಲಿ, ಬ್ರಹ್ಮನಾಗಿರಲಿ, ವಿಷ್ಣುವಾಗಿರಲಿ, ಶಿವನಾಗಿರಲಿ,—ಅವನನ್ನು ವಂದಿಸುತ್ತೇನೆ. "

'ವಿಶ್ವಬಂಧು'





ಜೈನ ಮತೋದ್ಧಾರಕ ಮಹಾವೀರಸ್ವಾಮಿ

ಶ್ರೀರಾಮಸಹಾಯಂ

ಜೈನಮತೋದ್ಧಾರಕ

# ಮಹಾವೀರಸ್ವಾಮಿ

---

**ಅಧ್ಯಾಯ. ೧.** **'ಗರ್ಭಾಂತರ'**

ನಮ್ಮ ಮಾತೃಭೂಮಿಯಾದ ಈ ಭಾರತದೇಶವು 'ವೀರಮಾತೆ' ಎಂಬ ಸಾರ್ಥಕನಾಮಕ್ಕೆ ಪಾತ್ರವಾಗಿದೆ. ಈಕೆಯು ಪವಿತ್ರಗರ್ಭದಲ್ಲಿ, ಜನ್ಮಧಾರಣಮಾಡಿದ ಹಲವು ಮಂದಿ-ನರೋತ್ತಮರು ಈ ಸಂಗತಿಯನ್ನು ಸ್ಥಿರಗೊಳಿಸಿದ್ದಾರೆ. ಇದು ಕೇವಲ ಅಭಿಮಾನಬದ್ಧರಾಗಿ ನಾವು ಹೇಳಿಕೊಳ್ಳುವ ಆತ್ಮಪ್ರಶಂಸಾ ಪ್ರತಾಪವಲ್ಲ.-ದೇಶದ ಚರಿತ್ರೆಯೇ ಇದಕ್ಕೆ ಆಧಾರವಾಗಿರುವುದು.

ವೀರರಲ್ಲಿ ಹಲವು ಬಗೆಗಳುಂಟು. ರಣರಂಗದಲ್ಲಿ ಶಸ್ತ್ರಧಾರಣ ಮಾಡಿ, ಶತ್ರುವಿನ ಎದುರಿನಲ್ಲಿ ನಿಂತು ಮುಂದಿಟ್ಟ ಹೆಜ್ಜೆಯನ್ನು ಹಿಂದಕ್ಕೆ ಜರುಗಿಸದೆ—ಶತ್ರುವಿಗೆ ಬೆನ್ನುತೋರಿಸದೆ, ಆಮರಣಾಂತವಾಗಿ ಒಡಲರಿಯದಂತೆ ಹೋರಾಡುವವನು **ರಣವೀರನೆಂಬುದು** ಹೇಗೆ ಪದ್ಧತಿಯಿದೆಯೋ, ಹಾಗೆಯೇ, ಧರ್ಮಪ್ರಚಾರಕ್ಕಾಗಿ ಮನೆಮಾರುಗಳನ್ನು ಬಿಟ್ಟು, ಹೆಂಡಿರು ಮಕ್ಕಳು ಮುಂತಾದ ಆತ್ಮೀಯರನ್ನು ತ್ಯಜಿಸಿ, ಗ್ರಾಮೈಕರಾತ್ರಿಯಾಗಿ ತಿರುಗಿ. ಶೀತೋಷ್ಣ ಸುಖದುಃಖ ವೊದಲಾದ ದ್ವಂದ್ವಗಳನ್ನು ಒಂದೇ ವಿಧವಾಗಿ ತಿಳಿಯುವವನಾರೋ- ಮತ್ತು ಕೊ

ನೆಗೆ ಆ ಧರ್ಮದೀಕ್ಷೆಯನ್ನು ಪಾಲನೆಮಾಡಲಿಕ್ಕಾಗಿ ಪ್ರಾಣತ್ಯಾಗಮಾಡ ಲಿಕ್ಕೂ ಸಹ ಯಾವ ಮನುಷ್ಯನು ಸಿದ್ಧನಾಗುವನೋ ಅಂತಹ ಪುರುಷಶ್ರೇಷ್ಠನನ್ನು **ಧರ್ಮವೀರನೆಂದು** ಸಂಬೋಧಿಸುವುದು ರೂಢಿಯಾಗಿದೆ. ಆದರೆ ಈ ಇಬ್ಬರಲ್ಲಿ ರಣವೀರನಿಗಿಂತಲೂ ಧರ್ಮವೀರನೇ ಅತಿಶಯ ಸತ್ವಶಾಲಿಯಿರಬೇಕು. ಏಕೆಂದರೆ ರಣವೀರನ ಯುದ್ಧವು ಶಸ್ತ್ರ ಮೂಲಕವಾಗಿ ಬಾಹ್ಯವಾಗಿ ಜರುಗತಕ್ಕದು. ಧರ್ಮವೀರನ ಯುದ್ಧವಾದರೋ ಬಾಹ್ಯಯುದ್ಧವಲ್ಲ, ಅಂತರ್ಯುದ್ಧವು. ಆತನು ಕಾಮ ಕ್ರೋಧ ಲೋಭ ಮೋಹ ಮದಮಾತ್ಸರ್ಯಗಳೆಂಬ ಆರುಮಂದಿ ಅಂತಶ್ಶತ್ರುಗಳೊಂದಿಗೆ ಅಗಾಧ ಯುದ್ಧಮಾಡಿ ಅವರನ್ನು ಹುಟ್ಟಡಗಿಸಬೇಕಾಗಿದೆ. ಆ ಶತ್ರುಗಳಾದರೋ, ಕಣ್ಣಿಗೆ ಕಾಣಿಸುವವರಲ್ಲ-ಕೈಗೆ ಸಿಕ್ಕುವರಲ್ಲ. ಒಂದುಬಗೆಯಿಂದ ಅಣಗಿಸಲೆತ್ನಿಸಿದರೆ, ಮತ್ತೊಂದು ಬಗೆಯಿಂದ ತಲೆಯೆತ್ತಿ, ವೃದ್ಧಿಗೊಳ್ಳುವ ಸ್ವಭಾವವುಳ್ಳವರವರು. ಹೀಗಿರುವುದರಿಂದ ಮನುಷ್ಯನು ಬಾಹ್ಯಶತ್ರುಗಳನ್ನು ಒಂದುವೇಳೆ ಶಸ್ತ್ರಬಲದಿಂದ ಜಯಿಸಬಹುದಾದರೂ, ಈ ಅಂತಶ್ಶತ್ರುಗಳನ್ನು ಜಯಿಸಬಹುದೆಂಬುದು ಅತಿಶಯ ಕಷ್ಟದಾಯಕವಾದ ಕಾರ್ಯವೆಂಬುದನ್ನು, ಈ ವಿಚಾರವನ್ನು ಕುರಿತು ಸ್ವಲ್ಪ ದೀರ್ಘವಾಗಿ ವಿಚಾರಮಾಡಬಲ್ಲವರಲ್ಲದೆ ಅನ್ಯರು ತಿಳಿಯಲಾರರು.

ಒಂದು ದೇಶದ ಜೀವಿತದಲ್ಲಿ, ದೇಶೋದ್ಧಾರಕ್ಕಾಗಿ ರಣರಂಗದಲ್ಲಿ ಹೋರಾಡಿ, ಅದಕ್ಕಾಗಿ ದೇಹವನ್ನೊಪ್ಪಿಸುವ ರಣಧೀರರು ಹೇಗೆ ಕಾಲಾನುಸಾರವಾಗಿ ಆವಶ್ಯಕವೆನ್ನಿಸುವರೋ,-ಧರ್ಮೋದ್ಧಾರಕ್ಕಾಗಿ ಜೀವನ ಸಂಗ್ರಾಮದಲ್ಲಿ ಹೋರಾಡಿ ಅದಕ್ಕಾಗಿ ಆತ್ಮಾರ್ಪಣೆಮಾಡಲು ಸಿದ್ಧರಾಗುವ ಧರ್ಮವೀರರೂ ಹಾಗೆಯೇ ಆವಶ್ಯಕವೆನ್ನಿಸುವರು. ಈ ಎರಡು ಕಾರ್ಯಗಳಿಗೂ ಮನುಷ್ಯನನ್ನು ಪ್ರೇರಿಸುವುದಕ್ಕೆ ಆತನ ಹೃದಯದಲ್ಲಿ ಅಕ್ಷಯವಾದ ತ್ಯಾಗಭಾವನೆಯು ಮನೆಮಾಡಿಕೊಂಡಿರದಿದ್ದರೆ ಉಪಯೋಗವಿಲ್ಲ. ತನ್ನ ದೇಹಸೌಖ್ಯಕ್ಕಾಗಿ ಬೇಕೆಂದು ಅಪೇಕ್ಷಿಸುವ ವಿಷಯಭೋಗಗಳನ್ನೂ ಧನಕನಕಾದಿಗಳನ್ನೂ ಸಕಲವನ್ನೂ ತ್ಯಾಗಮಾಡಲು ಸಿದ್ಧನಾದರಲ್ಲದೆ ಮನುಷ್ಯನು ಯಾವುದೊಂದು ಮಹತ್ಕಾರ್ಯಮಾಡ

ಲೂ ಯೋಗ್ಯನಾಗಲಾರನು. ಅಜೇಯವಾದ ಮನೋದಾರ್ಢ್ಯವಿಲ್ಲದಿದ್ದರೆ, ಈ ಬಗೆಯ ತ್ಯಾಗಬುದ್ಧಿಯು ಅವನ ಮನಸ್ಸಿನಲ್ಲಿ ನೆಲೆಗೊಳ್ಳಲಾರದು. ಇದುದರಿಂದ, ದೇಶದಲ್ಲಿ ಯಾವುದೊಂದು ಮಹತ್ಕಾರ್ಯ ನಡೆಯಬೇಕೆಂಬ ಪರಿಸ್ಥಿತಿಯೊದಗಿದಾಗ್ಗೆ, ಹಿಮಾಚಲದಂತೆ ಅಚಲ ಮನೋದಾರ್ಢ್ಯವನ್ನುಂಟಾಗಿ ತಮ್ಮದೆಂಬ ಸಮಸ್ತವನ್ನೂ ಕೊನೆಗೆ ಪ್ರಾಣವನ್ನೂ ತೃಣಪ್ರಾಯವಾಗಿ ತ್ಯಜಿಸಲು ಹಿಂಜರಿಯದೆ ತಮ್ಮ ಧ್ಯೇಯಸಾಧನೆಗಾಗಿ ಹೆಣಗುವ ಧೀರೋತ್ತಮರು ಜನ್ಮವೆತ್ತುವರು. ಇಂತಹ ನರೋತ್ತಮರ ಜನ್ಮವೇ ಭೂಮಿಯನ್ನು ಸ್ವರ್ಗವೆನ್ನಿಸುವುದಲ್ಲದೆ, ಅತ್ತಿಯ ಹಣ್ಣಿನಲ್ಲಿ ಹುಟ್ಟುವ ಹುಳುಗಳಂತೆ, ಮಾತಾಪಿತೃಗಳ ಕಾಮಫಲವಾಗಿ ಹುಟ್ಟಿ, ಭೂಮಿಭಾರಕರಾಗಿ ಜೀವಿಸಿ, ಧರ್ಮಾಧರ್ಮಗಳ ಲಕ್ಷ್ಯವಿಲ್ಲದೆ ತಿಂದು ಕುಡಿದು ಬದುಕಿ, ಕೊನೆಗೊಂದು ದಿನ ಸತ್ತು ಮಣ್ಣುಗೂಡುವ ಕ್ಷುದ್ರ ಸಂತಾನರು ಮೂರುಕೋಟಿಯಿದ್ದರೇನು ? ಮೂವತ್ತುಕೋಟಿಯಿದ್ದರೇನು ?

ಈಗ್ಗೆ ಸುಮಾರು ಇಪ್ಪತ್ತಾರು ಶತಮಾನಗಳ ಹಿಂದೆ, ಭಾರತದೇಶದ ಪರಿಸ್ಥಿತಿಯು ಧಾರ್ಮಿಕವಾಗಿ ಬಹು ಶೋಚನೀಯಾವಸ್ಥೆಯಲ್ಲಿದ್ದಿತು. ಭಾರತ ಯುದ್ಧವಾದ ತರುವಾಯ ಶ್ರೀಕೃಷ್ಣ ಭಗವಾನನಿಂದ ಸ್ಥಾಪಿತವಾದ ವರ್ಣಾಶ್ರಮಧರ್ಮಗಳು ಎರಡುಸಾವಿರ ವರ್ಷಗಳಿಗೆ ಮೇಲ್ಪಟ್ಟ ದೀರ್ಘಕಾಲದ ಆಚರಣೆಯಿಂದ ಸಂಪೂರ್ಣವಾಗಿ ಮಾಲಿನ್ಯದನ್ನು ಹೊಂದಿದ್ದುವು. ಎಲ್ಲೆಲ್ಲೂ, ಧರ್ಮದ ಹೆಸರಿನಲ್ಲಿ ಹಲವು ದುಷ್ಕಾರ್ಯಗಳು ನಡೆಯುಸಾಗಿದ್ದುವು. ಯಜ್ಞದ ಹೆಸರಿನಲ್ಲಿ ಪಶುಹಿಂಸೆಯು ಅಗಾಧ ಪ್ರಮಾಣದಿಂದ ನಡೆಯುತ್ತಾ ಸರ್ವತ್ರ ಹಾಹಾಕಾರವು ವ್ಯಾಪಿಸಿದ್ದಿತು. ಪ್ರಜೆಗಳ ದೃಷ್ಟಿಯಿಂದ ಜೀವನದ ಉನ್ನತಧ್ಯೇಯಗಳು ಮರೆಯಾಗಿ ಭೋಗಲಾಲಸತೆಯು ಅಧಿಕವಾಗಿದ್ದಿತು. ಜನಮನವು ವಿಶೇಷ ತಳಮಳಗೊಂಡಿದ್ದಿತು. ಈ ತಳಮಳವನ್ನು ಹೋಗಲಾಡಿಸಿ, ಲೋಕದಲ್ಲಿ ಸುಖಶಾಂತಿ ಸಮಾಧಾನಗಳನ್ನು ಸ್ಥಾಪಿಸಲು, ಒಬ್ಬ ಮಹಾ ಪುರುಷನ ಜನನವು ಅತ್ಯಾವಶ್ಯಕವೆನ್ನಿಸಿತು. ಹಾಗೆ ಜನಿಸುವ ಪುರುಷ ಪುಂಗವನು ತನ್ನ ಜೀವಿತದಲ್ಲಿ ಅಗಾಧ ಸ್ವಾರ್ಥತ್ಯಾಗವನ್ನು ಪ್ರದರ್ಶಿಸಿ

ಲೋಕಕ್ಕೆ ಮಾರ್ಗದರ್ಶಕನಾಗಬೇಕಾದುದು, ಆ ಕಾಲಸ್ಥಿತಿಯನ್ನನುಸರಿಸಿ ಆವಶ್ಯಕವಾಗಿದ್ದಿತು. ಧನಲೋಭಕ್ಕೆ ಬಲಿಬಿದ್ದು ಒಡಲು ತಿಳಿಯದೆ ಬಡಜನರ ಅಸುವನ್ನು ಹಿಂಡುತಿದ್ದ ಆಗಿನ ಜನತೆಗೆ ಆತನು ತನ್ನ ಅಗಣಿತ ಐಶ್ವರ್ಯಪದವಿಗಳನ್ನು ತ್ಯಜಿಸಿ, ಶೀತೋಷ್ಣಾದಿ ದ್ವಂದ್ವಗಳನ್ನು ಸಹಿಸಿ, ಉದಾಹರಣ ಸ್ವರೂಪನಾಗಬೇಕಾದುದು ಆವಶ್ಯಕವಿದ್ದಿತು. ಮುಖ್ಯವೇನು-ತ್ಯಾಗವೆಂಬ ಪದದ ಪರಮಾವಧಿ ಪ್ರಮಾಣದ ಅರ್ಥವು ಎಂಥದೂ ಎಷ್ಟುಮಟ್ಟಿನದೂ ಎಂಬುದರ ಪ್ರತ್ಯಕ್ಷ ಆಚರಣೆಯು ಪ್ರಪಂಚಕ್ಕೆ ವಿಶದೀಕರಿಸಲ್ಪಟ್ಟು ಜನಮನವು ತಿದ್ದಲ್ಪಡಬೇಕಾದುದು ಆಗಿನ ಕಾಲಸ್ಥಿತಿಗೆ ಅತ್ಯಾವಶ್ಯಕವಾಗಿದ್ದಿತು. ಈ ಮಹತ್ಕಾರ್ಯವನ್ನು ನೆರವೇರಿಸಲು, ಜಗದ್ರಕ್ಷಕನಾದ ಭಗವಾನನ ಸಂಕಲ್ಪಾನುಸಾರವಾಗಿಯೋ ಎಂಬಂತೆ, ಒಬ್ಬ ಪುರುಷಶ್ರೇಷ್ಠನು ಭಾರತಭೂಮಿಯಲ್ಲಿ ಜನ್ಮವೆತ್ತಿದನು. ಆತನ ಜೀವಿತದಲ್ಲಿ ತೋರಿಬಂದಂತಹ ತ್ಯಾಗದ ಪರಮಾವಧಿಯು ಮತ್ತಾವ ಜೀವಿತದಲ್ಲೂ ಎಲ್ಲೂ ಕಂಡುಬಂದುದಿಲ್ಲ. ಅಗಾಧ ಐಶ್ವರ್ಯಸಂಪನ್ನವಾದ ರಾಜವಂಶದಲ್ಲಿ ಜನ್ಮಿಸಿ, ತುಂಬುಪ್ರಾಯದಲ್ಲಿ ಸನ್ಯಾಸಗ್ರಹಣಮಾಡಿ, ಸ್ವಾಭಾವಿಕವಾಗಿಯೇ ಶಸ್ತ್ರಧಾರಿಗಳೆನ್ನಿಸಿದ ಕ್ಷತ್ರಿಯಕುಲದಲ್ಲಿ ಜನ್ಮಿಸಿದ್ದರೂ ಅಹಿಂಸಾ ಧರ್ಮಪ್ರಚಾರಮಾಡಿ, ಆ ಸಾಧುಶಿರೋಮಣಿಯು ದಂಭ ದರ್ಪಮಾನಾಪಮಾನಗಳು ಮುಂತಾದ ದ್ವಂದ್ವಗಳ ಸೋಂಕಿಲ್ಲದೆ, ಹಿಮಾಲಯದ ಶಿಖರಪ್ರದೇಶದಲ್ಲಿನ ಪರಿಶುದ್ಧವಾದ ಹಿಮಗಡ್ಡೆಯಂತೆ ಪರಮಪರಿಶುದ್ಧವಾದ ತನ್ನ ಜೀವಿತದಿಂದ ಲೋಕವನ್ನು ಬೆಳಗಿದನು. ಆತನೇ ನಮ್ಮ ಕಥಾನಾಯಕನಾದ ವರ್ಧಮಾನ ಅಥವ ಮಹಾವೀರಸ್ವಾಮಿಯು. ಆತನ ಪವಿತ್ರಜೀವಿತವಿದು. ಕರ್ಣಾಟಕ ಮಹಾಜನರು ಇದನ್ನು ಸಾವಧಾನದಿಂದ ಪಠಿಸಿ ಆನಂದಿಸಬೇಕು.

ಉತ್ತರಭಾರತದಲ್ಲಿ, ಈಗಿನ ಮುಜಫರ್ ಪುರದ ಡಿಸ್ಟ್ರಿಕ್ಟಿನಲ್ಲಿರುವ ಪಾಟ್ನಾ ನಗರಕ್ಕೆ ಸಮೀಪದಲ್ಲಿ ಈಗ್ಗೆ ಸುಮಾರು ಇಪ್ಪತ್ತೈದು ಇಪ್ಪತ್ತಾರು ಶತಮಾನಗಳ ಪೂರ್ವದಲ್ಲಿ ವೈಶಾಲಿ ಎಂಬೊಂದು ನಗರರಾಜವು ಕಂಗೊಳಿಸುತ್ತಿದ್ದಿತು. ಆ ನಗರದಲ್ಲಿ ಧರ್ಮಪರಾಯಣರೂ ವೇದಶಾಸ್ತ್ರಾಧ್ಯಯನಶೀಲರೂ ಆದ ಬ್ರಾಹ್ಮಣಶ್ರೇಷ್ಠರೂ, ಮಹಾಶೂರರೂ

ಧರ್ಮಮಾರ್ಗಾನುವರ್ತಿಗಳೂ ಪ್ರಜಾಪಾಲನೈಕ ತತ್ಪರರೂ ಆದ ಕ್ಷತ್ರಿಯೋತ್ತಮರೂ, ಕುಬೇರನನ್ನು ನಾಚಿಸುವಂತಹ ಧನವಂತರೂ ತ್ಯಾಗಶೀಲರೂ ಆದ ವೈಶ್ಯಜನರೂ, ಸೇವಾಪರಾಯಣರೂ ಸಂತುಷ್ಟರೂ ವಿನಯಶೀಲರೂ ಆದ ಶೂದ್ರವರ್ಗದವರೂ ವಿಶೇಷಸಂಖ್ಯೆಯಿಂದ ವಾಸಿಸುತ್ತಿದ್ದರು. ಈ ಒಂದೊಂದು ಪಂಗಡದವರೂ ಮುಖ್ಯನಗರಕ್ಕೆ ಸಮೀಪದಲ್ಲೇ ಇದ್ದ ಬ್ರಾಹ್ಮಣಕುಂಡಗ್ರಾಮ, ಕ್ಷತ್ರಿಯಕುಂಡಗ್ರಾಮ, ವಾಣಿಜ್ಯಗ್ರಾಮ ಎಂಬ ಹೆಸರಿನ ಬೇರೆ ಬೇರೆ ಭಾಗಗಳಲ್ಲಿ, ಉನ್ನತವಾದ ಮತ್ತು ಶೃಂಗಾರವಾದ ಗೃಹಾಂಗಣಾದಿಗಳನ್ನು ನಿರ್ಮಿಸಿಕೊಂಡು, ಅಲ್ಲಿ ತಮ್ಮ ಪರಿವಾರಯುಕ್ತರಾಗಿ ಸುಖವಾಗಿ ವಾಸಿಸುತ್ತಿದ್ದರು. ಆ ನಗರದ ವಿವಿಧ ಪಂಗಡದ ಪ್ರಜೆಗಳಲ್ಲಿ ಪರಸ್ಪರ ಸ್ನೇಹಪ್ರೇಮಗಳು ನೆಲೆಗೊಂಡು, ಸರ್ವರೂ ಸುಖಸಮಾಧಾನಗಳಿಂದ ಮೆರೆಯುತ್ತಾ ತೃಪ್ತರಾಗಿದ್ದರು.

ಮೇಲೆ ಹೇಳಿದಂತೆ ಈಗ ಬಿಹಾರ್‌ರಾಜ್ಯವಿರುವ ಭಾಗವು ಆಗ ವಿದೇಹ ದೇಶವೆಂಬ ಹೆಸರಿನಿಂದ ಕರೆಯಲ್ಪಟ್ಟು ಅದನ್ನು ಲಿಚ್ಛವಿ ಕ್ಷತ್ರಿಯ ಕುಲಕ್ಕೆ ಮುಖ್ಯಸ್ಥನಾದ ಚೇಟಕನೆಂಬ ರಾಜಶೇಖರನು ಆಧಿಪತ್ಯಮಾಡುತ್ತಿದ್ದನು. ವಿದೇಹ ರಾಜ್ಯಭಾರಕ್ರಮವು ನಿರಂಕುಶಪ್ರಭುತ್ವವಾಗಿರಲಿಲ್ಲ. ದೇಶದ ವಿವಿಧ ಭಾಗಗಳನ್ನು ಪ್ರಜೆಗಳಿಂದ ಚುನಾಯಿತರಾದ· ಪ್ರತಿನಿಧಿಗಳು ಆಳುತ್ತಿದ್ದು ಅಂತಹ ಪ್ರತಿನಿಧಿಗಳ ಮಹಾಸಭೆಯೊಂದು ಆದ್ಯಂತ ರಾಜ್ಯಾಡಳಿತವನ್ನೂ ಚೇಟಕರಾಜನ ಆಜ್ಞಾನುಸಾರವಾಗಿ ನಿರ್ವಹಿಸುತ್ತಿದ್ದಿತು. ಇಂತಹ ಸಭೆಯ ಪ್ರಧಾನಸ್ಥಾನವೂ, ಆ ಸಭೆಯ ಅಧ್ಯಕ್ಷನೂ ವಿದೇಹ ರಾಜ್ಯಾಧಿಪನೂ ಆದ ಚೇಟಕರಾಜನ ವಾಸಸ್ಥಾನವೂ ವೈಶಾಲೀ ನಗರವಾಗಿದ್ದಿತು.

ಕ್ಷತ್ರಿಯ ಕುಂಡಗ್ರಾಮದಲ್ಲಿದ್ದ ಕ್ಷತ್ರಿಯ ವೀರ ಮಹಾಜನಗಳಲ್ಲಿ ಜ್ಞಾತೃಕ್ಷತ್ರಿಯ ಕುಲಕ್ಕೆ ಸೇರಿದ ಸಿದ್ಧಾರ್ಥನೆಂಬ ವೀರಶಿರೋಮಣಿಯು ಮೂರ್ಧನ್ಯನಾಗಿ ತನ್ನ ಕುಲಕ್ಕೆ ಯಜಮಾನನಾಗಿ ನಡೆಯಿಸಿಕೊಳ್ಳುತ್ತಿದ್ದುದು ಮಾತ್ರವಲ್ಲದೆ, ಅವರ ಮಾನಪ್ರಾಣಗಳಿಗೆ ಅಪಾಯವುಂಟಾಗದಂತೆಯೂ ಕಾಪಾಡಿಕೊಂಡಿದ್ದನು. ಸಿದ್ಧಾರ್ಥನು ಕಾಶ್ಯಪ

ಗೋತ್ರೋದ್ಭವನು, ಇಕ್ಷ್ವಾಕುವಂಶಸ್ಥನು, ಸತ್ಯಧರ್ಮಪರಾಯಣನು, ನ್ಯಾಯನಿಷ್ಠನು. ಈತನು ಯುಕ್ತವಯಸ್ಕನಾಗಲು ಹಿರಿಯರ ಮತ್ತು ಗುರುಗಳ ಅನುಮತಿಯಿಂದ, ವೈಶಾಲಿಯ ರಾಜಪುತ್ರಿಯೂ, ಛೇಟಕರಾಜನ ತಂಗಿಯೂ ಸರ್ವಲಕ್ಷಣಸಂಪನ್ನೆಯೂ, ಆದ ತ್ರಿಶಲಾ ಕುಮಾರಿ ಎಂಬ ನಾರೀಮಣಿಯನ್ನು ವಿವಾಹಮಾಡಿಕೊಂಡು, ಆಕೆಯೊಂದಿಗೆ ವಿವಿಧ ಭೋಗಗಳನ್ನನುಭವಿಸುತ್ತ-ಗೃಹಸ್ಥ ಧರ್ಮವನ್ನು ಪಾಲಿಸಿಕೊಂಡು ಸುಖವಾಗಿದ್ದನು.

ಮಹಾವೀರಸ್ವಾಮಿಯು ಭೂಮಿಯಲ್ಲಿ ಜನ್ಮಿಸಲೂ, ಕ್ಷತ್ರಿಯಳಾದ ತ್ರಿಶಲಾದೇವಿಯ ಗರ್ಭದಲ್ಲಿದ್ದು ಜನನ ಹೊಂದಲೂ ಕಾರಣವನ್ನು ತಿಳಿಸುತ್ತಾ, 'ಕಲ್ಪಸೂತ್ರ' ವೆಂಬ ಜೈನ ಗ್ರಂಥವು ಹೀಗೆ ಹೇಳುತ್ತದೆ.

ಕಾಲಧರ್ಮವನ್ನನುಸರಿಸಿ, ಜಗತ್ತಿನಲ್ಲಿ ಧರ್ಮವು ಮಾಲಿನ್ಯಹೊಂದಲು, ಅಜ್ಞಾನವೆಂಬ ಅಂಧಕಾರದಲ್ಲಿ ಬಿದ್ದು ತೊಳಲುತ್ತಿದ್ದ ಲೋಕಕ್ಕೆ ಜ್ಞಾನದಾನಮಾಡಿ ಉದ್ಧರಿಸಬೇಕೆಂದು ಸಂಕಲ್ಪಿಸಿದ ಸಾಧುಶ್ರೇಷ್ಠನೂ ತೀರ್ಥಂಕರರಲ್ಲಿ ಕೊನೆಯವನೂ ಆದ ಮಹಾವೀರಸ್ವಾಮಿಯು ಭೂಮಿಯಲ್ಲಿ ಜನ್ಮಿಸಬೇಕೆಂದು ಇಚ್ಛಿಸಿದನು. ಸಿದ್ಧಸಂಕಲ್ಪನಾದ ಆತನ ಇಚ್ಛೆಯು ಪೂರ್ಣವಾಗಲು ಸಾವಕಾಶವಾಗಲಿಲ್ಲ. ಅದೇ ಬ್ರಾಹ್ಮಣಕುಂಡಗ್ರಾಮದಲ್ಲಿ ವಾಸಿಸುತ್ತಿದ್ದ ಋಷಭದತ್ತ ಎಂಬ ಬ್ರಾಹ್ಮಣೋತ್ತಮನ ಭಾರ್ಯೆಯಾದ ದೇವಾನಂದ ಎಂಬ ಬ್ರಾಹ್ಮಣಿಯು ಗರ್ಭಿಣಿಯಾಗಿ ತೀರ್ಥಂಕರಸ್ವಾಮಿಯ ಪವಿತ್ರಚೈತನ್ಯವನ್ನು ಧರಿಸಿ-ಷೋಡಶಕಲಾಪೂರ್ಣನಾದ ಚಂದ್ರನಂತೆ ಪ್ರಕಾಶಿಸಿದಳು. ಅದೇ ಕಾಲವಲ್ಲೇ ಇತ್ತ ಸಿದ್ಧಾರ್ಥರಾಜನ ಪತ್ನಿಯಾದ ತ್ರಿಶಲೆಯೂ, ತನ್ನಲ್ಲಿ ಎಷ್ಟುದಿನಗಳಾದರೂ ಪುತ್ರಸಂತಾನವಾಗಲಿಲ್ಲವಲ್ಲಾ ಎಂದು ಮರುಗುತ್ತಾ ದೈವಾನುಗ್ರಹದಿಂದ ಗರ್ಭಿಣಿಯಾಗಲು, ತನ್ನ ಉದರದಲ್ಲಿ, ತೀರ್ಥಂಕರರಂತಹ ಪವಿತ್ರಾತ್ಮನೂ, ಧರ್ಮವೀರನೂ, ಪರೋಪಕಾರ ಪರಾಯಣನೂ, ಲೋಕೋದ್ಧಾರಕನೂ ಆದ ಪುತ್ರನು ಉದಯಿಸಬೇಕೆಂದು ಸದಾ ಹಂಬಲಿಸುತ್ತಿದ್ದಳು.

ಇತ್ತ ಬ್ರಾಹ್ಮಣಿಯಾದ ದೇವಾನಂದಳ ಗರ್ಭದಲ್ಲಿದ್ದು ಬೆಳೆಯುತ್ತಿದ್ದ ಮಹಾವೀರ ತೀರ್ಥಂಕರನ ಪವಿತ್ರಗರ್ಭಪಿಂಡದ ಪ್ರಭಾವದಿಂದ ಆಕೆಗೆ ಮಹದಾನಂದವು ಪ್ರಾಪ್ತವಾಯಿತು. ಆಕೆಯು ಸರ್ವದಾ ಸಮಾಧಾನ ಚಿತ್ತದಿಂದಲೂ, ಧರ್ಮಪರವಾದ ನ್ಯಾಯಪರವಾದ ಯೋಚನೆಗಳಿಂದಲೂ, ಪರೋಪಕಾರಮಾಡಬೇಕೆಂಬ ಚಿತ್ತವೃತ್ತಿಯಿಂದಲೂ, ಹೀಗೆ ದಿವಸದ ಒಂದೊಂದುಗಳಿಗೆಯನ್ನೂ ಸದ್ಯೋಜನೆ, ಸತ್ಕಾರ್ಯಾಚರಣೆಗಳಲ್ಲೇ ಕಳೆಯುತ್ತಿದ್ದಳು. ಇತ್ತ ಹೀಗಿರುತ್ತಿರುವಲ್ಲಿ-ಭೂಲೋಕದಲ್ಲಿ ತೀರ್ಥಂಕರನು ಬ್ರಾಹ್ಮಣಿಯ ಗರ್ಭದಲ್ಲಿ ಜನಿಸಲಿರುವನೆಂಬ ಸಂಗತಿಯನ್ನು ತ್ರಿಲೋಕಾಧಿಪನಾದ ಇಂದ್ರನು ತಿಳಿದು,—'ಪ್ರಕೃತ ಸ್ಥಿತಿಯು ವಿಚಿತ್ರವಾಗಿದೆ. ಲೋಕದಲ್ಲಿ ಹೆಚ್ಚಿರುವ ಅಗಾಧ ಪಾಪಗಳನ್ನೂ, ಹಿಂಸಾ ಕಾರ್ಯವನ್ನೂ ಲೋಭ ಮೋಹ ದ್ವೇಷ ಮುಂತಾದ ದುಷ್ಪ್ರಕೃತಿಗಳನ್ನೂ ನಿರ್ಮೂಲವಾಗಿ ಛೇದಿಸಿ ಸತ್ಯಧರ್ಮಗಳನ್ನು ಸ್ಥಾಪಿಸಲು, ತೀರ್ಥಂಕರನು ಕೇವಲ ಸೌಮ್ಯಸ್ವಭಾವದ ಬ್ರಾಹ್ಮಣಕುಲದಲ್ಲಿ ಜನ್ಮಿಸುವುದಕ್ಕಿಂತಲೂ ವೀರ್ಯವಂತ ಕ್ಷತ್ರಿಯಕುಲದಲ್ಲಿ ಜನ್ಮಿಸುವುದು ಆವಶ್ಯಕ' ಎಂದು ಯೋಚಿಸಿದನು. ಒಡನೆ, ಅತ್ತ ದೇವಾನಂದಳ ಗರ್ಭದಲ್ಲಿ ಬೆಳೆಯುತ್ತಿದ್ದ ಮಹಾವೀರನ ಗರ್ಭಪಿಂಡವನ್ನು ಅಲ್ಲಿಂದ ತೆಗೆದು. ಪವಿತ್ರಾತ್ಮಳೂ ವೀರಕ್ಷತ್ರಿಯನ ಭಾರ್ಯೆಯೂ, ಆದ ತ್ರಿಶಲಾದೇವಿಯ ಗರ್ಭಕ್ಕೆ ಸಾಗಿಸೆಂದು ದೇವದೂತನೊಬ್ಬನನ್ನು ಕರೆದು ನಿಯಮಿಸಿದನು. ದೇವರಾಜನ ಆಜ್ಞೆಯನ್ನು ಪಡೆದ ಆ ದೂತನು, ಒಡನೆ ಭೂಲೋಕಕ್ಕೆ ಬಂದು, ದೇವಾನಂದಳ ಗರ್ಭದಲ್ಲಿದ್ದ ಮಹಾವೀರಸ್ವಾಮಿಯನ್ನು ಭಯಭರಿತ ಭಕ್ತಿಯಿಂದ ಎರಡು ಹಸ್ತಗಳಿಂದಲೂ ಸ್ವೀಕರಿಸಿಕೊಂಡೊಯ್ದು ತ್ರಿಶಲಾದೇವಿಯ ಗರ್ಭಪ್ರದೇಶದಲ್ಲಿ ಪ್ರವೇಶಗೊಳಿಸಿದನು. ದೇವದೂತನು ದೇವರಾಜನ ಅನುಮತಿಯಂತೆ ಈ ಕಾರ್ಯಮಾಡಿದಾಗ, ದೈವಮಾಯೆಯಿಂದ ಅತ್ತ ದೇವಾನಂದಳೂ, ಇತ್ತ ತ್ರಿಶಲಾದೇವಿಯೂ ಅವರ ಪರಿವಾರದವರೂ ಗಾಢನಿದ್ರೆಯಿಂದ ಮೈತಿಳಿಯದೆ ಇದ್ದರು. ಪವಿತ್ರಚರಿತ್ರನಾದ ಮಹಾವೀರನ ವಾಸಕ್ಕೆ ಕೆಲಕಾಲವಾದರೂ (೮೩ ದಿನಗಳು) ಎಡೆಯಾಗಿದ್ದ ದೇವಾನಂ

ದಳ ಗರ್ಭಕ್ಷೇತ್ರವು ಈ ಮೂಲಕ ಬರಿದಾದುದು ಸಮನಲ್ಲವೆಂದು ತಿಳಿದು, ಆ ದೇವದೂತನು, ಆ ಮೊದಲೇ ಇತ್ತ ತ್ರಿಶಲಾಗರ್ಭದಲ್ಲಿದ್ದು ಬೆಳೆಯುತ್ತಿದ್ದ ಒಂದು ಸಾಮಾನ್ಯ ಜೀವಿಯ ಗರ್ಭಪಿಂಡವನ್ನು ಅಲ್ಲಿಗೆ ಸಾಗಿಸಿ, ತಾನುಮಾಡಿದ ಕಾರ್ಯದ ಪರಿಣಾಮವನ್ನು ಕುರಿತು, ಸ್ವರ್ಗದ ಸುಧರ್ಮಸಭೆಯಲ್ಲಿ ಕುಳಿತು ಒಡ್ಡೋಲಗಗೊಡುತ್ತಿದ್ದ ದೇವರಾಜನಿಗೆ ತಿಳಿಸಿ ಯಥೇಚ್ಛ ಹೊರಟುಹೋದನು.

ಗರ್ಭಸ್ಥನಾಗಿದ್ದ ಆ ವೇಳೆಯಲ್ಲೇ ಮಹಾವೀರಸ್ವಾಮಿಗೆ, ಮತಿ ಜ್ಞಾನ, ಶ್ರುತಿಜ್ಞಾನ, ಅವಧಿಜ್ಞಾನಗಳೆಂಬ ತ್ರಿವಿಧ ಜ್ಞಾನಗಳೂ ಇದ್ದುವೆಂದು ಕಲ್ಪಸೂತ್ರ ಗ್ರಂಥವು ಹೇಳುತ್ತದೆ.

ಸಾಮಾನ್ಯಚೇತನರಿಗೆ, ಗರ್ಭಸ್ಥವೇಳೆಯಲ್ಲಲ್ಲ-ಜನನವಾದ ಮೇಲೂ ಅಜ್ಞಾನಾವಸ್ಥೆಯು ಮುಚ್ಚಿಕೊಂಡಿರುವುದು ಸ್ವಾಭಾವಿಕವಲ್ಲವೆ! ಆದರೆ ನಮ್ಮ ಕಥಾನಾಯಕನಂತಹ ಮಹಾವ್ಯಕ್ತಿಗಳ ಸ್ಥಿತಿಯೇ ಬೇರೆ! * ಮಹಾವೀರನು ತಾನು ಆ ಗರ್ಭದಿಂದ ಕೊಂಡೊಯ್ಯಲ್ಪಡಲಿದ್ದೇನೆಂಬುದನ್ನು ಮೊದಲೇ ತಿಳಿದಿದ್ದನಂತೆ! ಕೊಂಡೊಯ್ಯಲ್ಪಟ್ಟೆನೆಂಬುದನ್ನೂ ತಿಳಿದನಂತೆ! ಮಾತೃಗರ್ಭದಿಂದ ಗರ್ಭಪಿಂಡವನ್ನು ಎತ್ತಿ ಒಯ್ಯುವಾಗ ಪಿಂಡಸ್ಥಚೇತನಕ್ಕೆ ಲೇಶಮಾತ್ರವೂ ಬಾಧೆಯಾಗದಂತೆ ಯಾವಾಗ ತನ್ನನ್ನು ಎತ್ತಿ ಕೊಂಡೊಯ್ದನೆಂಬ ಸಂಗತಿಯೇ ತಿಳಿಯದಷ್ಟು ಜಾಗರೂಕತೆಯಿಂದ ದೇವದೂತನು ಆ ಕಾರ್ಯವನ್ನು ನಿರ್ವಹಿಸಿದನೆಂದೂ ಹೇಳಲ್ಪಟ್ಟಿದೆ.

ಹೀಗೆ ಲೋಕಕ್ಷೇಮಕ್ಕಾಗಿ ಉದಯಿಸಲಿದ್ದ ಮಹಾವೀರ ತೀರ್ಥಂಕರನು, ಗರ್ಭಾಂತರಹೊಂದಿ ತ್ರಿಶಲಾ ಗರ್ಭಾಂಬುಧಿಯಲ್ಲಿ ದಿನ ದಿನಕ್ಕೆ ಅಭಿವೃದ್ಧಿಯಾಗುತ್ತಲಿದ್ದನು.



* The Sacred Books of the East· vol· 22· pp· 229·

**ಅಧ್ಯಾಯ ೨. 'ಗರ್ಭಾವತರಣ ಕಲ್ಯಾಣ'**

ಬ್ರಾಹ್ಮಣಿ ದೇವಾನಂದಳ ಗರ್ಭದಲ್ಲಿ ೮೨ ದಿನಗಳವರೆಗೆ ಬೆಳೆದ ತರುವಾಯ, ತೀರ್ಥಂಕರ ಮಹಾವೀರನು, ಅಲ್ಲಿಂದ ಕ್ಷತ್ರಿಯಾಣಿ ತ್ರಿಶಲಾದೇವಿಯ ಗರ್ಭಕ್ಕೆ ಸಾಗಿಸಲ್ಪಟ್ಟನಷ್ಟೆ! ಹಾಗೆ ಆ ತ್ರಿಶಲಾದೇವಿಯು ತನ್ನ ಗರ್ಭದಲ್ಲಿ ಆ ಪುಣ್ಯ ಚೇತನವನ್ನು ಧಾರಣೆಮಾಡಿದನಂತರ ಆಕೆಗಾದ ಅನುಭವಗಳನ್ನು ಕುರಿತು ಜೈನ ಗ್ರಂಥಗಳು ಬಹು ವಿಸ್ತಾರವಾದ ವರ್ಣನೆಗಳಿಂದ ಹೊಗಳುತ್ತಿವೆ. ಆಗ ಆಕೆಗೆ ಹದಿನಾಲ್ಕು ದಿವ್ಯ ಕನಸುಗಳಾದುವೆಂದು ಶ್ವೇತಾಂಬರ ಪಂಗಡದವರೂ, ಹದಿನಾರು ಕನಸುಗಳಾದುವೆಂದು ದಿಗಂಬರ ಪಂಗಡದವರೂ ಅಭಿಪ್ರಾಯಪಡುತ್ತಾರೆ.

ಮೊದಲನೆಯ ಕನಸಿನಲ್ಲಿ ಶುಭ್ರವಾದ ಬಿಳಿಯಮೋಘದಂತೆಯೂ, ಸ್ಫಟಿಕ ಶಿಲಾರಾಶಿಯಂತೆಯೂ ಬಿಳಿದಾದ ಒಂದು ಉನ್ನತವಾದ ಆನೆಯುನ್ನು ನೋಡಿದಳು. ಆ ಆನೆಗೆ ದೀರ್ಘವಾದ ನಾಲ್ಕುದಂತಗಳಿದ್ದುವು. ಅದು ಪೂರ್ಣಿಮಾಚಂದ್ರನ ಶುಭ್ರಜ್ಯೋತ್ಸ್ನೆಯಂತೆ ಪ್ರಕಾಶಿಸುತ್ತಿದ್ದಿತು. ಅದರ ಧ್ವನಿಯು ಮುಂಗಾರುಮೋಘದ ಗುಡುಗಿನಂತೆ ಗಂಭೀರವಾಗಿದ್ದಿತು.

ಎರಡನೆಯ ಸ್ವಪ್ನದಲ್ಲಿ ತ್ರಿಶಲಾದೇವಿಯು, ಬಿಳಿದಾವರೆಯ ಎಸಳುಗಳಂತೆ ಶುಭ್ರವರ್ಣವುಳ್ಳುದಾಗಿ, ತನ್ನ ದೇಹಕಾಂತಿಯಿಂದ ಸುತ್ತಲೂ ಪ್ರಕಾಶವನ್ನು ಬೀರುತ್ತಾ ಇದ್ದ ಒಂದು ವೃಷಭರಾಜವನ್ನು ಕಂಡಳು. ಅದರ ದೇಹವು ಆಯತಿಗೆ ತಕ್ಕುದೂ, ದೃಢವಾದುದೂ ಸುಂದರವಾದುದೂ ಆಗಿದ್ದಿತು. ಅದರ ಮೈಕೂದಲುಗಳು ಮೃದುವಾಗಿ ರೇಷ್ಮೆಯಂತೆ ನಯವಾಗಿದ್ದುವು. ಈ ವೃಷಭದರ್ಶನವು, ಧಾರ್ಮಿಕ ಸುಧಾರಣೆಯ ಕಾರ್ಯವನ್ನು ವಹಿಸಿ ನಿರ್ವಹಿಸಬಲ್ಲ ಮಹಾ ಪುರುಷನು ಜನಿಸುವನೆಂಬ ಸೂಚನೆಯನ್ನು ಕೊಡುತ್ತದೆಂದು ನಂಬಿಕೆಯುಂಟು.

ರಾಜಪತ್ನಿಯು ತನ್ನ ಮೂರನೆಯ ಸ್ವಪ್ನದಲ್ಲಿ ಸ್ವರ್ಗದಿಂದ ತನ್ನ ಮುಖದ ಕಡೆಗೆ ನೆಗೆದುಬರುತ್ತಿದ್ದಂತೆ ಒಂದು ಸಿಂಹವನ್ನು ಕಂಡಳು. ಅದರ ದೇಹಾಕೃತಿಯು ಮನೋಹರವಾಗಿದ್ದಿತು. ಅದರ ಕೇಸರವು

ಸುಂದರವಾಗಿದ್ದಿತು. ಕಣ್ಣುಗಳು ಮಿಂಚಿನಂತೆ ಹೊಳೆಯುತ್ತಿದ್ದುವು. ದೃಢವಾದ ಬಲವಾದ ದೇಹವೂ ಗಂಭೀರವಾದ ಆಕೃತಿಯೂ, ಭಯೋತ್ಪಾದಕವಾಗದೆ ಆನಂದದಾಯಕವಾಗಿದ್ದುವು. ಗರ್ಭಸ್ಥ ಚೇತನು ಸನ್ಯಾಸಿಗಳ ಸಂಗಡಕ್ಕೆ ಮೂರ್ಧನ್ಯನೂ, ಅಗಾಧ ತೇಜಸ್ವಿಯೂ ಆಗುವನೆಂಬುದನ್ನು ಈ ಸೂಚನೆಯು ಸ್ಪಷ್ಟಗೊಳಿಸುವಂತಿದ್ದಿತು. ಮಾತ್ರವಲ್ಲದೆ, ಆತನು ಮೃಗರಾಜನಂತೆ, ಸಕಲವಿಧ ಶತ್ರುಗಳನ್ನೂ ನಿರ್ಮೂಲಗೊಳಿಸತಕ್ಕಂತಹ ಪರಾಕ್ರಮಶಾಲಿಯಾಗುವನೆಂಬುದನ್ನೂ ಸೂಚಿಸುವಂತಿದ್ದಿತು.

ನಾಲ್ಕನೆಯ ಕನಸಿನಲ್ಲಿ ತ್ರಿಶಲಾರಾಣಿಯು ಸೌಭಾಗ್ಯಾಧಿದೇವತೆಯಾದ ಲಕ್ಷ್ಮಿಯನ್ನು ನೋಡಿದಳು. ಲಕ್ಷ್ಮೀದೇವಿಯು ಶುಭ್ರವಾದ ಹಿಮಾಚಲದ ಶಿಖರದಮೇಲೆ ಸುವರ್ಣಸಿಂಹಾಸನದಲ್ಲಿ ವಿರಾಜಮಾನಳಾಗಿದ್ದಳು. ಉಭಯಪಾರ್ಶ್ವಗಳಲ್ಲೂ ದೀರ್ಘವಾದದಂತಗಳಿಂದ ಶೋಭಿಸುತ್ತಲೂ, ಸೊಂಡಿಲುಗಳಲ್ಲಿ ಹಿಡಿದಿದ್ದ ಸುವರ್ಣಕುಂಭಗಳಿಂದ ಅಭಿಷೇಕಮಾಡುತ್ತಲೂ ಇದ್ದ ಎರಡು ದಿವ್ಯ ಗಜಗಳು ಆಕೆಯ ಕನಸಿನಲ್ಲಿ ಸ್ಪಷ್ಟವಾಗಿ ಕಾಣಿಸಿದುವು.

ತರುವಾಯ ಐದನೆಯ ಸ್ವಪ್ನದಲ್ಲಿ, ಮನೋಹರವಾದ ಮಂದಾರಪುಷ್ಪಗಳ ಒಂದು ದಿವ್ಯ ಮಾಲಿಕೆಯನ್ನು ತ್ರಿಶಲಾದೇವಿಯು ನೋಡಿದಳು. ಅದು, ಮನೋಹರ ಪರಿಮಳದಿಂದ ಯುಕ್ತವಾಗಿ, ಏಕಕಾಲದಲ್ಲಿ, ಚಂಪಕ, ಅಶೋಕ, ನಾಗ, ಪುನ್ನಾಗ, ಮಲ್ಲಿಕಾ ಮುಂತಾದ ಪುಷ್ಪಗಳ ಸೌರಭವನ್ನೂ ಕೊಡುತ್ತಿದ್ದಿತು. ಆ ಪುಷ್ಪಮಾಲಿಕೆಗೆ ಗಂಭೀರಸ್ವರದಿಂದ ಝೇಂಕರಿಸುತ್ತಿದ್ದ ದುಂಬಿಗಳು ಬಂದು ಮುತ್ತುತ್ತಿದ್ದುವು.

ಆರನೆಯ ಸ್ವಪ್ನದಲ್ಲಿ ತ್ರಿಶಲಾದೇವಿಯು, ಷೋಡಶಕಳಾ ಪೂರ್ಣವಾದ ಚಂದ್ರಮಂಡಲವನ್ನು ದರ್ಶಿಸಿದಳು. ಚಂದ್ರನು ಹೇಗೆ ಅಂಧಕಾರವನ್ನು ದೂರೀಕರಿಸುವನೋ ಹಾಗೆಯೇ ತನ್ನ ಗರ್ಭವಾಸಿಯಾದ ಮಗನೂ, ಲೋಕದ ಅಜ್ಞಾನಾಂಧಕಾರವನ್ನು ನಿವಾರಿಸಿ ಜ್ಞಾನಪ್ರಕಾಶವನ್ನು ಬೀರುವನೆಂದು ರಾಣಿ ತ್ರಿಶಲಾದೇವಿಯು ಸಂತೋಷಿಸಿದಳು.

ತರುವಾಯ ಕ್ಷತ್ರಿಯಾಣಿ ತ್ರಿಶಲೆಯು ಏಳನೆಯ ಸ್ವಪ್ನದಲ್ಲಿ ಮಹಾಪ್ರಕಾಶಮಾನನೂ ಜಗಚ್ಚಕ್ಷುವೂ ಆದ ಸೂರ್ಯನನ್ನು ನೋಡಿದಳು. ಆ ಸಹಸ್ರಕಿರಣನು ತನ್ನ ಕಿರಣರಾಶಿಗಳಿಂದ ಜಗತ್ತಿನ ಅಂಧಕಾರವನ್ನೂ ಶೈತ್ಯವನ್ನೂ ನಿವಾರಿಸಿ, ಅಖಿಳಪ್ರಾಣಿವರ್ಗಕ್ಕೂ ಪ್ರಾಣದಾನ ಮಾಡುತ್ತಿದ್ದುದನ್ನು ಕಂಡು, ಆ ಸಾಧ್ವಿಯು ತನ್ನ ಪುತ್ರನೂ ಹಾಗೆಯೇ ಜಗತ್ತಿನ ಜನರಿಗೆ ಧಾರ್ಮಿಕ ಪ್ರಾಣದಾನಮಾಡಿ ಉದ್ಧರಿಸಲುಳ್ಳವನಾಗುವನೆಂದು ಸಂತೋಷಿಸಿದಳು.

* ಎಂಟನೆಯ ಸ್ವಪ್ನದ ವಿಚಾರದಲ್ಲಿ ಸ್ವಲ್ಪ ಭಿನ್ನಾಭಿಪ್ರಾಯವಿದೆ. ಶ್ವೇತಾಂಬರರು, ಈ ಎಂಟನೆಯ ಸ್ವಪ್ನದಲ್ಲಿ ತ್ರಿಶಲಾದೇವಿಯು ಚಿನ್ನದ ತಗಡಿನಿಂದ ವ್ಯಾಪ್ತವಾದ ಉನ್ನತವಾದ ಕಂಭಕ್ಕೆ ಕಟ್ಟಲ್ಪಟ್ಟಿದ್ದ ವಿಶಾಲವೂ ಸುಮನೋಹರವೂ ಆದ ಇಂದ್ರಧ್ವಜವೊಂದನ್ನು ಕಂಡಳೆಂದು, ಅಭಿಪ್ರಾಯಪಡುತ್ತಾರೆ. ಆದರೆ ದಿಗಂಬರ ಜೈನ ಪಂಗಡದವರು, ಈ ಎಂಟನೆಯ ಕನಸಿನಲ್ಲಿ ಆಕೆಯು ಎರಡು ಮತ್ಸ್ಯಗಳನ್ನು ಕಂಡಳೆಂದು ಹೇಳುತ್ತಾರೆ.

ತರುವಾಯ ಒಂಭತ್ತನೆಯ ಸ್ವಪ್ನದಲ್ಲಿ ಆಕೆಯು ಒಂದು ಸ್ವರ್ಣಕುಂಭವನ್ನು ಕಂಡಳು. ಅದು ಹಲವು ವಿಧ ಪುಷ್ಪಹಾರಗಳಿಂದ ಅಲಂಕೃತವಾಗಿಯೂ ಇದ್ದಿತು. ಅದರಲ್ಲಿ ನಿರ್ಮಲ ಜಲವು ತುಂಬಿದ್ದಿತು. ರಾಣಿಯು ಇದು ಬಾಲಕನು ಯಾವಾಗಲೂ ಧ್ಯಾನಮಗ್ನನಾಗಿರುವನೆಂಬುದನ್ನು ಸೂಚಿಸುವುದೆಂದು ಭಾವಿಸಿದಳು. ದಿಗಂಬರ ಜೈನರಲ್ಲಿ, ಎರಡು ಸ್ವರ್ಣಕುಂಭಗಳನ್ನು ಕಂಡಳೆಂದು ಹೇಳುವುದುಂಟು. ಅವುಗಳಲ್ಲಿ ಶುಭ್ರಜಲಕ್ಕೆ ಬದಲಾಗಿ ದಿವ್ಯಾಭರಣಗಳು ತುಂಬಿದ್ದುವೆಂಬುದೂ ಕೆಲವರ ಅಭಿಪ್ರಾಯವಾಗಿದೆ.

ತರುವಾಯ ಹತ್ತನೆಯ ಸ್ವಪ್ನದಲ್ಲಿ ತ್ರಿಶಲಾದೇವಿಯು ಒಂದು ತಾವರೆಯ ಕೊಳವನ್ನು ಕಂಡಳು. ಆ ಕೊಳದಲ್ಲಿ ವಿಕಸಿತವಾದ ತಾವರೆ

---

* The Heart of jainsm by Mrs. Sinclair Stevenson M A, Sc, D.

ಯ ಪುಷ್ಪಗಳು ನೂರಾರು ಸಂಖ್ಯೆಯಿಂದ ನೀರು ಕಾಣಿಸದಂತೆ ಮುಚ್ಚಿಕೊಂಡು, ಮನೋಹರವಾಗಿದ್ದುವು. ಅವುಗಳ ಮಕರಂದವನ್ನು ಪಾನಮಾಡಲೆಳೆಸಿ, ಸಹಸ್ರಾರು ದುಂಬಿಗಳು ಸರ್ವದಾ ಝೇಂಕರಿಸುತ್ತಾ ಹಾರಾಡುತ್ತಿರುವುವು. ತ್ರಿಶಲಾದೇವಿಯು ಈ ಸೂಚನೆಯಿಂದ ತನ್ನ ಪುತ್ರನ ಮೃದುಮಧುರವಾದ ಬೋಧನಾಮೃತವು ಜಗತ್ತಿನ ಮಾನವ ವರ್ಗವನ್ನೂ ಹೀಗೆಯೇ ಆಕರ್ಷಿಸುವುದು ಎಂದು ತಿಳಿದಳು.

ಹನ್ನೊಂದನೆಯ ಸ್ವಪ್ನದಲ್ಲಿ ಆಕೆಯು ಕ್ಷೀರದಿಂದ ತುಂಬಿದ ಸಮುದ್ರವನ್ನು ಕಂಡಳು. ಅದಕ್ಕೆ ಸಕಲದಿಕ್ಕುಗಳಿಂದಲೂ ನದಿಗಳು ಬಂದು ಸೇರುತ್ತಿದ್ದುವು. ಅದರಿಂದ ಆಕೆಯು ತನ್ನ ಪುತ್ರನು ಜ್ಞಾನಪೂರ್ಣನಾಗಿ ಸಮಸ್ತರ ವಿದ್ವತ್ತನ್ನೂ ಆಕರ್ಷಿಸುವ ಪ್ರತಿಭಾಶಾಲಿಯಾಗುವನೆಂಬುದು ಸೂಚಿತವಾಗುವುದೆಂದು ತಿಳಿದಳು.

ತರುವಾಯ ಆ ರಾಜಭಾರ್ಯೆಯು ಒಂದು ದಿವ್ಯ ಸೌಧವನ್ನು ಸ್ವಪ್ನದಲ್ಲಿ ಕಂಡಳು. ಅದು ಮುತ್ತು ರತ್ನಗಳ ಸ್ತಂಭ ಮೇಲ್ಕಟ್ಟುಗಳಿಂದ ವಿರಾಜಮಾನವಾಗಿದ್ದಿತು. ಅದರ ಚಂದ್ರಕಾಂತ ಶಿಲಾನಿರ್ಮಿತವಾದ ಕಂಭಗಳಸುತ್ತಲೂ, ಕುದುರೆ, ಆನೆ, ಸರ್ಪ, ಸಿಂಹ, ಜಿಂಕೆ ಮುಂತಾದ ವಿವಿಧಮೃಗಗಳೂ, ದಿವ್ಯ ವೃಕ್ಷ ಲತೆಗಳೂ ಕೆತ್ತಲ್ಪಟ್ಟಿದ್ದುವು. ಆ ದಿವ್ಯಭವನವು, ವಿದ್ಯುದ್ದೀಪ ಮಾಲಿಕೆಗಳಿಂದ ಪರಮಸೌಂದರ್ಯಯುಕ್ತವಾಗಿ ತೋರುವಂತೆ ಅಲಂಕೃತವಾಗಿದ್ದಿತು. ಅದರಲ್ಲಿ ಗಂಧರ್ವರೂ ಯಕ್ಷರೂ, ವಿವಿಧ ವಾದ್ಯಗಳನ್ನಿಟ್ಟುಕೊಂಡು, ಮಧುರಗಾನದಿಂದ ಸಕಲರ ಚಿತ್ತವನ್ನೂ ಆಕರ್ಷಿಸುತ್ತಿದ್ದರು. ಆ ಸೌಧದಿಂದ ದಿವ್ಯಪರಿಮಳ ಸುಗಂಧವು ಹೊರಹೊಮ್ಮುತ್ತಿದ್ದಿತು. ಅದು ದೇವೇಂದ್ರನ ವಾಸಸ್ಥಾನವೋ ಎಂಬ ಭ್ರಾಂತಿಯನ್ನುಂಟುಮಾಡುತ್ತಿದ್ದಿತು.

ಹದಿಮೂರನೆಯದಾಗಿ ಆ ರಾಜಪತ್ನಿಯು ರಾಸಿಯಾಗಿ ಬಿದ್ದಿದ್ದ ವಜ್ರವೈಡೂರ್ಯ ಪುಷ್ಯರಾಗ, ಮರಕತ, ಮಾಣಿಕ್ಯಗಳಿಂದ ರಚಿಸಲ್ಪಟ್ಟ ವಿವಿಧ ಆಭರಣಗಳನ್ನು ಕಂಡಳು. ಅವುಗಳ ಪ್ರಕಾಶವು ಕಣ್ಣುಗಳನ್ನು ಕೋರೈಸಿಹೋಗುವಂತೆ ಮಾಡುತ್ತಿದ್ದಿತು. ತರುವಾಯ ಕೊನೆಯದಾಗಿ ರಾಜಪತ್ನಿಯು ಒಂದು ಹೋಮಕುಂಡವನ್ನು ಕಂಡಳು. ಅದ

ರಲ್ಲಿ ಅಗ್ನಿಯು ಜಾಜ್ವಲ್ಯಮಾನವಾಗಿ ಉರಿಯುತ್ತಿದ್ದಿತು. ಹೊಗೆಯಿ ಲ್ಲದೆ ಧಗಧಗನೆಂದು ಜ್ವಲಿಸುತ್ತಿದ್ದ ಅದರ ಪ್ರಕಾಶವು ಬಹು ಸುಂದರವಾಗಿ ಕಾಣಿಸುತ್ತಿತ್ತು. ಆ ಹೋಮದಲ್ಲಿ ಚಿನ್ನಿನಂತೆ ವರ್ಣವುಳ್ಳ ತುಪ್ಪವು ಆಹುತಿಯಾಗಿ ಅರ್ಪಿಸಲ್ಪಡುತ್ತಿದ್ದುದನ್ನೂ ಆಕೆಯು ಕಂಡಳು. ಆ ಪ್ರಕಾಶದಿಂದ ಸಮಸ್ತ ಸ್ಥಳಗಳು ಬೆಳಕಾಗಿ, ಎಲ್ಲೂ ಕತ್ತಲೆಯ ಸುಳಿವೇ ಇಲ್ಲದಂತೆ ಇದುದನ್ನು ರಾಣಿಯು ಕಂಡಳು.

ಶ್ವೇತಾಂಬರ ಸಂಪ್ರದಾಯಸ್ಥರು ಈ ಹದಿನಾಲ್ಕು ಮಂಗಳಕರ ವಸ್ತುಗಳನ್ನು ಮಾತ್ರವೇ ತ್ರಿಶಲಾದೇವಿಯು ಸ್ವಪ್ನದಲ್ಲಿ ಕಂಡಳೆಂದು ಹೇಳುತ್ತಾರೆ. ಆದರೆ ದಿಗಂಬರ ಸಂಪ್ರದಾಯದವರು, ತ್ರಿಶಲಾದೇವಿಯು ಕಂಡುದು ಹದಿನಾಲ್ಕು ಭವ್ಯವಸ್ತುಗಳನ್ನು ಮಾತ್ರವಲ್ಲ-ಹದಿನಾರು ವಸ್ತುಗಳನ್ನು ಎಂದು ಹೇಳುತ್ತಾರೆ. ಈ ಶುಭ ಸ್ವಪ್ನಗಳು, ಪ್ರತಿಯೊಬ್ಬ ತೀರ್ಥಂಕರನ ಜನನಕಾಲದಲ್ಲೂ, ಆತನು ಮಾತೃಗರ್ಭವನ್ನು ಪ್ರವೇಶಿಸಿದ ಸಂದರ್ಭದಲ್ಲಿ ಮಾತೃವಿಗೆ ತಪ್ಪದೆ ಆಗುವುವೆಂಬ ಸಿದ್ಧಾಂತವುಂಟು.

ತ್ರಿಶಲಾದೇವಿಯು ಈ ಸ್ವಪ್ನಗಳನ್ನು ಕಂಡತರುವಾಯ, ಎಚ್ಚತ್ತಳು. ತಾನು ಕಂಡ ಭವ್ಯವಸ್ತುಗಳ ಸ್ಮರಣೆಯು ಆಕೆಗೆ ಉಂಟಾದೊಡನೆಯೇ ಆಕೆಯ ದೇಹವೆಲ್ಲವೂ ರೋಮಾಂಚನವಾಯಿತು. ಕಣ್ಣುಗಳಲ್ಲಿ ಆನಂದೋದ್ರೇಕದಿಂದ ಬಾಷ್ಪವು ಹರಿಯಿತು. ಅವುಗಳ ಶುಭಸೂಚನೆಯಿಂದ ಯಾವ ದಿವ್ಯಫಲವು ಲಭ್ಯವಾಗುವುದೋ ಎಂಬುದನ್ನು ತಿಳಿಯಲು ಮನಸ್ಸು ತವಕಿಸುತ್ತಿದ್ದಿತು. ಒಡನೆ, ತ್ರಿಶಲೆಯು ತನ್ನ ದಿವ್ಯ ಹಂಸತೂಲಿಕಾತಲ್ಪದಿಂದ ಎದ್ದು, ಮಂಚದಿಂದ ಕೆಳಕ್ಕಿಳಿದು ಹಂಸವನ್ನು ನಾಚಿಸುತ್ತಿದ್ದ ಮಂದಗಮನದಿಂದ ತನ್ನ ಪತಿಯಾದ ಸಿದ್ಧಾರ್ಥನ ಮಂಚದ ಸಮೀಪಕ್ಕೆ ನಡೆದುಹೋಗಿ, ವಿನಯದಿಂದ ಆತನನ್ನು ಎಚ್ಚರಗೊಳಿಸಿ, ಮೃದುಮಧುರಸ್ವರದಿಂದ

—'ಪ್ರಿಯಾ, ಪ್ರಾಣಮನೋಹರ, ನಾನು ಈಗತಾನೇ ಹದಿನಾಲ್ಕು ದಿವ್ಯ ಸ್ವಪ್ನಗಳನ್ನು ಕಂಡೆನು. ಅವುಗಳಲ್ಲಿ ಕ್ರಮವಾಗಿ, ಆನೆ, ವೃಷಭ ಬಿಳಿಯಸಿಂಹ, ಲಕ್ಷ್ಮೀದೇವಿ, ಪುಷ್ಪಮಾಲಿಕೆಗಳು, ಚಂದ್ರ, ಸೂ

ರ್ಯ, ಎರಡು ವಿಮಾನುಗಳ (ಇಂದ್ರಧ್ವಜ,) ಸುವರ್ಣಕುಂಭ, ತಾವರೆಯುಕೊಳ, ಕ್ಷೀರಸಮುದ್ರ, ದಿವ್ಯಸೌಧ, ಆಭರಣಗಳರಾಶಿ, ಧಗಧಗನೆಂದು ಉರಿಯುತ್ತಿದ್ದ ಹೋಮಾಗ್ನಿ ಇವುಗಳನ್ನು ಕಂಡೆನು. ಇವುಗಳ ಅರ್ಥವೇನೋ ? ಏಕಕಾಲದಲ್ಲಿ ಇಷ್ಟು ಶುಭವಸ್ತುಗಳನ್ನೂ ಕಂಡುದರ ಫಲವು ಏನಾಗುವುದೋ ತಿಳಿಯಬೇಕೆಂದು ಮನಸ್ಸು ತಲ್ಲಣಿಸುತ್ತಿದೆ. ಈ ದಿವ್ಯ ಸ್ವಪ್ನಗಳ ಫಲವೇನಾಗಬಹುದೆಂದು ನನಗೆ ತಿಳಿಸಬೇಕು' ಎಂದು ಪ್ರಾರ್ಥಿಸಿದಳು.

ಅತ್ಯಂತ ಶುಭದಾಯಕಗಳಾದ ಆ ಹದಿನಾಲ್ಕು ಸ್ವಪ್ನಗಳ ವೃತ್ತಾಂತವನ್ನು ಕೇಳಿದ ಸಿದ್ಧಾರ್ಥನು ಪರಮಹರ್ಷಿತನಾಗಿ,—'ಪ್ರಿಯೆ, ನೀನು ಕಂಡ ಈ ದಿವ್ಯ ಸ್ವಪ್ನಗಳು ನಮ್ಮ ಕುಲಕ್ಕೆ ಭೂಷಣಪ್ರಾಯನಾದ ಸುಪುತ್ರನ ಉದಯವನ್ನು ಸೂಚಿಸುತ್ತವೆಯೆಂಬ ವಿಷಯದಲ್ಲಿ ಸಂದೇಹವಿಲ್ಲ. ಆದರೂ ಇವುಗಳ ಗೊತ್ತಾದಫಲವೇನೆಂದು ಸ್ವಪ್ನಜ್ಞರನ್ನು ವಿಚಾರಿಸಿ ತಿಳಿಯೋಣ'ವೆಂದು ನುಡಿದು, ಆಕೆಯನ್ನು ಸಂತೈಸಿದನು. ತರುವಾಯ ತ್ರಿಶಲೆಯು ಪತಿಯ ಅನುಜ್ಞೆಯನ್ನು ಪಡೆದು ಹೊರಟು, ತನಗೆ ಪ್ರಾಪ್ತವಾದ ಆ ದಿವ್ಯ ಸ್ವಪ್ನಗಳ ಫಲವು ಮತ್ತೆ ದುಸ್ವಪ್ನಗಳಿಂದ ನಷ್ಟವಾಗಬಾರದೆಂದು ಚಿಂತಿಸಿ, ಪುನಃ ಮಲಗಿಕೊಳ್ಳದೆ ಬೆಳಗಿನವರೆಗೆ ಎಚ್ಚರವಾಗಿಯೇ ಇದ್ದು, ಮುಂದೆ ತನಗೆ ಪ್ರಾಪ್ತವಾಗಲಿರುವ ಸುಖಸಂತೋಷಗಳನ್ನೆಲ್ಲ ಮನಸ್ಸಿನಲ್ಲೇ ಯೋಚಿಸಿಕೊಂಡು ಆನಂದಿಸುತ್ತಿದ್ದಳು.

ಪ್ರಾತಃಕಾಲವಾಯಿತು. ಲೋಕಬಾಂಧವನು ಪೂರ್ವಾದ್ರಿಯ ಕೋಡುಗಲ್ಲನ್ನು ಏರಿದನು. ಲೋಕದಲ್ಲಿ ವ್ಯಾಪಿಸಿದ್ದ ಅಂಧಕಾರವು ಕ್ಷಣಮಾತ್ರದಲ್ಲಿ ಧ್ವಂಸವಾಯಿತು. ಸಿದ್ಧಾರ್ಥರಾಜನು, ಒಡನೆ ತನ್ನ ಹಾಸಿಗೆಯಿಂದ ಎದ್ದು ಸೇವಕರು ಮಾರ್ಗತೋರಿಸುತ್ತಾ ಕರೆದೊಯ್ಯಲು ವ್ಯಾಯಾಮಶಾಲೆಗೆ ನಡೆದು ಹಲವು ಬಗೆಯ ಅಂಗಸಾಧನೆಗಳನ್ನು ಮಾಡಿ ಶ್ರಾಂತನಾದನು. ತರುವಾಯ 'ಸೇವಕರು, ಸ್ನಾನಗೃಹಕ್ಕೆ ಕರೆದೊಯ್ದರು' ಅಲ್ಲಿ ವಿವಿಧ ಪರಿಮಳ ತೈಲಗಳನ್ನು ಆತನ ಮೈಗೆ ಉಜ್ಜಿ, ಸೇವಕರು ಆತನ ಆಯಾಸವು ಪರಿಹಾರವಾಗುವಂತೆ ಅಭ್ಯಂಗನಮಾಡಿಸಿ

ದರು. ಸಿದ್ಧಾರ್ಥರಾಜನಿಗೆ ಇದರಿಂದ ನೂತನೋತ್ಸಾಹವೂ, ಉಲ್ಲಾಸವೂ ಪ್ರಾಪ್ತವಾಗಲು, ಒಡನೆ ನವನವೀನ ವಸ್ತ್ರಾಭರಣಗಳನ್ನೂ, ಸಿಂಹಾಸನಾರೋಹಣಕ್ಕೆ ಅರ್ಹವಾದ ಹಾರಾತುರಾಯಿ ಮೊದಲಾದ ರಾಜಚಿಹ್ನೆಗಳನ್ನೂ ಧರಿಸಿದನು. ಸೇವಕರು ಶ್ವೇತಚ್ಛತ್ರವನ್ನು ಹಿಡಿದು ಸಕಲವಿಧ ಮರ್ಯಾದೆಗಳಿಂದಲೂ, ಆಸ್ಥಾನಮಂಟಪಕ್ಕೆ ಕರೆತಂದರು. ಈ ಮೊದಲೇ ಆಜ್ಞೆಮಾಡಿದ್ದಂತೆ ಸೇವಕರು ಸಭೆಯನ್ನು ತೋರಣಮೇಲ್ಕಟ್ಟು ಧ್ವಜಚಾಮರಾದಿಗಳಿಂದ ಅಲಂಕರಿಸಿ ನೇತ್ರಾನಂದಕರವಾಗುವಂತೆ ಮಾಡಿದ್ದರು. ಸಭಾದ್ವಾರವನ್ನು ಪ್ರವೇಶಿಸುತ್ತಿರಲು, ಮಂತ್ರಿಸಾಮಂತರೂ, ಆಪ್ತೇಷ್ಟರಾದ ರಾಜಪುತ್ರ ವೀರಶ್ರೇಷ್ಠರೂ, ಎದುರುಗೊಂಡು ಹಸ್ತಲಾಘವವನ್ನಿತ್ತರು. ಸಿದ್ಧಾರ್ಥನು ಬಹು ಸಂತೋಷಭರಿತನಾಗಿ ದಿವ್ಯ ಸಿಂಹಾಸನದಲ್ಲಿ ಕುಳಿತು, ದೈವಜ್ಞರನ್ನು ಕರೆತರಬೇಕೆಂದು ಸೇವಕರನ್ನು ಕಳುಹಿಸಿದನು.

ಒಡನೆ ಸೇವಕರು ಬ್ರಾಹ್ಮಣ ಕುಂಡಗ್ರಾಮವನ್ನು ಸೇರಿ, ರಾಜಾಜ್ಞೆಯನ್ನು ತಿಳಿಸಲಾಗಿ, ಹಲವು ಮಂದಿ ದೈವಜ್ಞ ಶಿಖಾಮಣಿಗಳು, ತಕ್ಷಣ ಹೊರಟು ಸಭೆಗೆಬಂದರು. ಸಿದ್ಧಾರ್ಥನು ಸಭೆಗೆ ಬಂದ ಆ ಭೂಸುರರನ್ನು ಇದಿರೆದ್ದು ಉಚಿತರೀತಿಯಿಂದ ಗೌರವಿಸಿ ತನಗೆ ಅಭಿಮುಖವಾಗಿದ್ದ ದಿವ್ಯಾಸನಗಳಲ್ಲಿ ಕುಳ್ಳಿರಿಸಿದನು. ಅವರನ್ನು, ಗಂಧ ಪುಷ್ಪ ತಾಂಬೂಲಗಳನ್ನಿತ್ತು ಮನರಂಜನಗೊಳಿಸಿದನು. ಹೀಗೆ ಆ ಭೂಸುರರು, ಸಂತುಷ್ಟರಾಗಿದ್ದಾರೆಂದು ತಿಳಿದೊಡನೆಯೇ, ರಾಜನು, ತನ್ನ ಪತ್ನಿಯು ಆ ಹಿಂದಿನ ರಾತ್ರಿಯಲ್ಲಿ ಕಂಡ ಸ್ವಪ್ನ ವೃತ್ತಾಂತವನ್ನು ಆದ್ಯಂತವಾಗಿ ತಿಳಿಸಿ, ಅದರ ಫಲವೇನಾಗಬಹುದೆಂದು, ದಯವಿಟ್ಟು ತಿಳಿಸಿ, ತನ್ನ ಮನಸ್ಸಂತೋಷಪಡಿಸಬೇಕೆಂದು ಪ್ರಾರ್ಥಿಸಿದನು.

ದೈವಜ್ಞರಾದ ಭೂಸುರರು, ತಮ್ಮ ತಮ್ಮಲ್ಲೆ ಸ್ವಲ್ಪಹೊತ್ತು ಪರಸ್ಪರ ವಿಚಾರಮಾಡಿಕೊಂಡು, ತರುವಾಯ ಏಕವಾಕ್ಯದಿಂದ-ಹಸನ್ಮುಖರಾಗಿ—'ಪ್ರಭೋ ಮಹಾರಾಣಿ ತ್ರಿಶಲಾದೇವಿಯು ಕಂಡಿರುವ ಈ ಸ್ವಪ್ನಗಳು ನಿಸ್ಸಂಶಯವಾಗಿ ಶುಭಸೂಚಕಗಳಾಗಿವೆ ಸ್ವಪ್ನಶಾಸ್ತ್ರದಲ್ಲಿ ಈಬಗೆಯ ಸ್ವಪ್ನಗಳ ವೃತ್ತಾಂತವು ಹೇಳಲ್ಪಟ್ಟಿದೆ. ಈ ಬಗೆಯ ಮೂವತ್ತರಲ್ಲಿ

ಯಾವ ಮಾತೆಯು ಹದಿನಾಲ್ಕು ಸ್ವಪ್ನಗಳನ್ನು ಕಂಡ ತರುವಾಯ ಎಚ್ಚ ರಗೊಳ್ಳುವಳೋ ಆಕೆಯ ಉದರದಲ್ಲಿ ಜಗತ್ಪ್ರಭುವಾದ ಚಕ್ರವರ್ತಿ ಯಾಗಲಿ-ಅಥವ ಜಗತ್ತಿಗೇ ಗುರುವಾಗಿ ಲೋಕವನ್ನು ಉದ್ಧರಿಸಬಲ್ಲ ಅರ್ಹತ್ ತೀರ್ಥಂಕರನಾಗಲೀ ಉದಯಿಸುವನು. ಆ ಪೈಕಿ ಏಳು ಸ್ವಪ್ನ ಗಳನ್ನು ಕಂಡು ಎಚ್ಚರಗೊಳ್ಳುವ ಮಾತೆಯ ಉದರದಲ್ಲಿ ವಾಸುದೇವ ರೂ, ನಾಲ್ಕು ಸ್ವಪ್ನಗಳನ್ನು ಕಂಡು ಎಚ್ಚರಗೊಳ್ಳುವ ಮಾತೆಯ ಬಸಿರ ನಲ್ಲಿ ಬಲದೇವರೂ, ಈ ಮೂವತ್ತರಲ್ಲಿ ಏಕಮಾತ್ರ ಕನಸನ್ನು ಕಂಡು ಎಚ್ಚರಗೊಳ್ಳುವಾಕೆಯ ಉದರದಲ್ಲಿ ಮಾಂಡಲಿಕ ರಾಜರೂ ಉತ್ಪತ್ತಿಯಾ ಗುವರೆಂದು ಹೇಳಲ್ಪಟ್ಟಿದೆ. ತ್ರಿಶಲಾರಾಜ್ಞಿಯು ಹದಿನಾಲ್ಕು ಕನಸುಗ ಳನ್ನು ಕಂಡು ಎಚ್ಚತ್ತಿರುವಳಾದುದರಿಂದ ಈಕೆಯ ಗರ್ಭಸುಧಾಂಬುಧಿ ಯಲ್ಲಿ ಲೋಕೋದ್ಧಾರಕ್ಕಾಗಿ ತೀರ್ಥಂಕರ-ಜಿನಪ್ರಭುವೇ ಅವತಾರ ಮಾಡುವನು ಇದಕ್ಕೆ ಸಂದೇಹವಿಲ್ಲ' ಎಂದು ಹೇಳಿದರು. ರಾಜನೂ ಈ ಮಾತುಗಳನ್ನು ಕೇಳಿ ಪರಮಸಂತುಷ್ಟನಾಗಿ, ಅವರಿಗೆ ಮನದಣಿಯುವಂತೆ ಬಹುಮಾನಮಾಡಿ ಗೌರವದಿಂದ ಕಳುಹಿಸಿಕೊಟ್ಟನು. ಈ ವೃತ್ತಾಂತವ ನ್ನು ತ್ರಿಶಲಾದೇವಿಗೂ ತಿಳಿಸಲು ಆಕೆಯೂ ಪರಮಸಂತುಷ್ಟಳಾದಳು.

ತೀರ್ಥಂಕರನು, ಹೀಗೆ ಯಾವ ಪುಣ್ಯವತಿಯ ಗರ್ಭವನ್ನು ಪ್ರವೇ ಶಿಸುವನೋ ಆಕೆಗೆ ಇಂತಹ ದಿವ್ಯ ಸ್ವಪ್ನಗಳು ತಪ್ಪದೆ ಆಗುವುವೆಂದು ಜೈನ ಗ್ರಂಥಗಳು ಹೇಳುತ್ತವೆ. ಹಿಂದೆ ಪ್ರತಿಯೊಬ್ಬ ತೀರ್ಥಂಕರನ ಉದಯಕಾಲದಲ್ಲೂ ಆತನ ಮಾತೆಯು ಇಂತಹ ಅನುಭವವನ್ನು ಪಡೆದು ದುಂಟೆಂದು ಹೇಳಲ್ಪಟ್ಟಿದೆ. ತ್ರಿಶಲಾದೇವಿಗೆ ಮಾತ್ರವಲ್ಲ-ಅದಕ್ಕೆ ಪೂ ರ್ವದಲ್ಲಿ ಮಹಾವೀರನ ಗರ್ಭಪಿಂಡವು ದೇವಾನಂದಳ ಉದರದಲ್ಲಿದ್ದಾಗ್ಗ ಆಕೆಗೂ ಈ ಬಗೆಯ ಸ್ವಪ್ನಾನುಭವವಾಗಿದ್ದಿತಂತೆ!

ಮಹಾವೀರನ ದಿವ್ಯಚೇತನವು ಸಿದ್ಧಾರ್ಥರಾಜನ ಗೃಹದಲ್ಲಿ—ಆತನ ಪತ್ನಿಯ ಉದರದಲ್ಲಿ, ಅಭಿವೃದ್ಧಿಯಾಗುತ್ತಿರುವುದೆಂಬುದನ್ನು ತಿಳಿದೂ ಡನೆಯೇ ದೇವರಾಜನಾದ ಇಂದ್ರನ ದೇವತೆಗಳೂ ಮತ್ತು ಗಂಧರ್ವರೂ, ಸಕಲವಿಧ ಸೌಭಾಗ್ಯಗಳನ್ನೂ ಒದಗಿಸಿ ಆ ರಾಜ್ಯವನ್ನು ಸರ್ವಸಂಪ ತ್ಪೂರ್ಣವಾಗುವಂತೆ ಮಾಡಿರಿ ಎಂದು ಆಜ್ಞಾಪಿಸಿದನು. ಯಾವ ರಾತ್ರಿ

ಆ ತೀರ್ಥಂಕರನ ಪುಣ್ಯಚೇತನವು ತ್ರಿಶಲಾದೇವಿಯ ಉದರಕ್ಕೆ ತರಲ್ಪಟ್ಟಿತೋ ಆಗಿನಿಂದ ಮುತ್ತು ರತ್ನಗಳೂ ನವಧಾನ್ಯಗಳೂ, ಹೆಚ್ಚೇನು ನವನಿಧಿಗಳೂ ಶತಾಧಿಕ ಪ್ರಮಾಣದಿಂದ ವಿದೇಹರಾಜಧಾನಿಯಲ್ಲಿ ಅಭಿವೃದ್ಧಿಯಾದುವು. ಸಿದ್ಧಾರ್ಥನ ರಾಜಗೃಹವೂ, ರಾಜಧಾನಿಯೂ, ರಾಜ್ಯವೂ ನೂತನ ತೇಜಸ್ವಿತೆಯಿಂದ ಕಂಗೊಳಿಸತೊಡಗಿತು. ದೇವರಾಜನ ಆಜ್ಞೆಯಿಂದ ದೇವತೆಗಳೂ ಗಂಧರ್ವರೂ ವೈಶಾಲೀ ರಾಜಧಾನಿಗೆ ಬಂದು ದಿವ್ಯದೇವಗಾನದಿಂದಲೂ, ಮಂಗಳಕರವಾದ ಗೀತನರ್ತನಾದಿಗಳಿಂದಲೂ, 'ಗರ್ಭಾವತರಣ ಕಲ್ಯಾಣ' ವೆಂಬ ಮಹೋತ್ಸವವನ್ನು ನಡೆಯಿಸಿ ಹೊರಟುಹೋದರು.

ಮಹಾಲೋಕೋಪಕಾರಿಗಳೂ, ತೀರ್ಥಂಕರರೇ ಮುಂತಾದ ಪವಿತ್ರಾತ್ಮರೂ ಲೋಕದಲ್ಲಿ ಉದ್ಭವಿಸುವಾಗ್ಗೆ ದೇವತೆಗಳು, ಗರ್ಭಾವತರಣ ಕಲ್ಯಾಣ, ಜನ್ಮಾಭಿಷೇಕ ಕಲ್ಯಾಣ ಮುಂತಾದ ಪಂಚಕಲ್ಯಾಣ ಮಹೋತ್ಸವಗಳನ್ನು ನಡೆಸುತ್ತಾರೆಂದು ಜೈನ ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿದೆ.



## ಅಧ್ಯಾಯ ೩. 'ಬಾಲ್ಯ-ವಿದ್ಯಾಭ್ಯಾಸ'

ತ್ರಿಶಲಾದೇವಿಯ ಪುಣ್ಯಗರ್ಭವು ಹೀಗೆ ದೇವತೆಗಳಿಂದಲೂ, ಮಾನವರಿಂದಲೂ ಗೌರವಿಸಲ್ಪಡುತ್ತ ಅಭಿವೃದ್ಧಿಯಾಗುತ್ತಿದ್ದಿತು. ಹೀಗಿರುವಲ್ಲಿ ಮಧ್ಯೆ ಒಂದು ದಿನ, ಮಹಾವೀರನ ಗರ್ಭಸ್ಥಚೇತನವು, ಗರ್ಭದಲ್ಲಿ ತಾನು ಆಡುವುದರಿಂದ ತನ್ನ ತಾಯಿಗೆ ಹಿಂಸೆಯಾಗಬಹುದೋ ಎಂದು ಯೋಚಿಸಿ ಸ್ವಲ್ಪಕಾಲ, ಅಲುಗಾಡದೆ ಸ್ತಬ್ಧಭಾವವನ್ನು ವಹಿಸಿ ಸುಮ್ಮನಿದ್ದುಬಿಟ್ಟಿತಂತೆ! ಆವರೆಗೆ ತನ್ನ ಗರ್ಭದಲ್ಲಿನ ಪಿಂಡವು ಚಲಿಸುತ್ತಿದ್ದುದನ್ನು ಅನುಭವಮಾಡುತ್ತಿದ್ದ ತ್ರಿಶಲಾದೇವಿಯು, ಒಡನೆ

ಅದು ನಿಶ್ಚಲವಾದುದನ್ನು ಕಂಡು, - 'ಹಾ-ಏನೋ ಅಪಾಯವಾಗಿದೆ. ಗರ್ಭದ ಚಲನೆಯೂ ನಿಂತುಹೋಗಿದೆ. ಮೃತವಾಯಿತೋ ಏನೋ' ಎಂದು ಗಾಬರಿಪಟ್ಟು, ಆ ವೃತ್ತಾಂತವನ್ನು ಪತಿಗೆ ತಿಳಿಸಿದಳು. ಒಡನೆ ಆ ಸಂಗತಿಯು ರಾಜಧಾನಿಯಲ್ಲೆಲ್ಲ ಹಬ್ಬಿತು. ಎಲ್ಲಾವಿಧವಾದ ಸಂತೋಷ ವಿಚಾರಗಳೂ, ನಿಂತುಹೋದುವು. ಎಲ್ಲರೂ ಚಿಂತಾಮಗ್ನರಾದರು. ಸಿದ್ಧಾರ್ಥ ಮತ್ತು ತ್ರಿಶಲಾದೇವಿಯರ ಯೋಚನೆಯೂ ವ್ಯಸನವೂ ಗಳಿಗೆ ಗಳಿಗೆಗೆ ಹೆಚ್ಚುತ್ತಾ ಸಾಗಿತು. ತನ್ನ ಸ್ವಲ್ಪ ಹೊತ್ತಿನ ನಿಶ್ಚಲತೆಯಿಂದ ತನ್ನ ಮಾತಾಪಿತೃಗಳಿಗೂ, ರಾಜಧಾನಿಯ ಪ್ರಜೆಗಳಿಗೂ ಪ್ರಾಪ್ತವಾದ ವ್ಯಸನವನ್ನು ಕಂಡು, ಮಹಾವೀರನು, ತಾನು ಭೂಮಿಯಲ್ಲಿ ಜನಿಸಿದಮೇಲೆ ತನ್ನ ತಂದೆತಾಯಿಗಳಿಗೆ ಲೇಶಮಾತ್ರವೂ ವ್ಯಸನವುಂಟಾಗದಂತೆ ವರ್ತಿಸಬೇಕೆಂದು ನಿಶ್ಚಯಮಾಡಿಕೊಂಡನು. ಅವರು ಜೀವಂತರಾಗಿರುವಾಗಲೇ ತಾನು ಗೃಹತ್ಯಾಗಮಾಡಿ ಸನ್ಯಾಸ ಸ್ವೀಕಾರಮಾಡಿದರೆ ಅವರಿಗೆ ಹಿಂಸೆಯಾಗುವುದು. ಅವರ ಮನಸ್ಸು ನೋಯುವುದು, ಆದುದರಿಂದ, ಅವರು ಬದುಕಿರುವ ಪರ್ಯಂತ ತಾನು ಕೇಶವಿಚ್ಛೇದನಮಾಡಿಕೊಂಡು ಸನ್ಯಾಸಿಯಾಗಕೂಡದು ಎಂದು ಸಂಕಲ್ಪಿಸಿದನು.

ಹೀಗೆ ಸಂಕಲ್ಪಿಸಿದ ಒಡನೆ, ಪುನಃ ಗರ್ಭದಲ್ಲಿ ಚಲನೆಯುಂಟಾಯಿತು. ತಾಯಿಗೆ, ತನ್ನ ಮಗುವು ಮೃತವಾಗಲಿಲ್ಲ; ಬದುಕಿದೆಯೆಂದು ಧೈರ್ಯವುಂಟಾಯಿತು. ಆ ಸಂಗತಿಯನ್ನು ರಾಜನಿಗೆ ತಿಳಿಸಿದಳು. ಆತನೂ ಚಿಂತೆಯನ್ನು ಕಳೆದು ಸಂತೋಷಭರಿತನಾದನು. ಮುಂದೆ ತ್ರಿಶಲಾದೇವಿಯು ಯಾವ ಬಾಧೆಗೂ ಒಳಗಾಗದೆ ಪುಷ್ಟಿಕರವಾದ ಸಾತ್ವಿಕಾಹಾರಗಳನ್ನೇ ಸ್ವೀಕರಿಸುತ್ತಾ ಸದಾಸದ್ವಿಷಯಗಳನ್ನೇ ಚಿಂತಿಸುತ್ತಾ, ತನ್ನ ಗರ್ಭವನ್ನು ಬಹು ಜೋಪಾನದಿಂದ ಪೋಷಿಸಿದಳು. ಸಿದ್ಧಾರ್ಥರಾಜನಾದರೂ, ಆಕೆಯ ಬಯಕೆಗಳನ್ನೆಲ್ಲ ಲೋಪಮಾಡದೆ ಪೂರ್ತಿಗೊಳಿಸುತ್ತಾ, ಆಕೆಯ ಮನಸ್ಸಿಗೆ ಲೇಶಮಾತ್ರವೂ ಚಿಂತೆಯುಂಟಾಗಲು ಅವಕಾಶವನ್ನುಂಟುಮಾಡದಂತೆ ಪೋಷಿಸಿಕೊಂಡುಬಂದನು. ಹೀಗೆ ಆ ಪುಣ್ಯ

ಗರ್ಭವು * ಒಂಬತ್ತು ತಿಂಗಳಮೇಲೆ ಏಳೂವರೆ ದಿನಗಳವರೆಗೆ ಬೆಳೆಯಿತು. ತರುವಾಯ ಚೈತ್ರಮಾಸದ ಶುಕ್ಲಪಕ್ಷ ತ್ರಯೋದಶೀ ಸೋಮವಾರ ಶುಭ ಉತ್ತರಾ ಫಲ್ಗುಣೀ ನಕ್ಷತ್ರದಲ್ಲಿ ಸಕಲ ಶುಭಗ್ರಹಗಳೂ ತಮ್ಮ ತಮ್ಮ ಉಚ್ಚಸ್ಥಾನದಲ್ಲಿ ಇದ್ದ ಶುಭಕಾಲದಲ್ಲಿ ಮಹಾರಾಣಿಯು ಪುರುಷ ಶಿಶುವನ್ನು ಪ್ರಸವಿಸಿದಳು. ಆಗ ಅಂತರಿಕ್ಷವು ನಿರ್ಮಲವಾಗಿದ್ದಿತು. ಮಂದಮಾರುತವು ಬೀಸಿತು. ದಿಕ್ಕುಗಳು ಪ್ರಸನ್ನವಾಗಿದ್ದುವು. ಜಗತ್ತಿನಲ್ಲಿ ಸಕಲ ಸಜ್ಜನರ ಮನಸ್ಸೂ ಉಲ್ಲಾಸ ಪೂರ್ಣವಾಯಿತು.

ತಮ್ಮ ಮಹಾರಾಜನ ಅರಮನೆಯಲ್ಲಿ ಪುರುಷ ಶಿಶುವು ಜನಿಸಿತೆಂಬ ವಾರ್ತೆಯು ತಿಳಿದೊಡನೆಯೇ ನಗರದ ರಾಜಭಕ್ತ ಪ್ರಜೆಗಳು ದಿವ್ಯ ವಸ್ತ್ರಾಭರಣಗಳನ್ನು ಧರಿಸಿ, ಮಂಗಳಗೀತಗಳನ್ನು ಹಾಡಿಕೊಳ್ಳುತ್ತಾ, ಅನೇಕ ಉತ್ಸವಾದಿಗಳನ್ನು ನಡೆಸಿದರು. ಸಿದ್ಧಾರ್ಥನು ಆ ವೇಳೆಯಲ್ಲಿ ಸಕಲ ಜನರೂ ಆನಂದಿಸಲೆಂದು, ಸೆರೆಮನೆಯಲ್ಲಿದ್ದ ಬಂದೀವಾನರನ್ನೆಲ್ಲ ಬಿಡುಗಡೆಮಾಡಿಸಿದನು. ತಾನೂ ಮಂಗಳಸ್ನಾನಮಾಡಿ—ಪಂಡಿತರನ್ನೂ, ಜ್ಞಾನಿಗಳನ್ನೂ, ಜ್ಯೋತಿರ್ವಿದರನ್ನೂ ಕರೆಸಿಕೊಂಡು ಅವರನ್ನು ವಿಶೇಷ ದಾನ ದಕ್ಷಿಣೆಗಳನ್ನಿತ್ತು ತೃಪ್ತಿಪಡಿಸಿದನು. ಬಡಜನಗಳಿಗೂ, ಅಂಗಹೀನ—ಅನಾಥರಿಗೂ ಅನ್ನವಸ್ತ್ರಾದಿಗಳನ್ನಿತ್ತು ಸಂತೋಷಪಡಿಸಿದನು.

ನಮ್ಮ ಕಥಾನಾಯಕನ ಪಾವಿತ್ರ್ಯತೆಯನ್ನು ಪುಷ್ಟೀಕರಿಸಲು, ದೇವತೆಗಳೂ ಅಡಿಗಡಿಗೆ ಆತನನ್ನು ಪೂಜಿಸುತ್ತಿದ್ದರು, ಎಂದು ಹೇಳುವಂತಹ ಹಲವು ಕಥೆಗಳು, ಜೈನ ಪುರಾಣಗ್ರಂಥಗಳಲ್ಲಿವೆ. ಅವುಗಳಲ್ಲಿ ಇಂದ್ರನು ಆತನ ಜನ್ಮಾಭಿಷೇಕ ಕಲ್ಯಾಣಮಹೋತ್ಸವವನ್ನು ಜರುಗಿಸಿದ ಒಂದು ಕಥೆಯನ್ನು ಇಲ್ಲಿ ಕೊಡುತ್ತೇವೆ.

'ಭೂಲೋಕದಲ್ಲಿ ತೀರ್ಥಂಕರನ ಜನನವಾದೊಡನೆಯೇ, ಅತ್ತ ದೇವಲೋಕದಲ್ಲಿ ಇಂದ್ರನ ಆಸನವು ಕಂಪಿಸಿತಂತೆ! ದೇವರಾಜನು,

---

* ಈ ಮೊತ್ತದಲ್ಲಿ ೮೨ ದಿನಗಳು ದೇವಾನಂದಳ ಉದರದಲ್ಲೂ, ಮಿಕ್ಕ ದಿನಗಳು ತ್ರಿಶಲಾದೇವಿಯ ಉದರದಲ್ಲೂ ಗರ್ಭವು ಬೆಳೆಯಿತೆಂದು ತಿಳಿಯಬೇಕು.

ತನ್ನ ಅವಧಿ ಜ್ಞಾನೋಪಯೋಗದಿಂದ ಆ ಸಂಗತಿಯನ್ನು ತಿಳಿದು, ಒಡನೆ ಇಂದ್ರಾಣೀ ಸಮೇತನಾಗಿ ಐರಾವತವನ್ನೇರಿ, ವೈಶಾಲೀಗೆ ಬಂದು, ತಾಯಿಯ ಬಳಿಯಲ್ಲಿ ಮಲಗಿದ್ದ ಆ ಪುಣ್ಯಶಿಶುವನ್ನು ಎತ್ತಿಕೊಂಡು, ಅದರ ಸ್ಥಾನದಲ್ಲಿ ಮತ್ತೊಂದು ಮಾಯಾಶಿಶುವನ್ನಿರಿಸಿ, ಅದನ್ನು ತಮ್ಮ ಆನೆಯಮೇಲಿನ ಅಂಬಾರಿಯಲ್ಲಿರಿಸಿಕೊಂಡು ಮಹಾಮೇರುಪರ್ವತದ ಶಿಖರದಲ್ಲಿರುವ ಪಾಂಡುಕವನದ ಈಶಾನ್ಯ ದಿಕ್ಕಿನಲ್ಲಿರುವ ಅರ್ಧಚಂದ್ರಾಕಾರವಾದ ಪಾಂಡುಕವೆಂಬ ಶಿಲೆಯಮೇಲೆ ಕರೆದೊಯ್ದು ಕೂರಿಸಿ, ದೇವತೆಗಳಿಂದ ಕ್ಷೀರಸಮುದ್ರದ ಜಲವನ್ನು ತರಿಸಿ, ಅಭಿಷೇಕ ಮಾಡಿ- 'ಮಹಾವೀರ, ವರ್ಧಮಾನ' ಎಂದು ನಾಮಕರಣಮಾಡಿ, ಪೂಜಿಸಿ, ಪುನಃ ಅಲ್ಲಿಂದ ಕರೆತಂದು. ತಾಯಿಯ ಬಳಿಯಲ್ಲಿಟ್ಟು ಹೊರಟುಹೋದನು. ಈ ಉತ್ಸವಕ್ಕೆ 'ಜನ್ಮಾಭಿಷೇಕ ಕಲ್ಯಾಣ'ವೆಂದು ಹೆಸರು.

ಶಿಶುವು ಪ್ರಸವಗೃಹದಲ್ಲಿ ಸುಖವಾಗಿ ಬೆಳೆಯುತ್ತಿದ್ದಿತು. ಮೂರನೆಯ- ಆರನೆಯ ದಿನಗಳಲ್ಲಿ ಕುಲಾಚಾರಪದ್ಧತಿಯನ್ನನುಸರಿಸಿ ಮಾಡಬೇಕಾದ ಸಕಲ ಉತ್ಸವಗಳನ್ನೂ ನಡೆಯಿಸಿದರು. ಹನ್ನೊಂದನೆಯ ದಿನದಲ್ಲಿ ಮಂಗಳಸ್ನಾನವಾಯಿತು. ಹನ್ನೆರಡನೆಯ ದಿನ ವಿಶೇಷ ಉತ್ಸವಾದಿಗಳು ನಡೆದುವು. ಬಂಧು ಬಾಂಧವರಿಗೆ ದಿವ್ಯ ಔತಣಾದಿಗಳನ್ನು ನಡೆಸಿ, ಆ ಪುಣ್ಯಶಿಶುವನ್ನು ತೊಟ್ಟಿಲಲ್ಲಿರಿಸಿ ನಾಮಕರಣ ಮಹೋತ್ಸವವನ್ನು ನೆರವೇರಿಸಿದರು. ಈ ಶಿಶುವು ಗರ್ಭಸ್ಥನಾದ ಮೊದಲು, ನಮ್ಮ ಈ ರಾಜಧಾನಿಯಲ್ಲಿ ಧನಕನಕಾದಿ ಸಕಲೈಶ್ವರ್ಯಗಳೂ ದಿನ ದಿನಕ್ಕೆ ವೃದ್ಧಿಯಾಗುತ್ತಿವೆಯಾದುದರಿಂದ ಈ ಶಿಶುವನ್ನು ವರ್ಧಮಾನ ಎಂಬ ಹೆಸರಿನಿಂದ ಕರೆಯಬೇಕು ಎಂದೆಣಿಸಿ ಶಿಶುವಿಗೆ ವರ್ಧಮಾನನೆಂದು ನಾಮಕರಣಮಾಡಿದರು. ಜನ್ಮನಕ್ಷತ್ರದ ಬಲೀಯದಿಂದ ತನ್ನ ಜೀವಿತಕಾಲದಲ್ಲಿ ಯಾವ ವಿಧವಾದ ಭಯವನ್ನೂ ಅಪಾಯವನ್ನೂ ಲಕ್ಷ್ಯಮಾಡದೆ, ಶೀತ ಉಷ್ಣ ಸುಖದುಃಖಾದಿಗಳ ಭೇದವಿಲ್ಲದೆ ಸಹನಮಾಡುತ್ತಾ, ಕಾಮಕ್ರೋಧಾದಿಗಳನ್ನು ಜಯಿಸುವನೆಂಬುದನ್ನು ತಿಳಿದು ಆತನನ್ನು ಮಹಾವೀರನೆಂಬ ಹೆಸರಿನಿಂದಲೂ ಕರೆದರು. ಅಲ್ಲದೆ ಆತನು ವೈಶಾಲಿಯ ರಾಜಪುತ್ರಿಯ ಗರ್ಭಸಂಭೂತನಾದುದರಿಂದ ಆತನು ವೈಶಾಲೀಯನೆಂದೂ, ಜ್ಞಾತಪುತ್ರ,

ಜಿನ ಮುಂತಾದ ಹೆಸರುಗಳಿಂದಲೂ ಕರೆದು, ಮಹೋತ್ಸವಗಳನ್ನು ನಡೆಸಿ ಆನಂದಿಸಿದರು.

ಮಹಾವೀರನ ಶೈಶವವು ಹಲವು ವಿಧ ಆಟಪಾಟಗಳಿಂದಲೂ, ಶಿಶು ಸಹಜವಾದ ನಗೆ ನೋಟಗಳಿಂದಲೂ ಕೂಡಿ ಮಾತಾಪಿತೃಗಳಿಬ್ಬರಿಗೂ ಮಹದಾನಂದದಾಯಕವಾಗಿ ಕಳೆಯಿತು. ಬಾಲ್ಯಾವಸ್ಥೆಯಲ್ಲಿ ವರ್ಧಮಾನನು ಅಂಬೆಗಾಲು, ತಪ್ಪು ಹೆಜ್ಜೆಗಳು, ತೊದಲ್ನುಡಿಗಳು ಮುಂತಾದುವುಗಳಿಂದ ರಾಣಿ ತ್ರಿಶಲಾದೇವಿಗೆ ಭೂಲೋಕದಲ್ಲೇ ಸ್ವರ್ಗಸೌಖ್ಯವನ್ನೀಯುತ್ತಾ ಬೆಳೆದನು. ರೋಗರುಜಿನೆಗಳ ಸೋಂಕಿಲ್ಲದೆ, ಎಳೆನಗುವಿನಿಂದ ಕಳಕಳನೆಂದು ಹೊಳೆಯುತ್ತಿದ್ದ ಮುಖಕಾಂತಿಯಿಂದ ಮಹಾವೀರನು ಸಕಲರ ಮನಸ್ಸಿಗೂ ಆನಂದವನ್ನುಂಟುಮಾಡಿದನು. ದುಂಡಾದ ಮೈಕೈಕಾಲುಗಳು, ತುಂಬುಗಲ್ಲಗಳು ಮುಂಗುರುಳುಗಳು, ಸುಳಿಪಲ್ಲುಗಳು, ತೇಜಸ್ವಿನೇತ್ರಗಳು, ಈ ಸ್ವಾಭಾವಿಕ ಸೌಂದರ್ಯವೇ, ತಾಯಿತಂದೆಗಳು, ಪ್ರೀತಿಯಿಂದ ತೊಡಿಸುವ ಕನಕಾಭರಣಗಳಿಗೂ ಕಾಂತಿಯನ್ನುಂಟುಮಾಡುತ್ತಿದ್ದಿತು. ಮಹಾವೀರನು ಹೀಗೆ ಬಾಲ್ಯದ ನಾಲ್ಕೈದು ವರ್ಷಗಳನ್ನು ವಿನೋದದಿಂದ ಕಳೆದನು.

ಬಾಲ್ಯವಯಸ್ಸಿನ ಶ್ರೀಕೃಷ್ಣನ ಮಹಿಮೆಯನ್ನು ವ್ಯಾಖ್ಯಾನಿಸುವ ಹಿಂದೂ ಪುರಾಣ ಕಥೆಗಳಂತೆಯೇ, ವರ್ಧಮಾನನ ಮಹಿಮೆಯನ್ನು ವರ್ಣಿಸುವ ಕೆಲವು ಕಥೆಗಳೂ ಜೈನ ಗ್ರಂಥಗಳಲ್ಲಿ ದೊರೆಯುತ್ತವೆ. ಅವುಗಳಲ್ಲಿ ಒಂದೆರಡನ್ನು ಇಲ್ಲಿ ಕೊಡಬಯಸುತ್ತೇವೆ.

ವರ್ಧಮಾನ ಬಾಲಕನು ದೇಹ ಸೌಂದರ್ಯದಲ್ಲೂ, ಕಾಯಶಕ್ತಿಯಲ್ಲೂ ತನ್ನ ವಯಸ್ಸಿನ ಎಲ್ಲಾ ಕ್ಷತ್ರಿಯ ಬಾಲಕರನ್ನೂ ಮೀರಿಸಿ ಮಹಾತೇಜಸ್ವಿಯಾಗಿದ್ದನು. ಅವನ ಶಕ್ತಿಸಾಹಸಗಳಿಗೆ ಈಡೇ ಇರಲಿಲ್ಲ. ಒಂದಾನೊಂದು ದಿನ, ಸಿದ್ಧಾರ್ಥರಾಜನ ಮಂತ್ರಿಗಳ ಮಕ್ಕಳೇ ಮುಂತಾದ ಅವನ ಜೊತೆಯ ವಯಸ್ಸಿನ ಕ್ಷತ್ರಿಯ ಬಾಲಕರೆಲ್ಲರೂ ಅವನೊಂದಿಗೆ ಎಂದಿನಂತೆ ಆಟಕ್ಕೆ ಬಂದಿದ್ದರು. ಬಾಲಕರೆಲ್ಲರೂ ರಾಜೋದ್ಯಾನದಲ್ಲಿ ಸೇರಿ ಮಹಾ ಸಂಭ್ರಮದಿಂದ ಆಟಪಾಟಗಳನ್ನಾಡುತ್ತಾ ವಿನೋದಪಡುತ್ತಿದ್ದರು. ಅಷ್ಟರಲ್ಲಿ ಅರಮನೆಯ ಲಾಯದಿಂದ ಮಾವುತರ ಕೈಮೀರಿ

ಹೊರಬಿದ್ದ ಒಂದು ಮದ್ದಾನೆಯು ಅಲ್ಲಲ್ಲಿ ನುಗ್ಗುತ್ತಾ ಎಲ್ಲರನ್ನೂ ಬೆದರಿಸಿ ಓಡಿಸುತ್ತಾ ರಾಜಪುತ್ರರು ಆಡಿಕೊಳ್ಳುತ್ತಿದ್ದ ಉದ್ಯಾನದ ಕಡೆಗೆ ನುಗ್ಗಿ ಓಡಿ ಬಂದಿತು. ಅದನ್ನು ಕಂಡ ಬಾಲಕರೆಲ್ಲರೂ ಬೆದರಿ ದಿಕ್ಕುಪಾಲಾಗಿ ಓಡಿಹೋದರು. ಆದರೆ ಬಾಲಕನಾದ ಮಹಾವೀರನು ಮದವೇರಿ ಮೆರೆಯುತ್ತಿದ್ದ ಆ ಆನೆಯನ್ನು ಕಂಡು, ಲೇಶಮಾತ್ರವೂ ಭೀತಿಗೊಳ್ಳದೆ, ಕೇವಲ ಸಮಾಧಾನದಿಂದಲೇ ಅದರ ಬಳಿಗೆ ನಡೆದುಹೋಗಿ, ಅದರ ಸೊಂಡಿಲನ್ನು ಹಿಡಿದು, ಅದನ್ನು ಸಮುದಾಯಿಸಿ, ಆ ಮೂಲಕವೇ ಅದರ ಮಸ್ತಕದ ಮೇಲೇರಿ ಕುಳಿತು ಸವಾರಿ ಮಾಡಿದನು.

ಮತ್ತೊಂದು ದಿನ ಮೇಲ್ಕಂಡಂತೆ ಬಾಲಕರೊಂದಿಗೆ ಆಟವಾಡಿಕೊಳ್ಳುತ್ತಿದ್ದಾಗ್ಗೆ, ಮಹಾವೀರನ ಸಾಮರ್ಥ್ಯವನ್ನು ಪರೀಕ್ಷಿಸಲೆಳಸಿ ದೇವತೆಯೊಬ್ಬನು ಕಾಣಿಸಿಕೊಂಡು, ವರ್ಧಮಾನ ಬಾಲಕನನ್ನು ತನ್ನ ಹೆಗಲಮೇಲೆ ಕೂರಿಸಿಕೊಂಡು, ಆಕಾಶದಲ್ಲಿ ಎತ್ತರಕ್ಕೆ ಎತ್ತಿಕೊಂಡೊಯ್ದನು. ಪ್ರಾರಂಭಕ್ಕೆ ಅವನ ದುರುದ್ದೇಶವನ್ನು ತಿಳಿಯದೆ ಎತ್ತಿಕೊಳ್ಳಲು ಅವಕಾಶಕೊಟ್ಟ ಮಹಾವೀರನು, ಅವನು ತನಗೆ ಅಪಾಯವನ್ನುಂಟು ಮಾಡಬಹುದೆಂದೆಣಿಸಿ, ಅವನಿಗೆ ತನ್ನ ಶಕ್ತಿಸಾಮರ್ಥ್ಯಗಳನ್ನು ಪ್ರಕಟಪಡಿಸಲಿಚ್ಛಿಸಿ, ಕೆಳಕ್ಕೆ ಒತ್ತಿ ಅವನ ಕೂದಲನ್ನು ಜಗ್ಗಿ ಎಳೆಯಲು, ಆ ಬಾಧೆಯನ್ನು ಸಹಿಸಲಾರದೆ ಆ ದೇವನು ಬಾಲಕನನ್ನು ಕುರಿತು 'ನೀನು ಮಹಾವೀರನೆಂಬುದು ನಿಶ್ಚಯ. ಅದು ನಿನಗೆ 'ಅನ್ವರ್ಥನಾಮಧೇಯವಾಗಲಿ' ಎಂದು ನುಡಿದು ಹೊರಟುಹೋದನಂತೆ. ಇದನ್ನು ಜೈನಗ್ರಂಥಗಳು ಆಮಲಕ ಕ್ರೀಡೆಯೆಂದು ವರ್ಣಿಸುತ್ತವೆ.

ಬೇರೊಂದು ದಿನ ವರ್ಧಮಾನ ಬಾಲಕನು ತನ್ನ ಸ್ನೇಹಿತರೊಂದಿಗೆ ವಟವೃಕ್ಷವನ್ನು ಹತ್ತಿ ಆಟವಾಡಿಕೊಂಡಿದ್ದನು. ಆ ಕಾಲದಲ್ಲಿ ಅವನನ್ನು ಬೆದರಿಸಲಿಚ್ಛಿಸಿ 'ಸಂಗಮ' ನೆಂಬ ದೇವತೆಯೊಬ್ಬನು ಭಯಂಕರವಾದ ಸರ್ಪಾಕೃತಿಯನ್ನು ಹೊಂದಿ ಆ ಮರವನ್ನು ಸುತ್ತಿಕೊಂಡು ಹೆಡೆಯನ್ನು ಬಿಚ್ಚಿದನಂತೆ! ಅದನ್ನು ಕಂಡೊಡನೆಯೇ ಬಾಲಕರು ಭಯದಿಂದ ಗಡಗಡನೆ ನಡುಗಿ ಅಲ್ಲಿ ನಿಲ್ಲದೆ ಎಲ್ಲರೂ ಓಡಿಹೋದರು. ಆದರೆ ವರ್ಧಮಾನ ಬಾಲಕನು, ಲೇಶಮಾತ್ರವೂ ಭಯಪಡದೆ, ಅದನ್ನು ಸಮೀಪಿಸಿ ಆ

ಸರ್ಪದ ಹೆಡೆಯ ಮೇಲೆ ತನ್ನ ಪಾದವನ್ನಿಟ್ಟು ಅದರ ಸೊಕ್ಕನ್ನಡಗಿಸಿ ತರು ವಾಯ ಅದನ್ನೆತ್ತಿ ಆಚೆಗೆ ಎಸೆದನು. ಆ ಮಹಾ ನಾಗಸರ್ಪವನ್ನು ರಜ್ಜುವೋ ಎಂಬಂತೆ ತಿಳಿದು ಕಿತ್ತೆಸೆದ ಆತನ ಧೈರ್ಯವನ್ನೂ ಸಾಮರ್ಥ್ಯವನ್ನೂ ಕಂಡ ಸಕಲರೂ ಆತನು ಮಹಾವೀರನೆಂಬುದು ನಿಶ್ಚಯ ಎಂದು ಹೊಗಳಿದರು.

ಹೀಗೆಯೇ ಬಾಲಕ ಮಹಾವೀರನು, ತನ್ನ ಬಾಲ್ಯದ ಆಟಪಾಟ ಗಳಿಂದಲೂ ಕ್ಷತ್ರಿಯ ಬಾಲಕರಿಗೆ ಸಾಮಾನ್ಯವಾದ ಅಶ್ವಾರೋಹಣಾದಿ ಕ್ರೀಡೆಗಳಿಂದಲೂ ಸರ್ವರಿಗೂ ಆನಂದದಾಯಕನಾಗಿ ಬೆಳೆದನು. ಹೀಗೆ ಆತನು ಎಂಟು ವರ್ಷಗಳ ವಯಸ್ಕನಾಗಲು, ಸಿದ್ಧಾರ್ಥರಾಜನು ಆತನಿಗೆ ವಿದ್ಯಾಭ್ಯಾಸ ಮಾಡಿಸಲೆಳಸಿ, ಒಂದು ಶುಭ ಮುಹೂರ್ತದಲ್ಲಿ ವಿಶೇಷ ಉತ್ಸವಾದಿಗಳನ್ನು ನಡೆಸಿ, ಗುರುಗಳನ್ನು ಆಹ್ವಾನಿಸಿ, ಬಾಲಕನನ್ನು ಅವರ ವಶಕ್ಕೆ ಬಿಟ್ಟನು. ಉಪಾಧ್ಯಾಯನು ಆತನಿಗೆ ನೆಪಮಾತ್ರಕ್ಕೆ ಅಕ್ಷರಾ ಭ್ಯಾಸ ಮಾಡಿಸಿ, ಪ್ರಾರಂಭದ ಕೆಲ ಪಾಠಗಳನ್ನು ಹೇಳಿಕೊಟ್ಟುದಷ್ಟೆ! ಒಡನೆ ವರ್ಧಮಾನನು ಆ ವರ್ಣಮಾಲೆಯೆಲ್ಲವನ್ನೂ ಬರೆದು ಒಪ್ಪಿಸಿದನು. ಗುರುವು ವ್ಯಾಕರಣ ಪಾಠವನ್ನು ಬೋಧಿಸಲಾರಂಭಿಸಲು, ಬಾಲಕನು ಆ ಮಹಾ ವ್ಯಾಕರಣ ಗ್ರಂಥದ ಪೌರ್ವಪಾಠಗಳನ್ನೆಲ್ಲಾ ಬಾಯಿಪಾಠವಾಗಿ ಗುರುವಿಗೆ ಹೇಳಿ ಒಪ್ಪಿಸಿಬಿಟ್ಟನು. ಆ ಬಾಲಕನಿಗೆ ಬೋಧಿಸದೆಯೇ ಲಭ್ಯವಾಗಿದ್ದ ಈ ಅಗಾಧ ವಿದ್ವತ್ತೆಯನ್ನೂ, ಈ ಮೇಧಾಶಕ್ತಿಯನ್ನೂ ಕಂಡು ಗುರುವೂ ಮತ್ತು ಇತರರೂ ಪರಮಾಶ್ಚರ್ಯಪಟ್ಟರು.



## ಅಧ್ಯಾಯ ೪. 'ಸನ್ಯಾಸಗ್ರಹಣ— ದೀಕ್ಷಾಕಲ್ಯಾಣ'

ಸ್ವಾಭಾವಿಕವಾಗಿಯೇ ಮಹಾ ಮತಿಯಾಗಿ, ಜನ್ಮಿಸುವಾಗಲೇ-ಮಾ ತ್ರವಲ್ಲ, ಗರ್ಭದಲ್ಲಿದ್ದಾಗಲೇ ಮತಿಜ್ಞಾನವೆಂದರೆ ಬೌದ್ಧಿಕಜ್ಞಾನ, ಶ್ರುತಿ ಜ್ಞಾನವೆಂದರೆ ಶಾಸ್ತ್ರ ಸಂಬಂಧ ಜ್ಞಾನ, ಅವಧಿ ಜ್ಞಾನವೆಂದರೆ ಪ್ರತ್ಯಕ್ಷ

ಹೊರಬಿದ್ದ ಒಂದು ಮದ್ದಾನೆಯು ಅಲ್ಲಲ್ಲಿ ನುಗ್ಗುತ್ತಾ ಎಲ್ಲರನ್ನೂ ಚೆದರಿಸಿ ಓಡಿಸುತ್ತಾ ರಾಜಪುತ್ರರು ಆಡಿಕೊಳ್ಳುತ್ತಿದ್ದ ಉದ್ಯಾನದ ಕಡೆಗೆ ನುಗ್ಗಿ ಓಡಿ ಬಂದಿತು. ಅದನ್ನು ಕಂಡ ಬಾಲಕರೆಲ್ಲರೂ ಚೆದರಿ ದಿಕ್ಕುಪಾಲಾಗಿ ಓಡಿಹೋದರು. ಆದರೆ ಬಾಲಕನಾದ ಮಹಾವೀರನು ಮದವೇರಿ ಮೆರೆಯುತ್ತಿದ್ದ ಆ ಆನೆಯನ್ನು ಕಂಡು ಲೇಶಮಾತ್ರವೂ ಭೀತಿಗೊಳ್ಳದೆ, ಕೇವಲ ಸಮಾಧಾನದಿಂದಲೇ ಅದರ ಬಳಿಗೆ ನಡೆದುಹೋಗಿ, ಅದರ ಸೊಂಡಿಲನ್ನು ಹಿಡಿದು, ಅದನ್ನು ಸಮುದಾಯಿಸಿ, ಆ ಮೂಲಕವೇ ಅದರ ಮಸ್ತಕದ ಮೇಲೇರಿ ಕುಳಿತು ಸವಾರಿ ಮಾಡಿದನು.

ಮತ್ತೊಂದು ದಿನ ಮೇಲ್ಕಂಡಂತೆ ಬಾಲಕರೊಂದಿಗೆ ಆಟವಾಡಿಕೊಳ್ಳುತ್ತಿದ್ದಾಗ್ಗೆ, ಮಹಾವೀರನ ಸಾಮರ್ಥ್ಯವನ್ನು ಪರೀಕ್ಷಿಸಲೆಳಸಿ ದೇವತೆಯೊಬ್ಬನು ಕಾಣಿಸಿಕೊಂಡು, ವರ್ಧಮಾನ ಬಾಲಕನನ್ನು ತನ್ನ ಹೆಗಲಮೇಲೆ ಕೂರಿಸಿಕೊಂಡು, ಆಕಾಶದಲ್ಲಿ ಎತ್ತರಕ್ಕೆ ಎತ್ತಿಕೊಂಡೊಯ್ದನು. ಪ್ರಾರಂಭಕ್ಕೆ ಅವನ ದುರುದ್ದೇಶವನ್ನು ತಿಳಿಯದೆ ಎತ್ತಿಕೊಳ್ಳಲು ಅವಕಾಶಕೊಟ್ಟ ಮಹಾವೀರನು, ಅವನು ತನಗೆ ಅಪಾಯವನ್ನುಂಟು ಮಾಡಬಹುದೆಂದೆಣಿಸಿ, ಅವನಿಗೆ ತನ್ನ ಶಕ್ತಿಸಾಮರ್ಥ್ಯಗಳನ್ನು ಪ್ರಕಟಪಡಿಸಲಿಚ್ಛಿಸಿ, ಕೆಳಕ್ಕೆ ಒತ್ತಿ ಅವನ ಕೂದಲನ್ನು ಜಗ್ಗಿ ಎಳೆಯಲು, ಆ ಬಾಧೆಯನ್ನು ಸಹಿಸಲಾರದೆ ಆ ದೇವನು ಬಾಲಕನನ್ನು ಕುರಿತು ನೀನು ಮಹಾವೀರನೆಂಬುದು ನಿಶ್ಚಯ. ಅದು ನಿನಗೆ 'ಅನ್ವರ್ಥನಾಮಧೇಯವಾಗಲಿ' ಎಂದು ನುಡಿದು ಹೊರಟುಹೋದನಂತೆ. ಇದನ್ನು ಜೈನಗ್ರಂಥಗಳು ಆಮಲಕ ಕ್ರೀಡೆಯೆಂದು ವರ್ಣಿಸುತ್ತವೆ.

ಬೇರೊಂದು ದಿನ ವರ್ಧಮಾನ ಬಾಲಕನು ತನ್ನ ಸ್ನೇಹಿತರೊಂದಿಗೆ ವಟವೃಕ್ಷವನ್ನು ಹತ್ತಿ ಆಟವಾಡಿಕೊಂಡಿದ್ದನು. ಆ ಕಾಲದಲ್ಲಿ ಅವನನ್ನು ಬೆದರಿಸಲಿಚ್ಛಿಸಿ 'ಸಂಗಮ' ನೆಂಬ ದೇವತೆಯೊಬ್ಬನು ಭಯಂಕರವಾದ ಸರ್ಪಾಕೃತಿಯನ್ನು ಹೊಂದಿ ಆ ಮರವನ್ನು ಸುತ್ತಿಕೊಂಡು ಹೆಡೆಯನ್ನು ಬಿಚ್ಚಿದನಂತೆ! ಅದನ್ನು ಕಂಡೊಡನೆಯೇ ಬಾಲಕರು ಭಯದಿಂದ ಗಡಗಡನೆ ನಡುಗಿ ಅಲ್ಲಿ ನಿಲ್ಲದೆ ಎಲ್ಲರೂ ಓಡಿಹೋದರು. ಆದರೆ ವರ್ಧಮಾನ ಬಾಲಕನು, ಲೇಶಮಾತ್ರವೂ ಭಯಪಡದೆ, ಅದನ್ನು ಸಮೀಪಿಸಿ ಆ

ಸರ್ಪದ ಹೆಡೆಯಮೇಲೆ ತನ್ನ ಪಾದವನ್ನಿಟ್ಟು ಅದರ ಸೊಕ್ಕನ್ನಡಗಿಸಿ ತರುವಾಯ ಅದನ್ನೆತ್ತಿ ಆಚೆಗೆ ಎಸೆದನು. ಆ ಮಹಾ ನಾಗಸರ್ಪವನ್ನು ರಜ್ಜುವೋ ಎಂಬಂತೆ ತಿಳಿದು ಕಿತ್ತೆಸೆದ ಆತನ ಧೈರ್ಯವನ್ನೂ ಸಾಮರ್ಥ್ಯವನ್ನೂ ಕಂಡ ಸಕಲರೂ ಆತನು ಮಹಾವೀರನೆಂಬುದು ನಿಶ್ಚಯ ಎಂದು ಹೊಗಳಿದರು.

ಹೀಗೆಯೇ ಬಾಲಕ ಮಹಾವೀರನು, ತನ್ನ ಬಾಲ್ಯದ ಆಟಪಾಟಗಳಿಂದಲೂ ಕ್ಷತ್ರಿಯ ಬಾಲಕರಿಗೆ ಸಾಮಾನ್ಯವಾದ ಅಶ್ವಾರೋಹಣಾದಿ ಕ್ರೀಡೆಗಳಿಂದಲೂ ಸರ್ವರಿಗೂ ಆನಂದದಾಯಕನಾಗಿ ಬೆಳೆದನು. ಹೀಗೆ ಆತನು ಎಂಟು ವರ್ಷಗಳ ವಯಸ್ಕನಾಗಲು, ಸಿದ್ಧಾರ್ಥರಾಜನು ಆತನಿಗೆ ವಿದ್ಯಾಭ್ಯಾಸ ಮಾಡಿಸಲೆಳಸಿ, ಒಂದು ಶುಭ ಮುಹೂರ್ತದಲ್ಲಿ ವಿಶೇಷ ಉತ್ಸವಾದಿಗಳನ್ನು ನಡೆಸಿ, ಗುರುಗಳನ್ನು ಆಹ್ವಾನಿಸಿ, ಬಾಲಕನನ್ನು ಅವರ ವಶಕ್ಕೆ ಬಿಟ್ಟನು. ಉಪಾಧ್ಯಾಯನು ಆತನಿಗೆ ನೆಪಮಾತ್ರಕ್ಕೆ ಅಕ್ಷರಾಭ್ಯಾಸ ಮಾಡಿಸಿ, ಪ್ರಾರಂಭದ ಕೆಲ ಪಾಠಗಳನ್ನು ಹೇಳಿಕೊಟ್ಟುದಷ್ಟೆ! ಒಡನೆ ವರ್ಧಮಾನನು ಆ ವರ್ಣಮಾಲೆಯೆಲ್ಲವನ್ನೂ ಬರೆದು ಒಪ್ಪಿಸಿದನು. ಗುರುವು ವ್ಯಾಕರಣ ಪಾಠವನ್ನು ಬೋಧಿಸಲಾರಂಭಿಸಲು, ಬಾಲಕನು ಆ ಮಹಾ ವ್ಯಾಕರಣ ಗ್ರಂಥದ ಪ್ರೌಢಪಾಠಗಳನ್ನೆಲ್ಲಾ ಬಾಯಿಪಾಠವಾಗಿ ಗುರುವಿಗೆ ಹೇಳಿ ಒಪ್ಪಿಸಿಬಿಟ್ಟನು. ಆ ಬಾಲಕನಿಗೆ ಬೋಧಿಸದೆಯೇ ಲಭ್ಯವಾಗಿದ್ದ ಈ ಅಗಾಧ ವಿದ್ವತ್ತೆಯನ್ನೂ, ಈ ಮೇಧಾಶಕ್ತಿಯನ್ನೂ ಕಂಡು ಗುರುವೂ ಮತ್ತು ಇತರರೂ ಪರಮಾಶ್ಚರ್ಯಪಟ್ಟರು.



## ಅಧ್ಯಾಯ ೪. 'ಸನ್ಯಾಸಗ್ರಹಣ—ದೀಕ್ಷಾಕಲ್ಯಾಣ'

ಸ್ವಾಭಾವಿಕವಾಗಿಯೇ ಮಹಾ ಮತಿಯಾಗಿ, ಜನ್ಮಿಸುವಾಗಲೇ-ಮಾತ್ರವಲ್ಲ, ಗರ್ಭದಲ್ಲಿದ್ದಾಗಲೇ ಮತಿಜ್ಞಾನವೆಂದರೆ ಬೌದ್ಧಿಕಜ್ಞಾನ, ಶ್ರುತಿಜ್ಞಾನವೆಂದರೆ ಶಾಸ್ತ್ರ ಸಂಬಂಧ ಜ್ಞಾನ, ಅವಧಿ ಜ್ಞಾನವೆಂದರೆ ಪ್ರತ್ಯಕ್ಷ

ನೋಟಕ್ಕೆ ದೂರವಾಗಿದ್ದು ಪರೋಕ್ಷವಾಗಿ ನಡೆಯುತ್ತಿರುವ ಕಾರ್ಯಗಳ ವಿಚಾರವನ್ನೂ ತಿಳಿಯಲು ಶಕ್ತವಾದ ಅಗಾಧ ಪ್ರಜ್ಞೆ, ಇವುಗಳನ್ನು ಪಡೆದಿದ್ದ ಸರ್ವಜ್ಞ ತೀರ್ಥಂಕರನೇ ಆದ ವರ್ಧಮಾನ ಬಾಲಕನು ಇನ್ನು ಮಾನವ ಗುರುವಿನಲ್ಲಿ ಕಲಿಯಬೇಕಾದ ವಿದ್ಯವೇನಿದ್ದಿತು? ಅದುದರಿಂದಲೇ ಇರಬಹುದು. ಈತನ ಜನನ ಬಾಲ್ಯಕ್ರೀಡೆ ಮುಂತಾದುವುಗಳ ವಿಚಾರದಲ್ಲಿ ವಿಶೇಷವಾದ ವರ್ಣನೆಗಳನ್ನು ಕೊಡುವ ಕಲ್ಪಸೂತ್ರ ಗ್ರಂಥವು, ಆತನ ವಿದ್ಯಾಭ್ಯಾಸ, ಗುರುಕುಲವಾಸ ಮುಂತಾದವುಗಳ ವಿಚಾರದಲ್ಲಿ ಒಂದು ಮಾತನ್ನೂ ಹೇಳುತ್ತಿಲ್ಲ. ಬಾಲ್ಯವಯಸ್ಸನ್ನು ಕ್ಷತ್ರಿಯ ಬಾಲಕರಿಗೆ ಸರ್ವಸಾಧಾರಣವಾದ ವೀರ ವಿಹಾರಗಳಲ್ಲಿ ಕಳೆದು, ವರ್ಧಮಾನನು ಪ್ರಾಯಸಮರ್ಥನಾದನು.

ಪ್ರಾಯಸಮರ್ಥನಾದ ತನ್ನ ಮಗನಿಗೆ ಇನ್ನು ವಿವಾಹಮಾಡಿ, ಚಿಕ್ಕ ವಯಸ್ಸಿನ ದಂಪತಿಗಳು ಪರಸ್ಪರ ಪ್ರೇಮಬದ್ಧರಾಗಿ ಲೋಕಯಾತ್ರೆ ಸಾಗಿಸುವುದನ್ನು ಕಂಡು ಧನ್ಯರಾಗಬೇಕೆಂದು ಸಿದ್ಧಾರ್ಥನೂ ತ್ರಿಶಲಾದೇವಿಯೂ ಹಾರೈಸಿಕೊಂಡಿದ್ದರು. ಆದಕಾರಣ ಸಿದ್ಧಾರ್ಥರಾಜನು ಆತನಿಗೆ ಅನುರೂಪಳಾದ ಕನ್ಯೆಯನ್ನು ಹುಡುಕಿ ಗೊತ್ತುಮಾಡಿಕೊಂಡು ಬನ್ನಿರೆಂದು ತನ್ನ ಆಪ್ತಮಂತ್ರಿಗಳನ್ನು ದೇಶದೇಶಗಳಿಗೆ ಕಳುಹಿಸಿದ್ದನು. ಆದರೆ ವರ್ಧಮಾನನು ವಿವಾಹಕ್ಕೆ ವಿರೋಧಿಯಾಗಿದ್ದನು. ಆತನಿಗೆ ಲೋಕದ ಪ್ರಜೆಗಳು ಸಂಸಾರಾಂಧಕೂಪ ಮಗ್ನರಾಗಿ ಪಡುತ್ತಿದ್ದ ಅಗಾಧ ಹಿಂಸೆಗಳು ಕಣ್ಣಿಗೆ ಕಟ್ಟಿದಂತಿದ್ದು, ಬಹು ಮರುಕವನ್ನುಂಟುಮಾಡಿದ್ದುವು. ಕಾಮಕ್ರೋಧ ಲೋಭಮೋಹಗಳ ಬಲೆಗೆ ಸಿಕ್ಕಿ ಅವರು ಪಡುತ್ತಿದ್ದ ಅಗಾಧ ವ್ಯಥೆಯು ಆತನ ಹೃದಯವನ್ನು ಕರಗಿಸಿ ನೀರುಮಾಡಿದ್ದಿತು. ಆತನು—'ಅಕ್ಕಟಾ, ಜೀವನು ಈ ಸಂಸಾರದ ಬಂಧಕವನ್ನು ತೀರಿಸಿಕೊಂಡು ಶಾಶ್ವತ ಶಾಂತಿದಾಯಕ ಮುಕ್ತಿಸ್ಥಾನವನ್ನು ಗಳಿಸಿಕೊಳ್ಳುವ ಮಾರ್ಗ ತಿಳಿಯದೆ, ಪುನಃ ಪುನಃ ಕೆಸರಿನಿಂದ ಕೆಸರನ್ನು ತೊಳೆದಂತೆ ಈ ದುಃಖ ರಾಶಿಯಲ್ಲೇ ಬಿದ್ದು ತೊಳಲುತ್ತಿರುವನಲ್ಲ! ಈ ಅಜ್ಞಾನಕ್ಕೆ ಮದ್ದುಂಟೆ? ಅಜ್ಞಾನಿಗಳು ತಮ್ಮ ಮಾರ್ಗವಾವುದೆಂದು ತಿಳಿದುಕೊಳ್ಳಲಾರದೆ, ಹೀಗೆ ಈ ದುಃಖಸಂಕಟಗಳಿಗೆ ಈಡಾಗುತ್ತಿದ್ದಾರೆ, ಅದನ್ನು

ನೋಡಿಕೊಂಡು, ನಾನು ಹೇಗೆ ಸುಮ್ಮನಿರಲಿ! ಲೋಕದಲ್ಲಿ ಹಿಂಸಾ ಕಾರ್ಯವಾದರೋ ಮಿತಿಮೀರಿ ಬೆಳೆದು ಹೋಗಿದೆ. ಪ್ರಾಣಿಗಳು, ತಮ್ಮ ರಕ್ಷಣೆಯನ್ನು ಕುರಿತು ಗಮನಿಸಬೇಕಾದ ಮಾನವನ ಕೈಯಲ್ಲೇ ಸಿಕ್ಕು ನರಕಯಾತನೆಯನ್ನನುಭವಿಸಿ ಸಹಸ್ರ ಸಹಸ್ರ ಸಂಖ್ಯೆಯಿಂದ ಅಸುವನ್ನು ನೀಗುತ್ತಿವೆ! ಅದಂತಿರಲಿ. ' ಆಕ್ಕಟಾ, ಧರ್ಮೋದ್ಧಾರಕ್ಕಾಗಿಯೂ, ಪ್ರಾಣಿಹಿಂಸೆ ಮಾಡಬೇಕೆಂದು ದೀಕ್ಷಾಧರರಾದ ಜನಗಳ ಅಜ್ಞಾನಕ್ಕೆ ಏನು ಹೇಳಬೇಕು? ಇಲ್ಲ ಇಲ್ಲ—ಇದು ತಪ್ಪೆಂದು ತಿಳಿದಿರುವಾಗ್ಗೆ ನಾನು ಇನ್ನು ಸುಮ್ಮನಿರಲಾಗದು. ನನ್ನ ಈ ಸಮಸ್ತ ಸುಖಸಂಪತ್ತುಗಳನ್ನೂ ರಾಜತ್ವವನ್ನೂ ರಾಜ್ಯವನ್ನೂ ತ್ಯಜಿಸಿ ಹೋಗಿ ಲೋಕಕ್ಕೆ ಹಿತಬೋಧನೆ ಮಾಡಿ ಯಥಾನುಶಕ್ತಿ ಉದ್ಧಾರಮಾಡಬೇಕು ' ಎಂದು ಮುಂತಾಗಿ ಸದಾ ಯೋಚಿಸುತ್ತಿದ್ದನು. ಪ್ರಪಂಚದಲ್ಲಿ ವಿಶೇಷವಾಗಿದ್ದ ದುಃಖ ಕಷ್ಟಸಂಕಟ ಗಳನ್ನು ಹೋಗಲಾಡಿಸಿ ಸುಖ ಶಾಂತಿಗಳನ್ನು ಸ್ಥಾಪಿಸಬೇಕೆಂಬ ಮನೋ ಭಾವದಿಂದ ಇದ್ದ ಅತನಿಗೆ ಮೇಲೆಮೇಲೆ ಆ ಸಂಬಂಧ ಯೋಚನೆಯೇ ವಿಶೇಷವಾಗಿ ಬರತೊಡಗಿತು. ರಾಜಪುತ್ರನಾದ ತನ್ನ ಅಧಿಕಾರ ಪದವಿ ಗೌರವಗಳಿಗೆ ತಕ್ಕಂತೆ, ವಸ್ತ್ರಾಭರಣಗಳ ಧಾರಣೆಯ ವಿಷಯದಲ್ಲಾಗಲೀ, ಇತರ ರಾಜಪುತ್ರರ ಸ್ನೇಹ ಸರಸಸಲ್ಲಾಪಗಳಲ್ಲಾಗಲೀ ಮೃಗಯಾ ವಿನೋ ದವೇ ಮುಂತಾದ ಆಟಪಾಟಗಳಲ್ಲಾಗಲೀ ಅತನಿಗೆ ಮನಸ್ಸೇ ಉಂಟಾಗುತ್ತಿರ ಲಿಲ್ಲ. ಲೋಕದಲ್ಲಿ ಯೌವನಶಾಲಿಗಳಾದ ರಾಜಪುತ್ರರೂ ಶ್ರೀಮಂತರೂ ಸ್ವಾಭಾವಿಕವಾಗಿಯೇ ಮಗ್ನರಾಗಿರುವ ಇಂದ್ರಿಯ ಲೋಲುಪತೆಯ ವಿಚಾರ ದಲ್ಲಿ ಸಂಪೂರ್ಣ ಉದಾಶೀನಭಾವದಿಂದ ಇದ್ದುಬಿಟ್ಟನು. ಸಿದ್ಧಾರ್ಥರಾಜನು, ತನ್ನ ಮಗನು ಹೀಗೆ ನಿರ್ವಿಣ್ಣನಂತೆ ಲೌಕಿಕ ವಿಚಾರಗಳನ್ನು ಕುರಿತು ಮೂಕಭಾವವನ್ನು ವಹಿಸಿದುದನ್ನು ಕಂಡು ಗಾಬರಿಯಾಗಿ, ಇವನಿಗೆ ಸೌಂದರ್ಯಶಾಲಿನಿಯಾದ ಕನ್ಯಾಮಣಿಯನ್ನು ತಂದು ವಿವಾಹಮಾಡಿ, ಈತನ ಬುದ್ಧಿಯು ಪ್ರಾಪಂಚಿಕ ಮಾರ್ಗದಲ್ಲಿ ಪ್ರವಹಿಸುವಂತೆ ಮಾಡಬೇಕು. ಪುರುಷನಲ್ಲಿ ಪ್ರಾಪಂಚಿಕ ವಿಚಾರದಲ್ಲಿ ಚಟುವಟಿಕೆಗಳನ್ನುಂಟುಮಾಡು ವಂತಹ ಕ್ರಿಯಾಶಕ್ತಿಯು ಪ್ರಕೃತಿ ಸ್ವರೂಪಿಣಿಯಾದ ಸ್ತ್ರೀಯಲ್ಲೇ ನೆಲೆ ಸಿದೆ. ಪ್ರಾಪಂಚಿಕವಾಗಿ ಉದಾಶೀನ ಭಾವದಿಂದಿರುವ ಇವನ ಮನಸ್ಸನ್ನು

ತಿರುಗಿಸಿ ಇವನನ್ನು ಮಾರ್ಗಕ್ಕೆ ಹಚ್ಚಲು ಇವನಿಗೆ ವಿವಾಹ ಮಾಡುವುದೇ ಸರ್ವೋತ್ತಮವಾದ ಮಾರ್ಗವು ಎಂದು ನಿರ್ಧರಿಸಿದನು.

ಸಿದ್ಧಾರ್ಥರಾಜನು, ವಿವಾಹ ವಿಚಾರವನ್ನು ಕುರಿತು ತನ್ನ ಮಗನೊಂದಿಗೆ ತಾನೇ ಪ್ರಸ್ತಾಪಿಸಲು ಸಂಕೋಚಪಟ್ಟು ಮಂತ್ರಿಗಳ ಮೂಲಕ ಹೇಳಿಸಿದನು. ಮಹಾವೀರನು ತನ್ನ ಅಭಿಪ್ರಾಯವನ್ನೂ, ವಿವಾಹ ಮೂಲಕವಾಗಿ ಲೋಕಕ್ಕೆ ಬದ್ಧನಾಗಿ ತನ್ನ ಮನಸ್ಸಿನಲ್ಲಿರುವ ಇತರ ಕಾರ್ಯಗಳನ್ನು ನೆರವೇರಿಸಲಿಕ್ಕಿರುವ ಸುಸಂಧಿಯನ್ನು ಕಳೆದುಕೊಳ್ಳಲು ತನಗೆ ಇಚ್ಛೆಯಿಲ್ಲವೆಂಬ ಅಂಶವನ್ನೂ ಸ್ಪಷ್ಟವಾಗಿ ತಿಳಿಸಿಬಿಟ್ಟನು. ಆ ಮಾತನ್ನು ಕೇಳಿ. ಸಿದ್ಧಾರ್ಥನ ಚಿಂತೆಯು ವಿಶೇಷವಾಯಿತು. ತರುವಾಯ, ವರ್ಧಮಾನನ ಸ್ನೇಹಿತರನ್ನು ಪ್ರೇರಿಸಿ ರಾಜನು ಅವರ ಮೂಲಕ ಹೇಳಿಸಿದನು. ಅವರೂ ಅನೇಕ ವಿಧಗಳಿಂದ ಬೋಧಿಸಿದರು. ವರ್ಧಮಾನನು ಆಗಲೂ ತನ್ನ ಉದ್ದೇಶವನ್ನು ತಿಳಿಸದೆ ಇರಲಿಲ್ಲ. ತನ್ನ ಮಾತಾಪಿತೃಗಳ ಜೀವಿತಕಾಲವು ಮುಗಿದೊಡನೆಯೇ ತಾನು ಹೇಳಿದಂತೆ ಸನ್ಯಾಸ ಸ್ವೀಕಾರಮಾಡಿ, ಗೃಹತ್ಯಾಗಮಾಡಿ ಲೋಕಸೇವೆಗಾಗಿ ಹೊರಡತಕ್ಕವನೇ ಎಂಬ ನಿಶ್ಚಯವನ್ನು ಅವರಿಗೂ ತಿಳಿಸಿದನು. ಆದರೆ ಅವರು—'ಮಿತ್ರವರಾ! ನಿನ್ನ ಪ್ರತಿಜ್ಞೆಯಂತೆ, ನಿನ್ನ ಮಾತಾಪಿತೃಗಳು ಜೀವಂತರಾಗಿರುವವರೆಗಾದರೂ ನೀನು ಮನೆಯಲ್ಲಿರಬೇಕಲ್ಲವೆ? ಅವರೆಗೆ ಸಂಸಾರಿಯಾಗಿರಲು ಬಾಧಕವೇನು? ನಿನ್ನ ತಾಯಿಯ ಮನಸ್ಸಿಗೆ ವ್ಯಥೆಯನ್ನುಂಟು ಮಾಡಬಾರದೆಂಬುದು ನಿನ್ನ ನಿಶ್ಚಯವಲ್ಲವೆ! ಅವರೆಗೆ ಅವಿವಾಹಿತನಾಗಿ ಏಕಾಂಗಿಯಾಗಿ ಇರುವ ನಿನ್ನನ್ನು ನೋಡಿ ಆಕೆಯು ವ್ಯಥೆಪಡುವಳಲ್ಲ. ನಿನ್ನ ಜನ್ಮಕ್ಕೆ ಕಾರಣಳಾದ ಆಕೆಯನ್ನು ದುಃಖಕ್ಕೆ ಈಡುಮಾಡುವುದು ನಿನಗೆ ಧರ್ಮವೇ! ವಿವಾಹದಿಂದ ಅಜ್ಞರು ಸಂಸಾರ ಬಂಧಕಕ್ಕೆ ಸಿಕ್ಕು ತೊಳಲಬಹುದಾದರೂ, ಮಹಾಮತಿಯಾದ ನಿನಗೂ ಅದರಿಂದ ಕಷ್ಟಕಾರ್ಯಗಳು ಉಂಟಾಗುವುವೆಂದು ಏಕೆ ಗಾಬರಿಪಡಬೇಕು? ಕೂಡದು, ವರ್ಧಮಾನಾ, ಇನ್ನು ಹೆಚ್ಚುಕಾಲ ನಿನ್ನ ಮಾತಾಪಿತೃಗಳು ವ್ಯಥೆಪಡಲು ಅವಕಾಶ ಕೊಡಬೇಡ. ವಿವಾಹಕ್ಕೆ ಸಮ್ಮತಿಸಿ, ನಿನ್ನ ತಾಯಿಯ ಮನಸ್ಸಿಗೆ ಆನಂದವನ್ನೂ,

ತಂದೆಯ ಚಿತ್ತಕ್ಕೆ ಶಾಂತತೆಯನ್ನೂ ಉಂಟುಮಾಡಲು ಸಮ್ಮತಿಸು" ಎಂದು ಹಲವು ಬಗೆಯಿಂದ ಹೇಳಿದರು.

ಈ ಸಂದರ್ಭದಲ್ಲಿ ಶ್ವೇತಾಂಬರ-ದಿಗಂಬರ ಜೈನಪಂಗಡಗಳೆರಡಕ್ಕೂ ಪರಸ್ಪರ ವಿರೋಧಾಭಿಪ್ರಾಯವಿದೆ. ಮಹಾವೀರನು ವಿವಾಹವಾಗಿ ಪತ್ನಿಯೊಡನೆ ಸಂಸಾರ ಮಾಡಿಕೊಂಡಿದ್ದು, ಒಬ್ಬ ಪುತ್ರಿಯನ್ನು ಪಡೆದು, ತನ್ನ ತಾಯಿತಂದೆಗಳು ಮೃತರಾದ ತರುವಾಯ ಸಕಲವನ್ನೂ ತ್ಯಜಿಸಿ ಸನ್ಯಾಸ ಸ್ವೀಕಾರಮಾಡಿದನೆಂದು ಶ್ವೇತಾಂಬರ ಪಂಗಡದ ಗ್ರಂಥಗಳು ಹೇಳುತ್ತವೆ. ದಿಗಂಬರರಾದರೋ, ಮಹಾ ವೀರಸ್ವಾಮಿಯು ವಿವಾಹವೈಭವದ ಕಡೆಗೆ ತಿರುಗಿಯೇ ನೋಡದೆ, ಮಾತಾಪಿತೃಗಳ ಜೀವಿತಕಾಲದಲ್ಲೇ ಅವರ ಅಪ್ಪಣೆ ಪಡೆದು ಸನ್ಯಾಸ ಸ್ವೀಕಾರ ಮಾಡಿದನೆಂದು ಸ್ಥಾಪಿಸುತ್ತಾರೆ. * ಶ್ವೇತಾಂಬರ ಪಂಗಡದ ಅಭಿಪ್ರಾಯಾನುಸಾರವಾಗಿ, ಮಹಾವೀರನು ಕೌಂಡಿನ್ಯ ಗೋತ್ರದ ಸಮರವೀರರಾಜನ ಮಗಳು ಯಶೋಧರಾ ಎಂಬ ಕನ್ಯೆಯನ್ನು ವಿವಾಹವಾಗಿ ಆಕೆಯೊಂದಿಗೆ ವಿಹಾರಮಾಡಿಕೊಂಡು ರಾಜಭವನದಲ್ಲೇ ವಾಸಿಸಿದನೆಂದೂ, ಆ ದಂಪತಿಗಳ ಉದರದಲ್ಲಿ, ಅನುಜಾ ಅಥವ ಪ್ರಿಯದರ್ಶನಾ ಎಂಬ ಪುತ್ರಿಯು ಜನಿಸಿದಳೆಂದೂ, ಆಕೆಯನ್ನು ಜಮಾಲಿ ಎಂಬೊಬ್ಬ ಶ್ರೀಮಂತನು ವಿವಾಹವಾದನೆಂದೂ ಅವರಿಗೆ ಶಾವತಿ ಮತ್ತು ಯಶೋವತಿ ಎಂಬೆರಡು ಹೆಸರುಗಳಿಂದಲೂ ಕರೆಯಿಸಿಕೊಳ್ಳುತ್ತಿದ್ದ ಮಗಳೊಬ್ಬಳಿದ್ದಳೆಂದೂ ಹೀಗೆ ಮಹಾವೀರನ ದೌಹಿತ್ರ ಸಂತಾನವು ಬೆಳೆಯಿತೆಂದೂ ಹೇಳಲ್ಪಟ್ಟಿದೆ.

ತರುವಾಯ ಮಹಾವೀರನ ಪ್ರಾಪಂಚಿಕ ಜೀವಿತದಲ್ಲಿ ಯಾವ ಹೆಚ್ಚು ಕಾರ್ಯಗಳು ನಡೆದಂತೆಯೂ ಜೈನ ಗ್ರಂಥಗಳಿಂದ ವ್ಯಕ್ತವಾಗುವುದಿಲ್ಲ. ಆತನು ಶ್ವೇತಾಂಬರ ಪಂಗಡದ ಹೇಳಿಕೆಯಂತೆ ಪತ್ನಿಯೊಂದಿಗೆ ರಾಜಗೃಹದಲ್ಲಿದ್ದಿರಬಹುದು. ಅಥವ ದಿಗಂಬರ ಪಂಗಡದ ಅಭಿಪ್ರಾಯದಂತೆ ಇಪ್ಪತ್ತೆಂಟು ಮೂವತ್ತು ವಯಸ್ಸಿನವರೆಗೆ ಅವಿವಾಹಿತನಾಗಿ ಅರಮನೆಯಲ್ಲೇ

* The Heart of Jainism by Mrs. Sinclair Stevenson. PP. 29.

ತಿರುಗಿಸಿ ಇವನನ್ನು ಮಾರ್ಗಕ್ಕೆ ಹಚ್ಚಲು ಇವನಿಗೆ ವಿವಾಹ ಮಾಡುವುದೇ ಸರ್ವೋತ್ತಮವಾದ ಮಾರ್ಗವು ಎಂದು ನಿರ್ಧರಿಸಿದನು.

ಸಿದ್ಧಾರ್ಥರಾಜನು, ವಿವಾಹ ವಿಚಾರವನ್ನು ಕುರಿತು ತನ್ನ ಮಗನೊಂದಿಗೆ ತಾನೇ ಪ್ರಸ್ತಾಪಿಸಲು ಸಂಕೋಚಪಟ್ಟು ಮಂತ್ರಿಗಳ ಮೂಲಕ ಹೇಳಿಸಿದನು. ಮಹಾವೀರನು ತನ್ನ ಅಭಿಪ್ರಾಯವನ್ನೂ, ವಿವಾಹ ಮೂಲಕವಾಗಿ ಲೋಕಕ್ಕೆ ಬದ್ಧನಾಗಿ ತನ್ನ ಮನಸ್ಸಿನಲ್ಲಿರುವ ಇತರ ಕಾರ್ಯಗಳನ್ನು ನೆರವೇರಿಸಲಿಕ್ಕಿರುವ ಸುಸಂಧಿಯನ್ನು ಕಳೆದುಕೊಳ್ಳಲು ತನಗೆ ಇಷ್ಟವಿಲ್ಲವೆಂಬ ಅಂಶವನ್ನೂ ಸ್ಪಷ್ಟವಾಗಿ ತಿಳಿಸಿಬಿಟ್ಟನು. ಆ ಮಾತನ್ನು ಕೇಳಿ ಸಿದ್ಧಾರ್ಥನ ಚಿಂತೆಯು ವಿಶೇಷವಾಯಿತು. ತರುವಾಯ, ವರ್ಧಮಾನನ ಸ್ನೇಹಿತರನ್ನು ಪ್ರೇರಿಸಿ ರಾಜನು ಅವರ ಮೂಲಕ ಹೇಳಿಸಿದನು. ಅವರೂ ಅನೇಕ ವಿಧಗಳಿಂದ ಬೋಧಿಸಿದರು. ವರ್ಧಮಾನನು ಆಗಲೂ ತನ್ನ ಉದ್ದೇಶವನ್ನು ತಿಳಿಸದೆ ಇರಲಿಲ್ಲ. ತನ್ನ ಮಾತಾಪಿತೃಗಳ ಜೀವಿತಕಾಲವು ಮುಗಿದೊಡನೆಯೇ ತಾನು ಹೇಳಿದಂತೆ ಸನ್ಯಾಸ ಸ್ವೀಕಾರಮಾಡಿ, ಗೃಹತ್ಯಾಗಮಾಡಿ ಲೋಕಸೇವೆಗಾಗಿ ಹೊರಡತಕ್ಕವನೇ ಎಂಬ ನಿಶ್ಚಯವನ್ನು ಅವರಿಗೂ ತಿಳಿಸಿದನು. ಆದರೆ ಅವರು—'ಮಿತ್ರವರಾ! ನಿನ್ನ ಪ್ರತಿಜ್ಞೆಯಂತೆ, ನಿನ್ನ ಮಾತಾಪಿತೃಗಳು ಜೀವಂತರಾಗಿರುವವರೆಗಾದರೂ ನೀನು ಮನೆಯಲ್ಲಿರಬೇಕಲ್ಲವೆ? ಅವರೆಗೆ ಸಂಸಾರಿಯಾಗಿರಲು ಬಾಧಕವೇನು? ನಿನ್ನ ತಾಯಿಯ ಮನಸ್ಸಿಗೆ ವ್ಯಥೆಯನ್ನುಂಟು ಮಾಡಬಾರದೆಂಬುದು ನಿನ್ನ ನಿಶ್ಚಯವಲ್ಲವೆ! ಅವರೆಗೆ ಅವಿವಾಹಿತನಾಗಿ ಏಕಾಂಗಿಯಾಗಿ ಇರುವ ನಿನ್ನನ್ನು ನೋಡಿ ಆಕೆಯು ವ್ಯಥೆಪಡುವಳಲ್ಲ. ನಿನ್ನ ಜನ್ಮಕ್ಕೆ ಕಾರಣಳಾದ ಆಕೆಯನ್ನು ದುಃಖಕ್ಕೆ ಈಡುಮಾಡುವುದು ನಿನಗೆ ಧರ್ಮವೇ! ವಿವಾಹದಿಂದ ಅಜ್ಞರು ಸಂಸಾರ ಬಂಧಕಕ್ಕೆ ಸಿಕ್ಕು ತೊಳಲಬಹುದಾದರೂ, ಮಹಾಮತಿಯಾದ ನಿನಗೂ ಅದರಿಂದ ಕಷ್ಟಕಾರ್ಯಗಳು ಉಂಟಾಗುವುವೆಂದು ಏಕೆ ಗಾಬರಿಪಡಬೇಕು? ಕೂಡದು, ವರ್ಧಮಾನಾ, ಇನ್ನು ಹೆಚ್ಚುಕಾಲ ನಿನ್ನ ಮಾತಾಪಿತೃಗಳು ವ್ಯಥೆಪಡಲು ಅವಕಾಶ ಕೊಡಬೇಡ. ವಿವಾಹಕ್ಕೆ ಸಮ್ಮತಿಸಿ, ನಿನ್ನ ತಾಯಿಯ ಮನಸ್ಸಿಗೆ ಆನಂದವನ್ನೂ,

ತಂದೆಯ ಚಿತ್ತಕ್ಕೆ ಶಾಂತತೆಯನ್ನೂ ಉಂಟುಮಾಡಲು ಸಮ್ಮತಿಸು" ಎಂದು ಹಲವು ಬಗೆಯಿಂದ ಹೇಳಿದರು.

ಈ ಸಂದರ್ಭದಲ್ಲಿ ಶ್ವೇತಾಂಬರ-ದಿಗಂಬರ ಜೈನಸಂಗಡಗಳೆರಡಕ್ಕೂ ಪರಸ್ಪರ ವಿರೋಧಾಭಿಪ್ರಾಯವಿದೆ. ಮಹಾವೀರನು ವಿವಾಹವಾಗಿ ಪತ್ನಿ ಯೊಡನೆ ಸಂಸಾರ ಮಾಡಿಕೊಂಡಿದ್ದು, ಒಬ್ಬ ಪುತ್ರಿಯನ್ನು ಪಡೆದು, ತನ್ನ ತಾಯಿತಂದೆಗಳು ವೃತರಾದ ತರುವಾಯ ಸಕಲವನ್ನೂ ತ್ಯಜಿಸಿ ಸನ್ಯಾಸ ಸ್ವೀಕಾರಮಾಡಿದನೆಂದು ಶ್ವೇತಾಂಬರ ಸಂಗಡದ ಗ್ರಂಥಗಳು ಹೇಳು ತ್ತವೆ. ದಿಗಂಬರರಾದರೋ, ಮಹಾವೀರಸ್ವಾಮಿಯು ವಿವಾಹವೈಭವದ ಕಡೆಗೆ ತಿರುಗಿಯೇ ನೋಡದೆ, ಮಾತಾಪಿತೃಗಳ ಜೀವಿತಕಾಲದಲ್ಲೇ ಅವರ ಅಪ್ಪಣೆ ಪಡೆದು ಸನ್ಯಾಸ ಸ್ವೀಕಾರ ಮಾಡಿದನೆಂದು ಸ್ಥಾಪಿಸುತ್ತಾರೆ. * ಶ್ವೇತಾಂಬರ ಸಂಗಡದ ಅಭಿಪ್ರಾಯಾನುಸಾರವಾಗಿ, ಮಹಾವೀರನು ಕೌಂಡಿನ್ಯ ಗೋತ್ರದ ಸಮರವೀರರಾಜನ ಮಗಳು ಯಶೋಧರಾ ಎಂಬ ಕನ್ಯೆಯನ್ನು ವಿವಾಹವಾಗಿ ಆಕೆಯೊಂದಿಗೆ ವಿಹಾರಮಾಡಿಕೊಂಡು ರಾಜ ಭವನದಲ್ಲೇ ವಾಸಿಸಿದನೆಂದೂ, ಆ ದಂಪತಿಗಳ ಉದರದಲ್ಲಿ, ಅನುಜಾ ಅಥವ ಪ್ರಿಯದರ್ಶನಾ ಎಂಬ ಪುತ್ರಿಯು ಜನಿಸಿದಳೆಂದೂ, ಆಕೆಯನ್ನು ಜಮಾಲಿ ಎಂಬೊಬ್ಬ ಶ್ರೀಮಂತನು ವಿವಾಹವಾದನೆಂದೂ ಅವರಿಗೆ ಶಾವತಿ ಮತ್ತು ಯಶೋವತಿ ಎಂಬೆರಡು ಹೆಸರುಗಳಿಂದಲೂ ಕರೆಯಿಸಿಕೊಳ್ಳು ತ್ತಿದ್ದ ಮಗಳೊಬ್ಬಳಿದ್ದಳೆಂದೂ ಹೀಗೆ ಮಹಾವೀರನ ದೌಹಿತ್ರ ಸಂತಾ ನವು ಬೆಳೆಯಿತೆಂದೂ ಹೇಳಲ್ಪಟ್ಟಿದೆ.

ತರುವಾಯ ಮಹಾವೀರನ ಪ್ರಾಪಂಚಿಕ ಜೀವಿತದಲ್ಲಿ ಯಾವ ಹೆಚ್ಚು ಕಾರ್ಯಗಳು ನಡೆದಂತೆಯೂ ಜೈನ ಗ್ರಂಥಗಳಿಂದ ವ್ಯಕ್ತವಾಗುವುದಿಲ್ಲ. ಆತನು ಶ್ವೇತಾಂಬರ ಸಂಗಡದ ಹೇಳಿಕೆಯಂತೆ ಪತ್ನಿಯೊಂದಿಗೆ ರಾಜಗೃಹ ದಲ್ಲಿದ್ದಿರಬಹುದು. ಅಥವ ದಿಗಂಬರ ಸಂಗಡದ ಅಭಿಪ್ರಾಯದಂತೆ ಇಪ್ಪ ತ್ತೆಂಟು ಮೂವತ್ತು ವಯಸ್ಸಿನವರೆಗೆ ಅವಿವಾಹಿತನಾಗಿ ಅಗಮನೆಯಲ್ಲೇ

* The Heart of Jainism by Mrs. Sinclair Stevenson. PP. 29.

ವಾಸಮಾಡಿಕೊಂಡಿದ್ದಿರಬಹುದು. ಈ ವಿಚಾರವು ಶ್ವೇತಾಂಬರ ಪಂಗಡ ದವರ ಭಕ್ತಿ, ಶ್ರದ್ಧಾ ವಿಶ್ವಾಸಗಳನ್ನು ಕುರಿತುದಾಗಿದೆ.

ಮಹಾವೀರನಿಗೆ ಹೀಗೆ ಇಪ್ಪತ್ತೆಂಟು ವರ್ಷ ವಯಸ್ಸಾಗುವವರೆಗೂ ಆತನ ತಾಯಿತಂದೆಗಳು ಜೀವಿಸಿದ್ದರು. ತರುವಾಯ ಸ್ವಲ್ಪ ದಿನಗಳಲ್ಲಿ ಆತನ ತಾಯಿಯೂ, ಮುಂದೆ ಕೆಲವು ದಿನಗಳಲ್ಲೇ ಸಿದ್ಧಾರ್ಥನೂ ಮೃತ ರಾದರು. ಅವರು ಯಾವುದೊಂದು ರೋಗ ಬಾಧೆಯಿಂದಾಗಲೀ ಅಥವ ಮತ್ತಾವ ಕಾರಣದಿಂದಲಾಗಲೀ ಮೃತರಾದರೆಂದು ತಿಳಿಯುವುದಿಲ್ಲ. ಪುನ ರ್ಜನ್ಮವು ಈ ಜನ್ಮದ ಕರ್ಮಫಲವಾಗಿಯೇ ಪ್ರಾಪ್ತವಾಗುವುದೆಂದು ನಂ ಬಿದ್ದ ಆ ದಂಪತಿಗಳು, ನಿಷ್ಕ್ರಿಯರೂ ನಿರಾಹಾರಿಗಳೂ ಆಗಿ, ಪ್ರಾಯೋ ಪವೇಶವೆಂಬಂತಹ ನಿಯಮವನ್ನಾಚರಿಸಿ ತನ್ಮೂಲಕ ದೇಹತ್ಯಾಗ ಮಾಡಿದ ರೆಂದು ಹೇಳಲ್ಪಟ್ಟಿದೆ. ಅವರ ದೇಹಗಳಲ್ಲಿನ ರಕ್ತಮಾಂಸಗಳೆಲ್ಲವೂ ಶುಷ್ಕ ವಾಗಿ ಹೋಗುವವರೆಗೂ-ಅವರು ದರ್ಭೆಗಳನ್ನು ಹಾಸಿಕೊಂಡು ನಿರಶನ ರಾಗಿ ಮಲಗಿದ್ದು, ಹಾಗೆಯೇ ಪ್ರಾಣತ್ಯಾಗ ಮಾಡಿದರೆಂದು ಆಚರಾಂಗ ಸೂತ್ರವೆಂಬ ಜೈನ ಗ್ರಂಥವು ಹೇಳುತ್ತದೆ. ಹೀಗೆ ಮಾತಾಪಿತೃ ವಿಯೋಗವಾದ ತರುವಾಯ ತಾನಿನ್ನು ಸನ್ಯಾಸ ಸ್ವೀಕಾರಮಾಡಲು ನಿಷ್ಕಂಟಕವಾಯಿತೆಂದು ಭಾವಿಸಿ, ಗೃಹತ್ಯಾಗಮಾಡಿ ಹೊರಡಲು ತನ್ನ ಅಗ್ರಜನಾದ ನಂದಿವರ್ಧನನನ್ನು ಅಪ್ಪಣೆಯನ್ನು ಕೇಳಿದನಂತೆ! ಆದರೆ, ಪಿತೃ ಮರಣವಾದೊಡನೆಯೇ ತಮ್ಮನು ಗೃಹತ್ಯಾಗ ಮಾಡಿದನೆಂದರೆ, ಗೃಹ ಕೃತ್ಯದಲ್ಲೇನೋ ವಿರೋಧಭಾವ ಬಂದಿರಬೇಕೆಂದು ಲೋಕವು ತನ್ನ ವಿಚಾರದಲ್ಲಿ ಸಂದೇಹಗೊಂಡೀತಾದುದರಿಂದ ಇನ್ನು ಒಂದು ವರ್ಷ ಕಾಲ ವಾದರೂ ಮನೆಯಲ್ಲಿದ್ದು ತರುವಾಯ ನಿನ್ನಿಷ್ಟ ಬಂದಂತೆ ಮಾಡೆಂದು ಆತನು ಹೇಳಿದನು. ಅಂತೆಯೇ ಮಹಾವೀರನೂ ಒಂದು ವರ್ಷಕಾಲ ಮನೆಯಲ್ಲಿ ವಾಸಿಸಿದ್ದನು.

ಈ ಸಂದರ್ಭದಲ್ಲಿ ದಿಗಂಬರ ಪಂಗಡದವರ ಅಭಿಪ್ರಾಯವು ಬೇರೆ ಯಾಗಿದೆ. ಗೃಹತ್ಯಾಗಮಾಡಿ ಸನ್ಯಾಸ ಗ್ರಹಣಮಾಡಬೇಕೆಂದು ಅಪೇ ಕ್ಷಿಸಿದ ಮಹಾವೀರನು ತನ್ನ ತಂದೆತಾಯಿಗಳ ಅಪ್ಪಣೆಯನ್ನು ಕೇಳಿ. ಅವರು ಪ್ರಾರಂಭಕ್ಕೆ ಒಪ್ಪದೆ ಇದ್ದು ಕೊನೆಗೆ ಸಮ್ಮತಿಪಟ್ಟರೆಂದೂ, ಹೀಗೆ

ಮಾತಾಪಿತೃಗಳ ಸಮ್ಮತಿಯನ್ನು ಪಡೆದು ಮಹಾವೀರನು, ಅವರ ಜೀವಂತ ಕಾಲದಲ್ಲೇ ಸನ್ಯಾಸ ಸ್ವೀಕಾರಮಾಡಿದನೆಂದೂ ಹೇಳುತ್ತಾರೆ.

ಲೋಕಕ್ಕೆ ಧರ್ಮಮಾರ್ಗವನ್ನುಪದೇಶಿಸಿ, ಉಪಕಾರ ಮಾಡಬೇಕೆಂದು ಚಿರಾಕಾಂಕ್ಷೆಯನ್ನುಂಟಾಗಿದ್ದ ಮಹಾವೀರನು, ತರುವಾಯ ಹೆಚ್ಚು ಕಾಲ ಸಾವಕಾಶಮಾಡದೆ ತನ್ನ ಮೂವತ್ತನೆಯ ವಯಸ್ಸಿನಲ್ಲಿ ಒಂದು ದಿನ ತನ್ನ ಪೂರ್ವಭವದ ಸಂಸಾರ ವಿಚಾರವನ್ನೇ ಕುರಿತು ತೀವ್ರವಾದ ಯೋಚನಾಮಗ್ನನಾಗಿರುವಲ್ಲಿ ಲೌಕಾಂತಿಕರೆಂಬ ದೇವತೆಗಳು ಬಂದು:—'ಸ್ವಾಮಿ, ಇದು ತಮ್ಮ ದೀಕ್ಷಾಕಲ್ಯಾಣಕ್ಕೆ ಯೋಗ್ಯಕಾಲವಾಗಿದೆ. ಗರ್ಭದಲ್ಲೇ ಮತಿ ಶ್ರುತಿ ಅವಧಿ ಜ್ಞಾನಗಳಿಂದ ಕೂಡಿದ್ದ ಜ್ಞಾನಸಾಗರರಾದ ತಮಗೆ ಮತ್ತೊಬ್ಬರು ಮೋಕ್ಷಮಾರ್ಗವನ್ನು ಉಪದೇಶಿಸುವುದೇನಿದೆ? ತಾವೇ ತಪಸ್ಸಿನಿಂದ ಘಾತಿಕರ್ಮಗಳನ್ನೆಲ್ಲ ನಿವಾರಿಸಿ, ಕೇವಲ ಜ್ಞಾನವನ್ನು ಪಡೆದು, ಭವಭೀತರಾಗಿ ಸಂಕಟಪಡುತ್ತಿರುವ ಪ್ರಾಣಿವರ್ಗಕ್ಕೆ ಮುಕ್ತಿಮಾರ್ಗವನ್ನು ತೋರಿಸಿರಿ' ಎಂದು ಪ್ರಾರ್ಥಿಸಿದರಂತೆ! ಒಡನೆ ಮಹಾವೀರ ಸ್ವಾಮಿಯು, ರಾಜಗೃಹದಿಂದ ಹೊರಟು ಚಂದ್ರಪ್ರಭಾ ಎಂಬ ದಿವ್ಯಪಾಲಕಿಯಲ್ಲಿ ಕುಳಿತು, ಕ್ಷತ್ರಿಯಕುಂಡ ಗ್ರಾಮದ ಬಾಹ್ಯ ಪ್ರದೇಶದಲ್ಲಿದ್ದ ಸುಂದರವನ ಅಥವ ನಾಗಖಂಡವೆಂಬೊಂದು ಉಪವನಕ್ಕೆ ಪ್ರಯಾಣಮಾಡಿದನು. ಅಲ್ಲಿ ವನಮಧ್ಯದಲ್ಲಿದ್ದ ಒಂದು ಅಶೋಕವೃಕ್ಷದಡಿಯಲ್ಲಿ ಕುಳಿತು ಮಹಾವೀರಸ್ವಾಮಿಯು ತನ್ನದಾಗಿದ್ದ ಸಮಸ್ತ ವಸ್ತುಗಳನ್ನೂ ನೆರೆದಿದ್ದ ಸಮಸ್ತರಿಗೂ ದಾನವಾಗಿ ಕೊಟ್ಟುಬಿಟ್ಟನು. ತರುವಾಯ ಏಕವಸ್ತ್ರಧಾರಿಯಾಗಿ 'ನಮಃಸಿದ್ಧೇಭ್ಯಃ' ಎಂದುಚ್ಚರಿಸಿ ಪಂಚಮುಷ್ಟಿಗಳಿಂದ * ಕೇಶೋತ್ಪಾಟನ ಮಾಡಿಕೊಂಡು ತಪೋನಿರತನಾದನು

---

* ಕೇಶವಿಚ್ಛೇದನವು ಎಲ್ಲಾ ಧರ್ಮಗಳ ಸನ್ಯಾಸಿಗಳಲ್ಲೂ ಆಚರಣೆಯಲ್ಲಿರುವುದಾದರೂ ಒಂದೊಂದು ಕೇಶವನ್ನು ಬೇರೊಂದಿಗೆ ಕೀಳಿಸುವ ಜೈನ ಸಾಧುಗಳ ಈ ಪದ್ಧತಿಯು ಮಹಾವೀರಸ್ವಾಮಿಯ ಈ ಕೃತಿಯಿಂದ ಆರಂಭಿಸಿದ್ದಾಗಿದೆ. ದೇಹಕ್ಕೆ ಸಂಬಂಧಿಸಿದ ಕಷ್ಟ-ಸುಖ, ನೋವು-ಸಂತೋಷಗಳನ್ನು ಕುರಿತು ಗಮನವೇ ಇಲ್ಲದಂತಹ ಅಮನಸ್ಕಸ್ಥಿತಿಯಲ್ಲಿ ಸನ್ಯಾಸಿಯು ಮಗ್ನನಾಗಿರಬೇಕೆಂಬುದು ಇದರ ಆದಿತತ್ವವಾಗಿರಬಹುದು.

* ನಂತರ ಆರು ದಿನಗಳವರೆಗೆ ಕೇವಲ ಒಂದು ಹನಿ ನೀರು ಕೂಡ ತುಟಿಗೆ ಸೋಕದಂತೆ ನಿರಶನ-ಉಪೋಷ್ಯ ಮಾಡಿದನು. ಮಹಾವೀರ ಸ್ವಾಮಿಯು ಹೀಗೆ ಅಗಾಧ ತ್ಯಾಗಮಾಡಿ, ತನ್ನ ಮೈಮೇಲಿದ್ದ ಆಭರಣಗಳಲ್ಲಿ ಒಂದೊಂದನ್ನೂ ಕಿತ್ತು ಎಸೆಯುತ್ತಿರುವಲ್ಲಿ, ವೈಶ್ರವಣಾದಿ ದೇವತೆಗಳು ಭಯಭಕ್ತಿಯಿಂದ ಕಾದಿದ್ದು ಅವುಗಳನ್ನು ನೆಲದಮೇಲೆ ಬೀಳದಂತೆ ಸ್ವೀಕರಿಸುತ್ತಿದ್ದರಂತೆ! ಕೇಶಗಳನ್ನು ಬೇರುಗಳ ಸಮೇತ ಕಿತ್ತು ಎಸೆಯುತ್ತಿರುವಲ್ಲಿ, ಇಂದ್ರನು ಕಾದಿದ್ದು ಅವುಗಳನ್ನು ವಜ್ರಪಾತ್ರೆಯಲ್ಲಿ ಸ್ವೀಕಾರಮಾಡಿ, ಕ್ಷೀರಸಮುದ್ರಕ್ಕೆ ಒಗೆದನಂತೆ! ದೇವತೆಗಳು ಸ್ವಾಮಿಯ ದೀಕ್ಷಾ ಕಲ್ಯಾಣ ಅಥವ ಪರಿನಿಷ್ಕ್ರಮಣ ಕಲ್ಯಾಣವೆಂಬ ಈ ಉತ್ಸವವನ್ನು ತೀರಿಸಿಕೊಂಡು ಸ್ವಸ್ಥಾನಗಳಿಗೆ ತೆರಳಿದರು.



## ಅಧ್ಯಾಯ ೪. 'ಜ್ಞಾನಪ್ರಾಪ್ತಿ

ಅಭಿಮಾನವನ್ನು ಖಂಡಿಸಿ, ಅಹಂಕಾರವನ್ನು ಹುಟ್ಟಡಗಿಸಿ, ಆಶಾ ಮೋಹ ಕ್ರೋಧಗಳನ್ನು ಬೇರುಗಳೊಂದಿಗೆ ಕಿತ್ತೆಸೆದು, ತನ್ನ ಸಂಬಂಧವಾದ ಸಮಸ್ತ ಪ್ರಾಪಂಚಿಕ ವಸ್ತುಗಳನ್ನೂ ಪರಿತ್ಯಜಿಸಿ, ಮಹಾವೀರಸ್ವಾಮಿಯು ಅನ್ವರ್ಥ ಮಹಾವೀರನಾದನು. ಇದರಲ್ಲಿ ಗಮನಿಸತಕ್ಕ ವಿಷಯವೊಂದುಂಟು. ನಪುಂಸಕನು ಮಾಡುವ ಸ್ತ್ರೀಸಂಗ ವಿಸರ್ಜನೆಯು ಜಿತೇಂದ್ರಿಯತ್ವವೆಂಬ ಗೌರವವನ್ನು ಪಡೆಯಲಾರದಲ್ಲವೆ? ನಿರ್ಧನನಿಗೆ ಯಾವ ಸುಖಾಪೇಕ್ಷೆಯೂ ಇಲ್ಲದಿದ್ದರೆ ಅದನ್ನು ವಿಷಯಭೋಗತ್ಯಾಗ

* ಮಹಾವೀರನು ಸನ್ಯಾಸ ಸ್ವೀಕಾರಮಾಡಿದಾಗ್ಗೆ, ಕೇವಲ ಎರಡೂವರೆ ದಿನಗಳವರೆಗೆ ಮಾತ್ರ ಉಪವಾಸಮಾಡಿ, ಸಕಲವಿಧವಾದ ವೈಭವಾಡಂಬರಗಳನ್ನು ತೊರೆದು, ಏಕಾಂಗಿಯಾಗಿಯೇ ಉಪವನಕ್ಕೆ ನಡೆದು, ಅಲ್ಲಿ ಸ್ವಹಸ್ತದಿಂದಲೇ ಕೇಶೋತ್ಪಾಟನ ಮಾಡಿಕೊಂಡು ಸನ್ಯಾಸ ಸ್ವೀಕಾರಮಾಡಿದನೆಂದು ಕಲ್ಪಸೂತ್ರ ಗ್ರಂಥವು ಹೇಳುತ್ತದೆ.

ವೆಂದು ಯಾರಾದರೂ ಗೌರವಿಸುವರೇ? ಯಾವನು ಅಗಾಧ ಐಶ್ವರ್ಯ-ವೈಭವಗಳ ಮಧ್ಯದಲ್ಲಿದ್ದರೂ ಭೋಗಾಭಿಲಾಷೆಗೆ ವಶನಾಗದೆ, ತನ್ನ ಇಂದ್ರಿಯಗಳನ್ನು ಸ್ವಾಧೀನದಲ್ಲಿಟ್ಟುಕೊಂಡಿರುವನೋ, ಸುಂದರಿಯರಾದ ಸ್ತ್ರೀಯರಿಂದ ಪರಿವೇಷ್ಟಿತನಾಗಿದ್ದರೂ, ಪುಷ್ಟಾಂಗನಾದ ಯೌವನಸ್ಥನಾದ ಯಾವನ ಮನಸ್ಸು ವಿಕಲ್ಪವಾಗದೆ ಇರುವುದೋ ಅಂಥವನೇ ಜಿತೇಂದ್ರಿಯನೆಂಬ ಗೌರವಕ್ಕೆ ಪಾತ್ರನಾಗುವನು. ಸಮಸ್ತವನ್ನೂ ಗಳಿಸಿದರೂ, ಅನಾವಶ್ಯಕವಾಗಿ ಅವುಗಳನ್ನು ಉದಾರಭಾವದಿಂದ ದಾನಮಾಡುವ ಪುಣ್ಯಶೀಲನಿಗೆ ಮಾತ್ರವೇ ದಾತೃವೆಂಬ ನಾಮಧೇಯವು ಸಲ್ಲುವುದು. ಅಂತಹ ವಿಶಾಲಹೃದಯದ ಧೀರನು ಮಾತ್ರವೇ ಕಾಮಕ್ರೋಧಗಳನ್ನು ಜಯಿಸಿ, ಜೀವಿತದಲ್ಲಿ ಆಸೆಯನ್ನು ವಿಸರ್ಜಿಸಿ, ಲೋಕವನ್ನೇ ಹುಲ್ಲುಕಡ್ಡಿಯಂತೆ ಗಣನೆಮಾಡಿ, ಅಗಾಧ ತ್ಯಾಗಮಾಡಲು ಸಮರ್ಥನಾಗುವನು. ಲೋಕಕ್ಷೇಮಕ್ಕಾಗಿ ಸಕಲವನ್ನೂ ತ್ಯಾಗಮಾಡಿ, ಸೇವಾಧರ್ಮವನ್ನು ಸ್ವೀಕರಿಸಿ ನಿಲ್ಲುವ ಇಂತಹ ಧೀರರಿಂದಲೇ ಲೋಕವು ಉದ್ಧಾರವಾಗುವುದು.

ನಮ್ಮ ಕಥಾನಾಯಕನಿಗೆ ಮತಿಜ್ಞಾನ, ಶ್ರುತಿಜ್ಞಾನ, ಅವಧಿಜ್ಞಾನಗಳೆಂಬ ತ್ರಿವಿಧ ಜ್ಞಾನಗಳು ಗರ್ಭದಲ್ಲಿದ್ದಾಗಲೇ ಲಭ್ಯವಾಗಿದ್ದುವೆಂದು ಈವರೆಗೇ ಹೇಳಲ್ಪಟ್ಟಿದೆಯಷ್ಟೆ! ಹೀಗೆ ಸಕಲಸಂಗ ವಿವರ್ಜಿತನಾಗಿ ತಪೋನಿರತನಾಗಲು, ಕರ್ಮಬಂಧನಗಳು ಸಡಲಿಹೋದಂತೆಲ್ಲಾ-ಆತ್ಮಸಿದ್ಧಿಯ ಸೋಪಾನದ ಮೆಟ್ಟಲುಗಳನ್ನು ಹತ್ತಿದಂತೆಲ್ಲಾ ಆತನಿಗೆ ಮನಃಪರ್ಯಯವೆಂಬ ದಿವ್ಯಜ್ಞಾನವು ಪ್ರಾಪ್ತವಾಯಿತು. ಇದರ ಲಾಭದಿಂದ ಆತನು ಪಂಚೇಂದ್ರಿಯ ಸಂಪತ್ತಿಯುಳ್ಳ ಸಕಲ ಪ್ರಾಣಿಗಳ ಮನೋವ್ಯಾಪಾರಗಳನ್ನೂ ಯೋಚನೆಗಳನ್ನೂ ಕರತಲಾಮಲಕದಂತೆ ತಿಳಿಯಲು ಸಮರ್ಥನಾದನು. ಮನಃಪರ್ಯಯ ಜ್ಞಾನಲಬ್ಧವಾದಮೇಲೆ ಆತನು ಅನೇಕ ವೇಳೆ ಧ್ಯಾನ ಸಮಾಧಿಯಲ್ಲೇ ಮಗ್ನನಾಗಿರುತ್ತಾ, ಶೀತ ಉಷ್ಣ, ಸುಖ ದುಃಖ, ಸಂತೋಷ ವ್ಯಸನ, ಹಿತ ಅಹಿತ ಎಂಬ ದ್ವಂದ್ವಗಳನ್ನು ಮೀರಿ, ಭಿಕ್ಷೆಯಿಂದ ಜೀವನಯಾತ್ರೆಯನ್ನು ಸಾಗಿಸಿಕೊಳ್ಳುತ್ತಾ, ದೇಶದಲ್ಲೆಲ್ಲಾ ಸಂಚರಿಸಿದನು.

ಮಹಾವೀರನು ತನ್ನ ಕಾಲಕ್ಕೆ ಸುಮಾರು ಇನ್ನೂರೈವತ್ತು ವರ್ಷಗಳಿಗೆ ಪೂರ್ವದಲ್ಲಿ ಅವತಾರಮಾಡಿದ್ದ ಇಪ್ಪತ್ತಮೂರನೆಯ ತೀರ್ಥಂಕರನಾದ ಪಾರ್ಶ್ವನಾಥನಿಂದ ಅನುಸರಿಸಿ ಬಂದ ಜೈನ ಸಂಪ್ರದಾಯವನ್ನೇ ಅನುಸರಿಸಿ ಸನ್ಯಾಸ ಸ್ವೀಕಾರಮಾಡಿದ್ದನು. ಆ ಧರ್ಮದಲ್ಲೇ ತರುವಾಯ ಒಂದು ವರ್ಷ ಒಂದು ತಿಂಗಳ ಕಾಲವಿದ್ದನು. ಬಹು ದಿನಗಳಿಂದಲೂ ಕೇವಲ ಕೆಲಸವಿಲ್ಲದ ಸಾಧುಸನ್ಯಾಸಿಗಳ ಪಾಲಿಗೆ ಮಾತ್ರ ಉಳಿದಿದ್ದ ಆ ಧರ್ಮವು, ಬಹು ಶಿಥಿಲವಾಗಿದ್ದಿತೆಂಬುದು ಆವೇಳೆಗೆ ಮಹಾವೀರಸ್ವಾಮಿಗೆ ಗೋಚರವಾಗಲು, ತರುವಾಯ ಆ ಸಂಪ್ರದಾಯದವರ ಸಂಬಂಧವನ್ನು ತ್ಯಜಿಸಿ, ಇನ್ನೂ ತೀಕ್ಷ್ಣವ್ರತನಿಷ್ಠೆಯಿಂದ ನಿರ್ವಸ್ತ್ರನಾಗಿ ತಿರುಗಲಾರಂಭಿಸಿದನು.

ಜೈನಪಂಗಡದಲ್ಲಿ ಈ ವಸ್ತ್ರಧಾರಣೆ-ವಸ್ತ್ರವಿಸರ್ಜನೆಗಳ ಪ್ರಶ್ನೆಯೊಂದು ಅತಿ ಮುಖ್ಯವಾದುದು. ಮಹಾವೀರನು ಸರ್ವಸಂಗಪರಿತ್ಯಾಗಮಾಡಿದ ಸನ್ಯಾಸಿಯು. ಎಲ್ಲಾ ಅಭಿಮಾನಗಳ ಜೊತೆಗೆ ದೇಹಾಭಿಮಾನವನ್ನೂ-ಮುಖ್ಯವಾಗಿ ನಾಚಿಕೆಯನ್ನೂ ತ್ಯಜಿಸದಿದ್ದರೆ ಪ್ರಯೋಜನವಿಲ್ಲವೆಂದು ಆತನು ನಂಬಿದನು. ಶೀತೋಷ್ಣಗಳನ್ನು ಸಮಭಾವದಲ್ಲಿ ತಿಳಿಯಲು ತಕ್ಕ ಯೋಗ್ಯತೆಯನ್ನು ಪಡೆಯಬೇಕಾದವನಿಗೆ ಇದು ಶೀತ ಇದು ಉಷ್ಣ ಎಂಬ ಭೇದವೇ ತಿಳಿಯಬಾರದಾದುದರಿಂದ ಅವನಿಗೆ ವಸ್ತ್ರಗಳ ಮೂಲಕ ದೇಹರಕ್ಷಣೆಯಾಗಬೇಕೆಂಬ ಅವಶ್ಯಕವೂ ಇರಕೂಡದೆಂದನು. ಹೀಗಾದಮೇಲೆ, ತಾನು ವಸ್ತ್ರಧಾರಣ ಮಾಡಿದ್ದೇನೋ ಅಥವ ನಿರ್ವಸ್ತ್ರನಾಗಿದ್ದೇನೋ ಎಂಬುದರ ವಿಚಾರಕ್ಕೇ ಹೋಗದಷ್ಟು ಮಟ್ಟಿಗೆ ಮನಸ್ಸು ದೇಹವಿಚಾರವನ್ನು ಮರೆವ ಸ್ಥಿತಿಯೇ, ನಿಜವಾದ ಸನ್ಯಾಸಿಯ ಸ್ಥಿತಿಯೆಂದು ಆತನು ಭಾವಿಸಿದನು. ಅಷ್ಟುಮಾತ್ರವಲ್ಲ. ವಸ್ತ್ರವಿಸರ್ಜನೆ ಮಾಡುವ ಆ ಒಂದು ಕಾರ್ಯದೊಂದಿಗೇ ಅದನ್ನು ಒಗೆವ ಒಣಗಿಸುವ ಪೆಟ್ಟಿಗೆ ಮುಂತಾದುವುಗಳಲ್ಲಿಟ್ಟು ರಕ್ಷಿಸುವ, ಅದು ಶುದ್ಧವಾದುದೇ ಮಾಸಿದುದೇ-ನೋಟಕ್ಕೆ ಅಂದವಾದುದೇ-ಕುರೂಪವಾದುದೇ ಎಂದು ಹಿಗ್ಗಿ ಮರುಗುವ ಮುಂತಾದ ಸಾವಿರಾರು ಕಷ್ಟವ್ಯಸನಗಳೂ ನೀಗಿ ಮನಸ್ಸು ನಿಶ್ಚಿಂತವಾಗುವುದೆಂದೂ ಆತನು ಯೋಚಿಸಿ, ದಿಗಂಬರನಾಗಿ ಎಂದರೆ ದಿಕ್ಕುಗಳೇ ವಸ್ತ್ರಗಳಾಗಿ ಉಳ್ಳವನಾಗಿ ಸಂಚರಿಸಲು ನಿಶ್ಚಯಿಸಿದನು.

ಮಹಾವೀರನು *ವಸ್ತ್ರವಿಸರ್ಜನೆಮಾಡಿ ದಿಗಂಬರತ್ವವನ್ನು ಸ್ವೀಕಾರ ಮಾಡಿದನೆಂಬ ಸಂದರ್ಭದಲ್ಲಿ ಹೇಳಲ್ಪಟ್ಟಿರುವ ಒಂದು ದಂತಕಥೆಯು ಆ ಕಾಲದಲ್ಲಿ ಬ್ರಾಹ್ಮಣರು ಎಂತಹ ನಿಕೃಷ್ಟಸ್ಥಿತಿಯಲ್ಲಿ ಕಾಣಲ್ಪಡುತ್ತಿದ್ದರೆಂಬುದನ್ನು ಚೆನ್ನಾಗಿ ಪ್ರದರ್ಶಿಸುತ್ತದೆ. ಬ್ರಾಹ್ಮಣರಲ್ಲೂ ಮಹಾಜ್ಞಾನಿಗಳೂ, ಅಗಾಧ ಜಿತೇಂದ್ರಿಯರೂ, ಮಹಾ ತಪಸ್ವಿಗಳೂ, ನಿಷ್ಠರೂ, ಸಾಧುಪುರುಷರೂ, ಮತೋದ್ಧಾರಕರೂ ಎಂದೂ ಹುಟ್ಟಲೇ ಇಲ್ಲವೆ ? ಬ್ರಾಹ್ಮಣರು ಎಂದೆಂದಿಗೂ ಗರ್ಭದರಿದ್ರರಾಗಿಯೇ ಭಿಕ್ಷುಕರಾಗಿಯೇ ತೇಜೋವಿಹೀನರಾಗಿಯೇ ಇದ್ದು ಈ ಭಾರತಭೂಮಿಯಲ್ಲಿ ಅನಾದಿಕಾಲದಿಂದಲೂ ಧರ್ಮಸಂರಕ್ಷಣೆಯ ಮಹತ್ಕಾರ್ಯವನ್ನು ಸಾಗಿಸಿಕೊಂಡು ಬರಲು ಶಕ್ತರಾದರೇ ? ಜನನಕಾಲದಲ್ಲೇ ಬ್ರಾಹ್ಮಣಿಯ ಗರ್ಭವು ನಿಕೃಷ್ಟ ಗರ್ಭವೆಂದೂ, ಭಿಕ್ಷುಕ ದರ್ಜೆಯ ಬ್ರಾಹ್ಮಣಕುಲದಲ್ಲಿ ತೀರ್ಥಂಕರನು ಜನಿಸಲಾಗದೆಂದೂ ತಿಳಿದು ಇಂದ್ರನು ದೇವಾನಂದಳ ಗರ್ಭದಿಂದ ಮಹಾವೀರನ ಚೇತನವನ್ನು ಕ್ಷತ್ರಿಯಳಾದ ತ್ರಿಶಲಾಗರ್ಭಕ್ಕೆ ಸಾಗಿಸಿದನೆಂದು ಪೂರ್ವದಲ್ಲೇ ಹೇಳಲ್ಪಟ್ಟಿದೆಯಲ್ಲವೆ ? ಮಹಾವೀರನು ವಸ್ತ್ರತ್ಯಾಗ ಮಾಡಿದ ಸಂದರ್ಭದಲ್ಲೂ ಸಹ, ಬ್ರಾಹ್ಮಣನು ಕೇವಲ ಕ್ಷುದ್ರರೀತಿಯಲ್ಲಿ ಚಿತ್ರಿಸಲ್ಪಟ್ಟಿದ್ದಾನೆ. ಈ ಸಂಗತಿಗಳಿಂದ ಆ ಕಾಲದಲ್ಲಿ ಬ್ರಾಹ್ಮಣಾದಿ ಚತುರ್ವರ್ಣಗಳಲ್ಲಿ ಪರಸ್ಪರ ಪ್ರೀತಿವಿಶ್ವಾಸಗಳೂ ಗೌರವ ನಂಬಿಕೆಗಳೂ ಎಷ್ಟುಮಟ್ಟಿಗಿದ್ದುವೆಂಬುದನ್ನು ತಿಳಿಯಬಹುದಾಗಿದೆ. ಆ ಕಥೆಯನ್ನು ಇಲ್ಲಿ ಹೇಳಲಾಶಿಸುತ್ತೇವೆ.

‘ ಮಹಾವೀರನು ಸರ್ವಸಂಗ ಪರಿತ್ಯಾಗಮಾಡಿ ಸನ್ಯಾಸ ಸ್ವೀಕಾರ ಮಾಡಿದ ಸಂದರ್ಭದಲ್ಲಿ ಇಂದ್ರನು ಆತನಿಗೊಂದು ಅಮೂಲ್ಯವಸ್ತ್ರವನ್ನು ಬಹುಮಾನಮಾಡಿದನಂತೆ ! ಮಹಾವೀರನು ಅದನ್ನು ಧರಿಸಿಕೊಂಡನು.

---

* ದಿಗಂಬರ ಪಂಗಡದವರು, ಮಹಾವೀರನು ಸನ್ಯಾಸ ಗ್ರಹಣ ಕಾಲದಲ್ಲೇ ವಸ್ತ್ರವಿಸರ್ಜನೆಮಾಡಿದನೆಂದೂ, ಶ್ವೇತಾಂಬರರು ತರುವಾಯ ಹದಿಮೂರು ತಿಂಗಳಮೇಲೆ ವಸ್ತ್ರತ್ಯಾಗಮಾಡಿ ದಿಗಂಬರನಾದನೆಂದೂ ಹೇಳುತ್ತಾರೆ.

ತರುವಾಯ ಮಹಾವೀರನು ತನ್ನ ಸಮಸ್ತವಸ್ತ್ರಗಳನ್ನೂ ದಾನಮಾಡಿದನು. ಹಾಗೆ ದಾನವೆಲ್ಲವೂ ಮುಗಿದ ತರುವಾಯ ಸೋಮದತ್ತನೆಂಬೊಬ್ಬ ಬ್ರಾಹ್ಮಣನು ಅಲ್ಲಿಗೆ ಬಂದನಾದುದರಿಂದ ಅವನಿಗೆ ಯಾವ ದಾನವೂ ದೊರೆಯಲಿಲ್ಲ. ತನಗೆ ಯಾವ ದಾನವೂ ದೊರೆಯಲಿಲ್ಲವೆಂದು ಅವನು ಮಹಾವೀರನಲ್ಲಿ ದೂರಿಕೊಂಡು ಯಾಚಿಸಿದನು. ಮಹಾವೀರನು, 'ಯಾವುದೂ ಮಿಗಲಿಲ್ಲವಲ್ಲಾ? ಈತನಿಗೇನು ಕೊಟ್ಟು ತೃಪ್ತಿಪಡಿಸಲಿ' ಎಂದು ಚಿಂತಿಸುತ್ತಿರುವಲ್ಲಿ, ಇಂದ್ರನು ತನಗೆ ಕೊಟ್ಟುಹೋಗಿದ್ದ ದಿವ್ಯವಸ್ತ್ರದ ಸ್ಮರಣೆ ಆತನಿಗೆ ಬಂದಿತು. ಒಡನೇ ಅದರಲ್ಲಿ ಅರ್ಧವನ್ನು ಹರಿದು ಅದನ್ನು ಆ ಬ್ರಾಹ್ಮಣನಿಗೆ ಕೊಟ್ಟು ಕಳುಹಿಸಿದನಂತೆ! ಬ್ರಾಹ್ಮಣನು ತನ್ನ ಮನೆಯ ಬಳಿ ಇದ್ದ ಒಬ್ಬ ನೇಯ್ಗಾರನಿಗೆ ಅದನ್ನು ತೋರಿಸಿ ಹೆಗ್ಗಳಿಕೆಪಡಲು, ಆ ನೇಯ್ಗಾರನು ಮಿಕ್ಕ ಅರ್ಧವನ್ನೂ ಹೇಗಾದರೂಮಾಡಿ ತನಗೆ ತಂದು ಕೊಟ್ಟರೆ, ಎರಡನ್ನೂ ಸೇರಿಸಿ ಅಂದವಾಗುವಂತೆ ಒಂದು ದೊಡ್ಡವಸ್ತ್ರವನ್ನು ಮಾಡಿಕೊಡುತ್ತೇನೆಂದು ಆ ಬ್ರಾಹ್ಮಣನನ್ನು ಪ್ರೇರಿಸಿದನು. ಒಡನೆ ಆ ಬ್ರಾಹ್ಮಣನು ಹಿಂದೆಮುಂದೆ ನೋಡದೆ, ಪುನಃ ಮಹಾವೀರನ ಬಳಿಗೆ ಹೋಗಿ, ಆತನು ತನ್ನಸುತ್ತಲೂ ಏನು ನಡೆಯುತ್ತೆಂಬುವರ ಗಮನವೇ ಇಲ್ಲದಷ್ಟು ಮಟ್ಟಿಗೆ ಧ್ಯಾನಸಮಾಧಿಯಲ್ಲಿ ಮಗ್ನನಾಗಿದ್ದಾಗ್ಗೆ ಕೆಳಕ್ಕೆ ಬಿದ್ದಿದ್ದ ಆ ವಸ್ತ್ರಾರ್ಧವನ್ನು ಉಪಾಯವಾಗಿ ಕದ್ದು ತೆಗೆದುಕೊಂಡು ಓಡಿ ಹೋದನು !' ಹೀಗೆಂದು ಆ ಕಥೆಯು ಹೇಳುತ್ತದೆ.

ಮಾನಾಪಮಾನಗಳ ವಿಷಯದಲ್ಲಿ ಇಷ್ಟುಮಟ್ಟಿನ ಉದಾಸೀನ ಭಾವವನ್ನುಂಟಾಗಿದ್ದುದು ಮಾತ್ರವಲ್ಲ. ಮಹಾವೀರನು, ತನ್ನ ದೇಹಕ್ಕೆ ಉಂಟಾಗಬಹುದಾದ ನೋವು ಮುಂತಾದುವುಗಳ ವಿಚಾರದಲ್ಲೂ ಅಷ್ಟೇ ಮಟ್ಟಿನ ಉದಾಸೀನಭಾವದಿಂದ ಇದ್ದನು. ಒಂದಾನೊಂದು ದಿನ ಆತನು ಗ್ರಾಮದ ಹೊರಗಿದ್ದ ಒಂದು ಸ್ಥಳದಲ್ಲಿ ಕುಳಿತು ಧ್ಯಾನಮಗ್ನನಾಗಿದ್ದಾಗ್ಗೆ, ಕೆಲವರು ದನಕಾಯುವವರು, ಆತನ ಕಾಲುಗಳಿಗೇ ಬೆಂಕಿಯನ್ನು ಹೊತ್ತಿಸಿಟ್ಟು, ಆತನ ಕಿವಿಗಳಲ್ಲಿ ಮೊಳೆಗಳನ್ನು ಹೊಡೆದರಂತೆ! ದೇಹಕ್ಕೆ ಇಂತಹ ಹಿಂಸೆಯು ಉಂಟಾದರೂ ಆತನು ಧ್ಯಾನಸಮಾಧಿಯಿಂದ ವಿಮುಖನಾಗಲಿಲ್ಲವಂತೆ !

ಮಹಾವೀರಸ್ವಾಮಿಯು ಹೀಗೆ ಒಂದು ಸ್ಥಳದಲ್ಲಿ ನಿಲ್ಲದೆ ಹನ್ನೆರಡು ವರ್ಷಕಾಲ ಗ್ರಾಮೈಕರಾತ್ರಿಯಾಗಿ ಸಂಚಾರಮಾಡುತ್ತಲಿದ್ದನು. ಮಳೆಗಾಲದಲ್ಲಿ ಮಾತ್ರ ಚಾತುರ್ಮಾಸ್ಯ ವ್ರತಕ್ಕಾಗಿ ಒಂದೇ ಸ್ಥಳದಲ್ಲಿ ವಾಸಮಾಡಿ, ಅದು ಮುಗಿದ ಒಡನೆಯೇ ಪುನಃ ಸಂಚಾರ ಹೊರಡುತ್ತಿದ್ದನು. ಈ ಹನ್ನೆರಡು ವರ್ಷಕಾಲದಲ್ಲಿ ಆತನು ಎಲ್ಲೂ ಬೋಧನೆಮಾಡಲಿಲ್ಲ. ಆತನಿಗೆ ಈ ಹಿಂದೆಯೇ ಹೇಳಿದಂತೆ ಈವರೆಗೆ ಮನಃಪರ್ಯಯ ಜ್ಞಾನಮಾತ್ರವೇ ಪ್ರಾಪ್ತಿಯಾಗಿದ್ದಿತಲ್ಲದೆ ಕೇವಲ ಜ್ಞಾನವೆಂಬ-ಆತ್ಮಜ್ಞಾನವಾಗಿರಲಿಲ್ಲ. ತನಗೇ ಅಂತಹ ಜ್ಞಾನ ಲಭ್ಯವಾಗದಿರುವಾಗ್ಗೆ ಇತರರಿಗೆ ಬೋಧಿಸುವುದು ಯುಕ್ತವಾದುದಲ್ಲವೆಂದು ಭಾವಿಸಿ, ಆತನು ಆ ಹನ್ನೆರಡು ವರ್ಷಕಾಲವೂ ಬೋಧನೆಯ ಗೊಡವೆಗೇ ಹೋಗದೆ, ಕೇವಲ ತನ್ನ ಧ್ಯಾನ ತಪಸ್ಸು ನಿಷ್ಠೆ ಮೌನವ್ರತಾಚರಣೆ ಮುಂತಾದವುಗಳಲ್ಲೇ ಮಗ್ನನಾಗಿದ್ದುಬಿಟ್ಟನು. ಆದರೆ ಆತನ ಪ್ರಥಮ ಶಿಷ್ಯರಲ್ಲಿ ಒಬ್ಬನಾದ ಗೋಶಲನಿಗೆ ಅಷ್ಟುಕಾಲ ಏಕನಿಷ್ಠೆಯಿಂದ ಇರಲು ಸಾಧ್ಯವಾಗದೆ, ಆರು ವರ್ಷಕಾಲ ಮಾತ್ರ ಆತನೊಂದಿಗಿದ್ದು ತರುವಾಯ ಬೇರೆ ಹೊರಟುಹೋಗಿ ಸ್ವಂತವಾಗಿಯೇ ಬೋಧನೆಗೆ ತೊಡಗಿದನು.

ಹೀಗೆ ಹನ್ನೆರಡು ವರ್ಷಕಾಲ ಮಹಾಕಠಿಣತರವಾದ ತಪಸ್ಸನ್ನು ಮಾಡಿದ ತರುವಾಯ ಮಹಾವೀರನು ಒಂದಾನೊಂದುದಿನ ಋಜುಕುಲಾ ಎಂಬ ನದಿಯ ಬಳಿಯಲ್ಲಿದ್ದ ಜೃಂಭಕವೆಂಬ ಗ್ರಾಮದ ಸಮೀಪದ ಒಂದು ಸಾಲವೃಕ್ಷದ ಬುಡದಲ್ಲಿ ಕುಳಿತು ಕೇವಲಜ್ಞಾನ ಪ್ರಾಪ್ತಿಗಾಗಿ, ಆರುದಿನಗಳವರೆಗೆ ಅಖಂಡ ನಿರಶನವ್ರತವನ್ನು ಸ್ವೀಕಾರಮಾಡಿದನು. ಹೀಗೆ ಈವರೆಗೆ ಮಾಡುತ್ತಾ ಬಂದ ಕಠಿಣವ್ರತಾಚರಣೆಯೂ, ಈ ಆರುದಿನಗಳ ಅತಿತೀವ್ರವಾದ ಅಖಂಡ ನಿರಶನವ್ರತವೂ ಫಲಪ್ರದವಾಗುವ ಸುವೇಳೆಯು ಪ್ರಾಪ್ತವಾಯಿತು. ಕೊನೆಗೆ ಒಂದಾನೊಂದು ವೈಶಾಖ ಶುದ್ಧದಶಮಿಯ ದಿನ ಘಾತಿಕರ್ಮಗಳೆಲ್ಲವೂ ನಾಶವಾಗಿ ಹೋಗಲು, ಆತನಿಗೆ ಕೇವಲಜ್ಞಾನವೆಂಬ ಸರ್ವಜ್ಞತ್ವವು ಪ್ರಾಪ್ತವಾಯಿತು. ಏಕಕಾಲಕ್ಕೆ ಪ್ರಪಂಚದ ಎಲ್ಲಾ ಸ್ಥಳಗಳಲ್ಲೂ ನಡೆವ ಎಲ್ಲಾ ವಿಚಾರಗಳನ್ನೂ ಕರತಲಾಮಲಕವಾಗಿ ತಿಳಿವ ಈ ಸರ್ವೋತ್ಕೃಷ್ಟ ಜ್ಞಾನಸಿದ್ಧಿಯನ್ನು ಹೊಂದಿದ ಆ ಸಾಧುಮೂರ್ತಿ

ಯನ್ನು ದರ್ಶಿಸಲು, ಒಡನೆ ಇಂದ್ರಾದಿ ದೇವತೆಗಳೆಲ್ಲರೂ ಅಲ್ಲಿಗೆ ಬಂದು ಪೂಜೆಸ್ತೋತ್ರಾದಿಗಳಿಂದ ಆರಾಧಿಸಿ ಮಂಗಳಗಾನಮಾಡಿ ಮಹೋತ್ಸವ ಗಳನ್ನು ನಡೆಸಿದರು. ಈ ಉತ್ಸವಕ್ಕೆ ಕೇವಲಜ್ಞಾನ ಕಲ್ಯಾಣವೆಂದು ಹೆಸರು. ಹೀಗೆ ದುರ್ಲಭವಾದ ಈ ಕೇವಲಜ್ಞಾನವನ್ನು ತನ್ನ ಅಗಾಧ ಇಂದ್ರಿಯ ನಿಗ್ರಹ ತಪಶ್ಚರ್ಯ ಮುಂತಾದ ನಿಷ್ಠೆಗಳಿಂದ ಸಾಧಿಸಿದ ಆ ತೀರ್ಥಂಕರ ಮೂರ್ತಿಯನ್ನು *(1) 'ಜಿನ' (2) 'ಅರ್ಹಂತ' (3) 'ಅರಿಹಂತ' (4) 'ಅರು ಹಂತ' ಎಂಬ ಬಿರುದುಗಳಿಂದ ಹೊಗಳಿ ದೇವತೆಗಳು, ತಮ್ಮ ಮಾರ್ಗದಲ್ಲಿ ಯಥೇಚ್ಛ ಪ್ರಯಾಣಮಾಡಿಕೊಂಡು ಹೊರಟುಹೋದರು.



**ಅಧ್ಯಾಯ ೫. 'ನಿರ್ವಾಣ ಕಲ್ಯಾಣ'**

ಕೇವಲಜ್ಞಾನಪ್ರಾಪ್ತಿಯಿಂದ ಸರ್ವಜ್ಞತ್ವವನ್ನು ಪಡೆದ ಮಹಾವೀರ ಸ್ವಾಮಿಯು ಬೋಧನೆಗೆ ತೊಡಗಿದನು. ಆತನು ಬೋಧನೆಗೆ ತೊಡಗಿ ದೊಡನೆಯೇ ಪ್ರಾರಂಭಕ್ಕೆ, ಅಹಿಂಸಾವ್ರತ, ಅಸತ್ಯತ್ಯಾಗವ್ರತ, ಅಸ್ತೇಯ ವ್ರತ, ಬ್ರಹ್ಮಚರ್ಯವ್ರತ, ಅಪರಿಗ್ರಹವ್ರತ ಎಂಬೀ ಐದು ಮಹಾ ವ್ರತಗಳನ್ನು ಕುರಿತು ವಿಸ್ತಾರವಾಗಿ ಜನಗಳಿಗೆ ತಿಳಿಯಹೇಳಿದನು. ಇವು ಗಳಲ್ಲಿ ಒಂದೊಂದೂ ಮೇಲಿನ ಪದಗಳಿಂದ ತೋರುವುದಕ್ಕಿಂತಲೂ ವಿಶೇ ಷಾರ್ಥಗಳನ್ನು ಒಳಗೊಂಡಿವೆ. 'ಅಹಿಂಸಾ ಪರಮೋಧರ್ಮಃ' ಎಂಬು ದನ್ನೇ ಸರ್ವೋತ್ಕೃಷ್ಟ ಧರ್ಮವನ್ನಾಗಿ ತಿಳಿದು ಬೋಧಿಸತೊಡಗಿದ ಜೈನ ಮತದಲ್ಲಿ, **ಈ ಅಹಿಂಸಾವ್ರತ** ಪಾಲನೆಯೆಂದರೆ. ಕೇವಲ ಪ್ರಾಣಿಗಳನ್ನು ಕೊಲ್ಲದಿರುವಿಕೆಯೆಂದು ಮಾತ್ರ ಅರ್ಥವಾಗುವುದಿಲ್ಲ. ಮನಸಾವಾಚಾ ಕರ್ಮಣಾ ಪ್ರಾಣಿಗಳ ಮನಸ್ಸಿಗೆ ನೋವನ್ನು ಉಂಟುಮಾಡದಿರುವಿಕೆಯೂ

---

*(1) ಜ್ಞಾನಾವರಣ, ದರ್ಶನಾವರಣ, ವೇದನೀಯ, ಮೋಹನೀಯ, ಆಯುಷ್ಯ ನಾಮ, ಗೋತ್ರ, ಅಂತರಾಯ ಎಂಬೀ ಎಂಟುವಿಧ ಕರ್ಮ ಗಳಿಗೂ ಶತ್ರುಪ್ರಾಯನಾದವನು. (2) ಗೌರವಕ್ಕೆ ಪಾತ್ರನಾದವನು. (3) ಶತ್ರುನಾಶಕನು. (4) ಕರ್ಮಗಳನ್ನು ಬೇರೊಂದಿಗೆ ನಾಶಪಡಿಸಿದವನು.

ಅಹಿಂಸೆಯೆನಿಸಿಕೊಳ್ಳುತ್ತದೆ. ಪ್ರಾಣಿಗಳೆಂಬ ಪದಕ್ಕೆ ದನಕುರಿ ಕೋಳಿಗಳೆಂದು ಅಷ್ಟುಮಾತ್ರ ಅರ್ಥವಲ್ಲ. ಏಕೇಂದ್ರಿಯದ್ವೀಂದ್ರಿಯಗಳನ್ನುಂಟಾಗಿರುವ ಹುಳುಹುಪ್ಪಟೆಗಳೂ ಸೇರುತ್ತವೆ. ಅಹಿಂಸಾವ್ರತ ಪಾಲನೆ ಮಾಡತಕ್ಕ ಮನುಷ್ಯನು ಅಜಾಗರೂಕತೆಯಿಂದಲಾದರೂ ಯಾವ ಪ್ರಾಣಿಗೂ ಹಿಂಸೆಮಾಡಕೂಡದೆಂಬುದರವರೆಗೂ ಅದರ ವ್ಯಾಪಕತೆಯುಂಟು. ಅಸತ್ಯತ್ಯಾಗವ್ರತವೂ ಹಾಗೆಯೇ! **ಅಸತ್ಯತ್ಯಾಗವೆಂದರೆ** ಕಂಡದ್ದನ್ನು ಕಂಡಂತೆ ನಿಜಹೇಳುವಿಕೆ ಮಾತ್ರವಲ್ಲ. ಸತ್ಯವಾಗಿ ಹೇಳುವ ಒಂದುಮಾತು ಪ್ರಿಯವಾಗಿಯೂ ಹಿತವಾಗಿಯೂ ಇರಬೇಕು. ಸತ್ಯವೇ ಪ್ರಿಯವಾಗಿಯೂ ಹಿತದಾಯಕವಾಗಿಯೂ ಇಲ್ಲದಿದ್ದರೆ ಅದು ಸತ್ಯವೆನಿಸುವುದಿಲ್ಲ. ಈ ಅಸತ್ಯತ್ಯಾಗ ವ್ರತಪಾಲನೆ ಮಾಡುವಾತನು ಅಣಕಿಸುವಿಕೆ, ಅಶ್ಲೀಭಾಷೆಗಳನ್ನಿಟ್ಟುಕೊಳ್ಳುವಿಕೆ, ಅತ್ಯಾಸೆಪಡುವಿಕೆ, ಭಯಪಡುವಿಕೆ, ಕೋಪಗೊಳ್ಳುವಿಕೆ ಮುಂತಾದವುಗಳನ್ನೂ ತ್ಯಜಿಸಬೇಕಾಗುವುದಲ್ಲದೆ, ಮುಂದಾಲೋಚನೆ ಮಾಡಿಯೇ ಮಾತನಾಡುವಿಕೆಯನ್ನು ಅಭ್ಯಾಸದಲ್ಲಿ ತರಬೇಕು. **ಅಸ್ತೇಯ**ವೆಂದರೆ ಕಳ್ಳತನಮಾಡದಿರುವಿಕೆ ಮಾತ್ರವಲ್ಲ. ತನಗೆ ಅನಾವಶ್ಯಕವಾಗಿದ್ದು ಇತರರ ಉಪಯೋಗಕ್ಕೆ ಯೋಗ್ಯವಾಗಿದ್ದ ಪದಾರ್ಥಗಳನ್ನು ಅತ್ಯಾಸೆಯಿಂದ ತುಂಬಿಕೊಳ್ಳುವಿಕೆಯೂ ಅಸ್ತೇಯವ್ರತಧಾರಿಯು ತ್ಯಜಿಸಬೇಕಾದುದು. **ಬ್ರಹ್ಮಚರ್ಯ**ವೆಂದರೆ ಸ್ತ್ರೀಸಂಗ ತ್ಯಾಗಮಾತ್ರವೆಂದು ಅರ್ಥವಾಗುವುದಿಲ್ಲ. ಸ್ತ್ರೀವಿಷಯ ಚಿಂತನೆ, ಸ್ತ್ರೀಯೊಂದಿಗೆ ಸಂಭಾಷಣೆ, ಸ್ತ್ರೀಸಂಬಂಧ ವರ್ಣನೆಯಿರುವ ಗ್ರಂಥಗಳ ಪಠನೆ, ಅತಿಭೋಜನ, ಅತಿನಿದ್ರೆ ಮಸಾಲೆ ಮುಂತಾದವುಗಳಿಂದ ಸಿದ್ಧಗೊಳಿಸಿದ ಪದಾರ್ಥಗಳ ಸೇವನೆ ಇವುಗಳೂ ಬ್ರಹ್ಮಚರ್ಯವ್ರತವನ್ನು ಕೆಡಿಸತಕ್ಕ ಸಂಗತಿಗಳಾಗಿವೆ. ಕೊನೆಯದಾದ **ಅಪರಿಗ್ರಹ** ವ್ರತವು ಅತಿಶಯ ಕಠಿಣವಾದುದೆಂದು ಎಣಿಸಲ್ಪಟ್ಟಿದೆ. ಯಾವ ವಿಷಯದಲ್ಲೂ ಆಸೆಯನ್ನು ಮಾಡದೆ ಇರತಕ್ಕುದು ಈ ವ್ರತದ ಮುಖ್ಯತತ್ವವಾಗಿದೆ. ಒಂದು ಪದಾರ್ಥವು ನನಗೆ ಬೇಕೆಂದು ಅಪೇಕ್ಷೆಯುಂಟಾದರೆ, ಒಡನೆ ಅದನ್ನು ಸಂಗ್ರಹಿಸಬೇಕೆಂಬ ವಿಷಯದಲ್ಲಿ ಲೋಭವುಂಟಾಗುತ್ತದೆ. ಅದನ್ನು ಮತ್ತಾರಾದರೂ ಅಪೇಕ್ಷಿಸಿದರೆಂದು ಅಥವ ಅಪಹರಿಸಿದರೆಂದು ಅವರ ಮೇಲೆ ಕ್ರೋಧವುಂಟಾಗುತ್ತದೆ. ಹೀಗೆ ಒಂದನ್ನೊಂದು

ಅನುಸರಿಸಿಕೊಂಡು ಸಕಲ ಪಾಪಗಳೂ ಈ ಆಸೆಯನ್ನು ಅನುಸರಿಸಿಕೊಂಡೇ ಅಭಿವೃದ್ಧಿಗೊಳ್ಳುತ್ತವೆ. ಆದುದರಿಂದ ಸಾಧುವು ಈ ಪ್ರತಿಜ್ಞಾಪಂಚಕಗಳ ವಿಷಯದಲ್ಲಿ ಬಹು ಜಾಗರೂಕನಾಗಿರತಕ್ಕದ್ದೆಂದು ಮಹಾವೀರಸ್ವಾಮಿಯು ಬೋಧಿಸಿದನು.

ತೀರ್ಥಂಕರ-ವರ್ಧಮಾನನ ದೃಷ್ಟಿಯಲ್ಲಿ ಜನ್ಮಸ್ಥಳಕ್ಕೆ ಗೌರವವಿಲ್ಲ. ಜಾತಿಮತಗಳ ಪ್ರತಿಷ್ಠೆಗೆ ಸ್ಥಾನವಿಲ್ಲ. ಆತನು ಮನುಷ್ಯನಿಗೆ ಪ್ರಾಪ್ತವಾಗುವ ಶುಭಾಶುಭಗಳೆಲ್ಲಕ್ಕೂ ಅವನ ಕರ್ಮವೇ ಮುಖ್ಯಕಾರಣ-ಮೂಲಾಧಾರವೆಂದು ಒತ್ತಿಹೇಳಿದನು. ಬುದ್ಧನು ಆಶಾತ್ಯಾಗವೇ ಪುನರ್ಜನ್ಮನಿವೃತ್ತಿಗೆ ಪರಮಸಾಧನವೆಂದು ಹೇಳಿದನು. ಆದರೆ ಮಹಾವೀರನು ಸನ್ಯಾಸದಿಂದಲೇ ಕರ್ಮಗ್ರಂಥಿಯು ನಾಶವಾಗುವುದಲ್ಲದೆ ಮತ್ತೇತರಿಂದಲೂ ಕರ್ಮನಾಶವಾಗದು. ಅಂತೆಯೇ ಪುನರ್ಜನ್ಮವೂ ತಪ್ಪದು. ಆದುದರಿಂದ ಸನ್ಯಾಸ ಸ್ವೀಕಾರವೇ ಶ್ರೇಯಸ್ಕರವಾದ ಮಾರ್ಗವೆಂದು ಅಭಿಪ್ರಾಯಪಟ್ಟಿದ್ದಾನೆ.

ಮಹಾವೀರನ ಪ್ರಥಮಶಿಷ್ಯನಿಗೆ ಗೌತಮ ಇಂದ್ರಭೂತಿಯೆಂದು ಹೆಸರು. ಮಹಾವೀರನು ಈತನಿಗೆ ಜೀವಿಕೆಯ ಅಶಾಶ್ವತೆಯನ್ನೂ ಮೋಕ್ಷಮಾರ್ಗಪ್ರಾಪ್ತಿಯ ಉಪಾಯವನ್ನೂ ತಿಳಿಸಿದತರುವಾಯ, ತನ್ನಕುಲದವರೇ ಆದ ಕ್ಷತ್ರಿಯ ಜನರಿಗೆ ತಾನು ಕಂಡುಕೊಂಡ ಸರ್ವೋತ್ತಮ ವಿಚಾರವನ್ನು ಕುರಿತು ಬೋಧಿಸಲು ಹೊರಟನು. ವಿದೇಹರಾಜ್ಯದ ಛೇಟಕರಾಜ, ಅಂಗದೇಶಾಧಿಪನಾದ ಕುನಿಕ, ಕೌಶಾಂಬಿಯ ರಾಜನಾದ ಶತಾನೀಕ ಮುಂತಾದ ರಾಜರು ಮಹಾವೀರನನ್ನು ವಿಶೇಷಗೌರವದಿಂದ ಕಂಡು ಆತನ ಬೋಧನೆಗಳನ್ನು ಅತಿಶಯ ಆದರದಿಂದ ಕೇಳಿದರು. ಹೀಗೆ ಆತನು ಮೂವತ್ತು ವರ್ಷಕಾಲ ಸಂಚಾರಮಾಡಿ ಮಗಧ, ಬಿಹಾರ, ಪ್ರಯಾಗ, ಕೌಶಾಂಬಿ, ಕಂಪಾಪುರಿ ಮುಂತಾದ ಆ ಕಾಲದಲ್ಲಿ ಉತ್ತರಭಾರತದಲ್ಲಿ ಗಣ್ಯವೆನ್ನಿಸಿದ್ದ ರಾಷ್ಟ್ರಗಳಲ್ಲೆಲ್ಲ ತನ್ನಮತವನ್ನು ಪ್ರಚಾರಮಾಡಿದನು. ಸಂಚಾರಕಾಲದಲ್ಲಿ ಆತನು ಒಬ್ಬನೇ ಹೋಗುತ್ತಿದ್ದನೆಂತಲ್ಲ. ಆವರೆಗೆ

ಆತನ ಶಿಷ್ಯವರ್ಗಕ್ಕೆ ಸೇರಿದ್ದ ಸುಮಾರು ಹದಿನಾಲ್ಕು ಸಾವಿರಮಂದಿ ಸಾಧುಗಳೂ (Monk) ಸಾಧ್ವಿಯರೂ (Nuns) ಇತರರೂ ಒಟ್ಟಿಗೇ ಧರ್ಮದ ದಂಡೋಎಂಬಂತೆ ಸಂಚರಿಸುತ್ತಿದ್ದರು. ಮಹಾವೀರಸ್ವಾಮಿಯು ಅನಕ್ಸಾರಿ ಎಂಬೊಂದು ಭಾಷೆಯಲ್ಲಿ ಬೋಧಿಸುತ್ತಿದ್ದನಂತೆ! ಆ ಭಾಷೆಯು ಸಾಮಾನ್ಯಜನಸಮುದಾಯಕ್ಕೆ ತಿಳಿಯದಿದ್ದುದರಿಂದ ಗೌತಮಇಂದ್ರಭೂತಿ (ಗೌತಮಗಣಧರ) ಯು ಅದನ್ನು ಮಾಗಧಿ ಭಾಷೆಗೆ ತರ್ಜುಮೆಮಾಡಿ ಜನರಿಗೆ ಬೋಧಿಸುತ್ತಿದ್ದನು.

ಮಹಾವೀರನು ಇತರ ಎಲ್ಲಾಸ್ಥಳಗಳಿಗಿಂತಲೂ ಮಗಧರಾಜ್ಯದ ರಾಜಧಾನಿಯಾದ ರಾಜಗೃಹವನ್ನೇ ಹೆಚ್ಚು ಪ್ರೀತಿಸುತ್ತಿದ್ದನು. ಅಲ್ಲಿಯ ರಾಜನಾದ ಶ್ರೇಣಿಕನೂ ತನ್ನ ವಿಶಿಷ್ಟ ಪ್ರಜಾಪರಿವಾರದೊಂದಿಗೆ ಹೋಗಿ ಗುರುವನ್ನು ಅಗಾಧರೀತಿಯಿಂದ ಗೌರವಿಸಿ ರಾಜಧಾನಿಗೆ ಕರೆತಂದು ಉಪಚರಿಸಿದನು. ಶ್ರೇಣಿಕರಾಜನು ಜೈನಮತವಿಚಾರವಾಗಿ ಅರುವತ್ತುಸಾವಿರ ಪ್ರಶ್ನೆಗಳನ್ನು ಕೇಳಿ, ಗೌತಮಗಣಧರನಿಂದ ತೃಪ್ತಿಕರವಾದ ಉತ್ತರಗಳನ್ನು ಪಡೆದು ತೃಪ್ತನಾಗಿ, ತರುವಾಯ ಆ ಮತವನ್ನು ಸ್ವೀಕರಿಸಿ ಅದರ ನಿಸ್ಸೀಮ ಭಕ್ತರಲ್ಲಿ ಒಬ್ಬನಾದನೆಂದು ಹೇಳಲ್ಪಟ್ಟಿದೆ.

ಕೇವಲಜ್ಞಾನ ಸಿದ್ಧಿಯನ್ನು ಹೊಂದಿದ ಒಂದು ವರ್ಷವಾದ ತರುವಾಯ ಮಹಾವೀರಸ್ವಾಮಿಯು ತೀರ್ಥಂಕರರ ಅಮೌಲ್ಯಪದವಿಯನ್ನು ಪಡೆದನು. ಸಂಸಾರ ಸಮುದ್ರದ ದುರಂತವ್ಯಥೆಯಲ್ಲಿ ಸಿಕ್ಕು ನರಳುತ್ತಿರುವವರಿಗೆ ಗೊತ್ತಾದ ತಾರಣೋಪಾಯವನ್ನು ತೋರಿಸಿಕೊಟ್ಟು ಉದ್ಧರಿಸುವನಾರೋ ಆತನೇ ತೀರ್ಥಂಕರನೆನ್ನಿಸಿಕೊಳ್ಳುವನು. ಮಹಾವೀರಸ್ವಾಮಿಯು, ಜೈನಸಮಾಜದ ಉದ್ಧಾರಕ್ಕಾಗಿ ಸಾಧು, ಸಾಧ್ವಿ-ಶ್ರಾವಕ, ಶ್ರಾವಕಿ ಎಂಬ ತರಗತಿಗಳನ್ನು ಏರ್ಪಡಿಸಿ, ಆಯಾ ತರಗತಿಗಳಿಗೆ ತಕ್ಕ ನಿಬಂಧನೆಗಳನ್ನು ವಿಧಿಸಿಟ್ಟನು. ಸಮಸ್ತವನ್ನೂ ತ್ಯಾಗಮಾಡಿ ಧರ್ಮೋದ್ಧಾರಕ್ಕಾಗಿ ಹೊರಡಲು ಸಾಧ್ಯವಿರುವ ಪುರುಷನು ಸಾಧುವಾಗಿಯೂ ಸ್ತ್ರೀಯು ಸಾಧ್ವಿಯಾಗಿಯೂ ಪ್ರತಿಜ್ಞೆಯನ್ನು ತೊಟ್ಟು ಹೊರಡಬಹುದು.

ಅದಕ್ಕೆ ಸಾಧ್ಯವಿಲ್ಲದವರು, ಗೃಹಸ್ಥ-ಗೃಹಿಣಿಯರಾಗಿ ಗುರುವಿನಿಂದ ತೋರಿಸಲ್ಪಟ್ಟ ಸನ್ಮಾರ್ಗಗಳನ್ನು ಅವಲಂಬಿಸಿ ಸದ್ಗತಿಯನ್ನು ಪಡೆಯಬಹುದು.

ಮಹಾವೀರನು ತನ್ನ ಕೊನೆಯ ಚಾತುರ್ಮಾಸ್ಯವನ್ನು ಪಾಟ್ನಾನಗರಕ್ಕೆ ಸಮೀಪದಲ್ಲಿರುವ ಪಾವಾಪುರಿ ಎಂಬ ಗ್ರಾಮದಲ್ಲಿ ಕಳೆದನು. ಈ ಸ್ಥಳವು ಜೈನರ ಸುಪ್ರಸಿದ್ಧ ಯಾತ್ರಾಸ್ಥಳವಾಗಿದೆ. ಕೇವಲಿಯಾದ ಮೇಲೆ ಆರು ದಿನಗಳ ಕಡಮೆಯಾಗಿ ಮೂವತ್ತು ವರ್ಷಕಾಲ ಅಖಂಡ ಸಂಚಾರಮಾಡಿ ಆ ಮಹರ್ಷಿಯು ಧರ್ಮಪ್ರಚಾರ ಕಾರ್ಯವನ್ನು ನೆರವೇರಿಸಿದನು. ಆತನ ನಿರ್ವಾಣಕಾಲದಲ್ಲಿ ಸಮಸ್ತ ಅನುಯಾಯಿಗಳೂ, ಭರತಖಂಡದ ಮುಖ್ಯ ಮುಖ್ಯರಾಜರೂ ಇದ್ದರು. ತನ್ನ ನಿರ್ವಾಣ ಕಾಲವನ್ನು ಮುಂಚಿತವಾಗಿಯೇ ತಿಳಿದಿದ್ದ ಮಹಾವೀರಸ್ವಾಮಿಯು ಅಖಂಡ ಅರುದಿನಗಳವರೆಗೆ ಸಂಪರ್ಯಂಕವೆಂಬ ಆಸನದಲ್ಲಿ ಕುಳಿತು ಕೊನೆಯ ಐವತ್ತೈದು ಧರ್ಮ ಪ್ರಸಂಗಗಳಲ್ಲಿ ಬೋಧಿಸಿದನು. ಪಳಸೆಯದಿನ, ಅತ್ಯುತ್ತಮವಾದ ವಿಶಾಲವಾದ ಸಭಾಂಗಣದಲ್ಲಿ ನವರತ್ನಮಯ ಪೀಠದ ಮೇಲೆ ಕುಳಿತು, ಯಾರಿಂದಲೂ ಪ್ರಶ್ನಿಸಲ್ಪಡದೆ ಉಳಿದಿದ್ದ ಮೂವತ್ತಾರು ಪ್ರಶ್ನೆಗಳಿಗೆ ಸದುತ್ತರಗಳನ್ನಿತ್ತು ಸಕಲರ ಮನಸ್ಸಿನ ಸಂಶಯಗಳನ್ನೂ ನೀಗಿಸಿದನು. ಮಹಾವೀರನು ಹೀಗೆ ಆದಿನ ರಾತ್ರಿಯೆಲ್ಲಾ ಪ್ರಸಂಗಿಸುತ್ತಿರಲು, ಅರುಣೋದಯವಾಗುವ ವೇಳೆಗೆ ಶ್ರೋತೃಗಳೆಲ್ಲರೂ ನಿದ್ರೆಹೋಗಿಬಿಟ್ಟರು. ತನ್ನ ಕೊನೆಗಾಲವು ಸಮೀಪಿಸಿತೆಂಬುದನ್ನು ತಿಳಿದವನಾದ ಮಹಾವೀರಸ್ವಾಮಿಯು (ಕಾರ್ತಿಕ ಬಹುಳ ಚತುರ್ದಶಿ ರಾತ್ರಿಯು ಕಳೆದು ಪ್ರಾತಃಕಾಲವಾಗುತ್ತಿರುವಾಗ್ಗೆ) ಸಕಲ ಕರ್ಮಬಂಧಗಳನ್ನೂ ನಾಶಮಾಡಿಕೊಂಡು ಪುನರ್ಜನ್ಮರಹಿತ್ಯವಾದ ಪರಮಪದವನ್ನು ಹೊಂದಿದನು. ಆ ಸಂದರ್ಭದಲ್ಲೂ ಎಂದಿನಂತೆ ದೇವತೆಗಳೆಲ್ಲರೂ ಬಂದು ನಿರ್ವಾಣ ಕಲ್ಯಾಣವೆಂಬ ಮಹೋತ್ಸವವನ್ನು ನಡೆಸಿ ಆತನ ದಿವ್ಯಮಹಿಮೆಯನ್ನು ಕುರಿತು ಅಗಾಧವಾಗಿ ಹೊಗಳಿ ಮಂಜುಳಗಾನಮಾಡಿ ಹೊರಟುಹೋದರು.

---

## ಉಪಸಂಹಾರ.

---

ಮಹಾವೀರಸ್ವಾಮಿಯು ಲೋಕದಲ್ಲಿ ಒಟ್ಟು ಎಪ್ಪತ್ತೆರಡು ವರ್ಷಕಾಲ ಜೀವಿಸಿದ್ದನು. ಈ ವಯಸ್ಸಿನಲ್ಲಿ ಮೂವತ್ತುವರ್ಷಕಾಲ ಅರಮನೆಯಲ್ಲೂ, ಕೇವಲಜ್ಞಾನ ಪ್ರಾಪ್ತಿಯ ಪೂರ್ವದಲ್ಲಿ ಹನ್ನೆರಡು ವರ್ಷಕಾಲ ತಪಶ್ಚರ್ಯದಲ್ಲೂ, ಮಿಕ್ಕ ಮೂವತ್ತುವರ್ಷಗಳು ಧರ್ಮಪ್ರಚಾರ ಕಾರ್ಯದಲ್ಲೂ ಕಳೆಯಿತು. ಆತನು ನಿರ್ವಾಣವಾದ ದಿನ ಪ್ರಾತಃಕಾಲ ಉಚ್ಛತ್ತ ಶಿಷ್ಯೋತ್ತಮರೆಲ್ಲರೂ, ತಮ್ಮಮಧ್ಯದಲ್ಲಿದ್ದ ಅಂತಹ ಜ್ಞಾನ ದೀಪವು ಮರೆಯಾದುದರಿಂದ ಅದಕ್ಕೆ ಬದಲಾಗಿ ಬೇರೊಂದು ಜ್ಯೋತಿಯನ್ನು ಇಟ್ಟುಕೊಳ್ಳೋಣವೆಂದು ಬಗೆದು ಪ್ರಕಾಶಮಾನವಾದ ಹಲವು ದೀಪಗಳನ್ನಿಟ್ಟು ಬೆಳಗಿಸಿದರಂತೆ! ಇದೇ ದೀಪಾವಳಿ ಹಬ್ಬಕ್ಕೆ ಕಾರಣವೆಂದು ಜೈನಸಂಗಡದವರ ನಂಬಿಕೆಯಾಗಿದೆ.

ಈಗ್ಗೆ ಎರಡುಸಾವಿರದ ಐನೂರುವರ್ಷಗಳ ಕೆಳಗೆ ಅವತಾರವಾಡಿದ ನಮ್ಮ ಕಥಾನಾಯಕನೇ ಇಪ್ಪತ್ನಾಲ್ಕನೆಯ ತೀರ್ಥಂಕರನಾದಮೇಲೆ, ಆತನ ಹಿಂದೆ ಅವತರಿಸಿದ ಇತರ * ಇಪ್ಪತ್ಮೂರು ಮಂದಿ ತೀರ್ಥಂಕರರ ಕಾಲದಿಂದಲೂ ಲೋಕದಲ್ಲಿ ನಡೆದುಬಂದಿರುವ ಜೈನಮತವು ಆರ್ಷೇಯ

---

### * ಇಪ್ಪತ್ನಾಲ್ಕು ಮಂದಿ ತೀರ್ಥಂಕರರು.

1. ಋಷಭದೇವ ಅಥವ ಆದಿನಾಥ, 2. ಅಜಿತನಾಥ, 3. ಶಂಭವನಾಥ, 4. ಅಭಿನಂದನ, 5. ಸುಮತಿನಾಥ, 6. ಪದ್ಮಪ್ರಭು, 7. ಸುಪಾರ್ಶ್ವನಾಥ, 8. ಚಂದ್ರಪ್ರಭು, 9. ಸುವಿಧಿನಾಥ (ಪುಷ್ಪದಂತ) 10. ಶೀತಲನಾಥ, 11. ಶ್ರೀಯಾಂಶನಾಭಿ, 12. ವಾಶುಪೂಜ್ಯ, 13. ವಿಮಲನಾಥ, 14. ಅನಂತನಾಥ, 15 ಧರ್ಮನಾಥ, 16. ಶಾಂತಿನಾಥ, 17. ಕುಂಥುನಾಥ, 18. ಅರನಾಥ, 19 ಮಲ್ಲಿನಾಥ, 20. ಮುನಿಸುವ್ರತ, 21. ನಮಿನಾಥ. 22. ನೇಮಿನಾಥ, 23. ಪಾರ್ಶ್ವನಾಥ, 24 ಮಹಾವೀರ ಅಥವ ವರ್ಧಮಾನ.

ವಾದುದೆಂಬುದು ನಿಸ್ಸಂಶಯ ವಿಚಾರವು. ಜೈನಧರ್ಮವು, ಆರ್ಯಸಂಪ್ರದಾಯದಲ್ಲಿ ಬಂದ ವೇದಗಳನ್ನಾಗಲೀ ತ್ರಿಮೂರ್ತಿಗಳನ್ನಾಗಲೀ ಇತರ ಕರ್ಮಾದಿಗಳನ್ನಾಗಲೀ ಒಪ್ಪುವುದಿಲ್ಲವಾದರೂ, ಅವರಲ್ಲೂ ಸಮಾಜದ ಸುಸ್ಥಿತಿಗೆ ಆವಶ್ಯಕವಾದ ಸಕಲ ನಿಯಮಗಳೂ ಗೊತ್ತಾದ ಧರ್ಮಪದ್ಧತಿಗಳೂ ಏರ್ಪಟ್ಟಿವೆ. ಜೈನಸಂಗಡದಲ್ಲಿ ಗೃಹಸ್ಥಾಶ್ರಮ ಯತ್ಯಾಶ್ರಮಗಳೆಂಬೆರಡು ಆಶ್ರಮಗಳೇ ಇದ್ದರೂ, ಗೃಹಸ್ಥಾಶ್ರಮವು ಹಿಂದೂಧರ್ಮದಂತೆಯೇ ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರರೆಂಬ ನಾಲ್ಕು ವರ್ಣಗಳನ್ನಂಟಾಗಿದೆ. ಯಜನಯಾಜನ ಅಧ್ಯಯನ ಅಧ್ಯಾಪನ ದಾನಪ್ರತಿಗ್ರಹಾದಿ ವೃತ್ತಿಗಳಲ್ಲಿರುವವನು ಅಲ್ಲೂ ಬ್ರಾಹ್ಮಣನೆಂದು ವ್ಯವಹರಿಸಲ್ಪಡುತ್ತಾನೆ. ಅಸಿ ಕರ್ಮನಿರತನಾದವನು ಕ್ಷತ್ರಿಯನೆಂದು ವ್ಯವಹರಿಸಲ್ಪಡುತ್ತಾನೆ. ಕೃಷಿವಾಣಿಜ್ಯಾದಿಗಳಲ್ಲಿ ನಿರತನಾದವನು ವೈಶ್ಯನು. ಜೈನರಿಗೂ ಜಾತಕರ್ಮ ನಾಮಕರಣ ಉಪನಯನಾದಿ ಷೋಡಶಕರ್ಮಗಳುಂಟು. ದೇವಪೂಜಾ, ಗುರುಸೇವಾ, ಶಾಸ್ತ್ರಾಧ್ಯಯನ, ಇಂದ್ರಿಯ ನಿಗ್ರಹ, ಪ್ರಾಣಿದಯಾ, ಏಕಾಶನ-ಉಪವಾಸ ಮುಂತಾದ ತಪಸ್ಸುಗಳು ತ್ರಿವರ್ಣದವರೂ ಆಚರಿಸಬೇಕಾದ ನಿತ್ಯಕರ್ಮಗಳಲ್ಲಿ ಸೇರಿದುವುಗಳಾಗಿವೆ. ಇವೆಲ್ಲವುಗಳಿಗಿಂತಲೂ ಜೈನರಿಗೆ ಪರಮಧರ್ಮವೆನಿಸಿರುವುದು ಅಹಿಂಸಾವ್ರತಪಾಲನೆ. ರಾತ್ರಿಯ ಅಂಧಕಾರದಲ್ಲಿ ಅಜಾಗರೂಕತೆಯಿಂದ ಹುಳುಹುಪ್ಪಟೆಗಳಿಗೆ ಹಿಂಸೆಯಾಗಬಹುದೆಂಬುದೇ, ಜೈನರು ರಾತ್ರಿಭೋಜನವನ್ನು ತ್ಯಾಗಮಾಡಿ ಸೂರ್ಯಾಸ್ತಮಯಕ್ಕೆ ಮುಂಚಿತವಾಗಿಯೇ ರಾತ್ರಿಭೋಜನವನ್ನು ತೀರಿಸಿಬಿಡುವ ಸಂಪ್ರದಾಯಕ್ಕೆ ಕಾರಣವೆಂದು ತಿಳಿಯಬರುತ್ತೆ.

ಜೈನಸಿದ್ಧಾಂತವೂ ವೈದಿಕ ಸಿದ್ಧಾಂತದಂತೆಯೇ ಅಪಾರವಾಗಿ ಬೆಳೆದು, ಸಕಲವಿಧಗಳಲ್ಲೂ ಅರ್ಥವತ್ತಾದ ವಿಧಿಗಳಿಂದ ಕೂಡಿದ್ದಾಗಿದೆ. ಜೈನಮತವು ಅತಿಶಯ ವಿಚಾರಯುಕ್ತಮತವೆಂಬುದು ನಿರ್ವಿವಾದವು. ಮುನ್ನುಡಿಯಲ್ಲಿ ಹೇಳಿದಂತೆ, ಜೈನಸಿದ್ಧಾಂತದಲ್ಲಿ ಸಾಮಾನ್ಯವಾಗಿ ಜನರು ಹೇಳಿಕೊಳ್ಳುವಂತೆ, ದೇವರಿಲ್ಲವೆಂಬುದು ಸುಳ್ಳು. ಆದರೆ ಆ ದೇವರು ಕೇವಲ ತನ್ನ ಕಲ್ಯಾಣಗುಣಗಳ ಮೂಲಕವೇ ವ್ಯಕ್ತನಾಗಬೇಕಲ್ಲದೆ, ಹಿಂದೂ

ಧರ್ಮದಲ್ಲಿರುವಂತೆ ಹರಿಹರ-ರಾಮಕೃಷ್ಣಾದಿಗಳಂತೆ ಸಗುಣಮೂರ್ತಿಗಳ ನಾಮರೂಪಗಳಿಂದಲ್ಲ-ಅಷ್ಟೆ! ಜೈನಸಿದ್ಧಾಂತವು ಜ್ಞಾನದರ್ಶನ ರೂಪವಾದ ಚೈತನ್ಯಗುಣವುಳ್ಳ ವಸ್ತುವು ಜೀವವೆಂದೂ ಅಂತಹ ಜೀವಿಗಳು ಅನಂತಾನಂತಗಳೆಂದೂ ಒಪ್ಪುತ್ತದೆ. ಅಂತಹ ಜೀವಿಗಳಲ್ಲಿ ಮುಕ್ತ ಜೀವರು, ಭವಬಂಧನವನ್ನು ನೀಗಿಕೊಂಡವರು. ಸಂಸಾರಿ ಜೀವಿಗಳು ಜನನಮರಣಗಳ ಕೋಟಲೆಗೆ ಸಿಕ್ಕಿದವರು. ಈ ಜೀವರು ಜನ್ಮಜನ್ಮಾಂತರಾರ್ಜಿತವಾದ ಕರ್ಮಗಳು ಫಲಾನುಭವದಿಂದ ತೀರುತ್ತಾ ಸಾಗಿದಂತೆಲ್ಲಾ ಶುದ್ಧರಾಗುವರು. ಜೀವಾತ್ಮನು ಈ ಕರ್ಮಭಾರವನ್ನು ಕಳೆದುಕೊಂಡು ಮುಕ್ತನಾಗಬೇಕಾದರೆ, ನಿರ್ದಿಷ್ಟವಾದ ತಪಸ್ಸು, ಧ್ಯಾನ, ಅಹಿಂಸಾ ವ್ರತಾಚರಣೆ, ಋಜುಮಾರ್ಗಗಮನ ಮುಂತಾದವುಗಳು ಆವಶ್ಯಕವಾಗಿರುತ್ತವೆ. ಜೈನಧರ್ಮದಲ್ಲಿ ಮೂಢನಂಬಿಕೆಗೆ ಲೇಶಮಾತ್ರವೂ ಎಡೆಯಿಲ್ಲ. ಸಮಸ್ತವೂ ತೀರ್ಥಂಕರರಿಂದ ವಿಚಾರಯುಕ್ತವಾಗಿ ನಿರ್ದಿಷ್ಟಪಡಿಸಲ್ಪಟ್ಟ ವಿಧಿಗಳಾದ್ದರಿಂದ ಮಾನವಧರ್ಮದ ಸುರಕ್ಷತೆಗೆ ಯಾವ ಭಾಗದಲ್ಲೂ ಕುಂದಕವನ್ನುಂಟು ಮಾಡುವಂತಿಲ್ಲ. ಜನತೆಯಲ್ಲಿ ಶಾಂತಿಸಮಾಧಾನಗಳನ್ನುಹರಡಿ ತನ್ಮೂಲಕ ಸಾಧಿಸಲ್ಪಡಬೇಕಾದ ವಿಶ್ವಶಾಂತಿಯ ಮಹತ್ಕಾರ್ಯಕ್ಕೆ ಅಹಿಂಸಾ ವ್ರತವನ್ನೇ ತಳಮೂಲ ವ್ರತವನ್ನಾಗಿ ಉಳ್ಳ ಜೈನಧರ್ಮವು ಅತಿಶಯ ಸಹಕಾರಿಯಾಗಬಲ್ಲುದು.

'ಸಕಲ ಮತಗಳೂ ಮಾನವನನ್ನು ಗೊತ್ತಾದ ಒಂದು ಮಾರ್ಗದಲ್ಲಿ ಕರೆದೊಯ್ದು ಮೋಕ್ಷಸಾಮ್ರಾಜ್ಯದ ಗಮ್ಯಸ್ಥಾನವನ್ನು ಸೇರಿಸಲುಳ್ಳ ಸುಪಥಗಳು' ಎಂದು ಶ್ರೀರಾಮಕೃಷ್ಣ ಪರಮಹಂಸರು ಹೇಳಿದ ಸೂಕ್ತಿಯನ್ನು ಗಮನಿಸಿ, ಉದಾರಭಾವದಿಂದ ವರ್ತಿಸಬೇಕಾದ ಆವಶ್ಯಕವು ಈಗ ಭಾರತದೇಶಸ್ಥಿತಿಯಲ್ಲಿ ಅತ್ಯಾವಶ್ಯಕವೆನ್ನಿಸಿದೆ. ಪೂರ್ವಾಚಾರ್ಯರ ಅಗಾಧ ಪರಿಶ್ರಮಗಳಿಂದ ಸ್ಥಾಪಿತವಾದ ಪ್ರತಿಯೊಂದು ಮತದಲ್ಲೂ ಸತ್ಯವಿದೆಯೆಂಬುದು ಸುಳ್ಳಲ್ಲ. ಒಂದರಿಂದ ಮತ್ತೊಂದು ಅಲ್ಪಸ್ವಲ್ಪ ಭಿನ್ನವಾಗಿರತಕ್ಕದು ಲೋಕಸ್ವಭಾವ. ಆದರೆ ವಿಚಾರಪರರು ಸಕಲ ಮತಗಳಲ್ಲಿರುವ ಸಾರವಿಚಾರಗಳನ್ನು ಸ್ವೀಕರಿಸಿ, ತನ್ಮೂಲಕ ವಿಶ್ವಪ್ರೇಮವನ್ನು ಬೆಳೆಸುವ

ಪ್ರಯತ್ನದಲ್ಲಿ ನಿರತರಾಗಬೇಕಲ್ಲದೆ, ಕೂಪಸ್ಥಮಂಡೂಕಗಳಂತೆ, ತಮ್ಮ ಕೋಟೆರದ ಹೊರಗಿರುವುದೆಲ್ಲವೂ ನರಕವೆಂಬ ಭಾವನೆಯನ್ನುಂಟಾಗಿ ಪರಮತ ದ್ವೇಷಮಾಡುವ ಸ್ವಭಾವವು ಮಾನವನ ಯೋಗ್ಯತೆಗೆ ಬಹು ಹೇಯವಾದ ಕಾರ್ಯವು ಭಾರತದೇಶದ ಜನತೆಯು ನಮ್ಮ ಕಥಾನಾಯಕನಂತಹ ಮಹಾ ವಿಭೂತಿಗಳ ದಿವ್ಯಾದರ್ಶಗಳನ್ನು ಲಕ್ಷ್ಯದಲ್ಲಿಟ್ಟು ಪರಸ್ಪರ ದ್ವೇಷಾಸೂಯೆಗಳನ್ನು ಸೀಗಿ, ವಿಶಾಲದೃಷ್ಟಿಯನ್ನುಂಟಾಗಿ ದಿನದಿನಕ್ಕೆ ಅಭಿವೃದ್ಧಿಯಾಗುವಂತೆ ಲೋಕರಕ್ಷಾನಿರತನಾದ ಸರ್ವೇಶ್ವರನು, ಭಾರತೀಯರಲ್ಲಿ ಪ್ರೇರಣೆಯನ್ನುಂಟು ಮಾಡಲಿ. ಅನುಗ್ರಹಿಸಲಿ, ಆಶೀರ್ವದಿಸಲಿ!

ತಥಾಸ್ತು.



ಸುಬೋಧ ಮುದ್ರಣಾಲಯ, ಬೆಂಗಳೂರು ನಗರ.—೧೯೩೨

॥ ಶ್ರೀರಾಮ ಸಹಾಯಂ ॥

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸ ಪುಸ್ತಕಾವಳಿ)

---

**ಮುನ್ನುಡಿ:—**

ದಿವಾನ್ ಸಿ. ರಂಗಾಚಾರ್ಲುಯವರು, ನಮ್ಮ ಪ್ರಕೃತ ಕಥಾನಾಯಕರು. ಮೈಸೂರು ಸಂಸ್ಥಾನವು, ಭಾರತದೇಶದ ಇತರ ದೇಶೀಯ ಸಂಸ್ಥಾನಗಳಿಗಿಂತಲೂ ಯಾವ ಭಾಗದಲ್ಲಾದರೂ ಉತ್ತಮವೆನಿಸಿಕೊಂಡು, ಪ್ರಜಾಸಮ್ಮತವಾದ ರಾಜ್ಯಪಾಲನೆಯ ಸರ್ವೋತ್ತಮ ತತ್ವವನ್ನು ಕಣ್ಣೆದುರಿಗಿಟ್ಟುಕೊಂಡು '**ಮಾದರಿ ಸಂಸ್ಥಾನ**'ವೆಂದು ಕರೆಯಲ್ಪಡುವಂತಹ ಪ್ರಶಸ್ತಿಗೆ ಪಾತ್ರವಾಗಿ, ಚರಿತ್ರಪ್ರಸಿದ್ಧವಾಗಿ, ಇದ್ದ ಸ್ಥಿತಿಯು ಎಂದಾದರೂ ಅದಕ್ಕೆ ಪ್ರಾಪ್ತಿಸಿದ್ದರೆ, ಅದು ನಮ್ಮ ಕಥಾನಾಯಕರಿಂದಲೇ ಲಭ್ಯವಾಗಿತ್ತೆಂದು ಹೇಳಲು ಲೇಶಮಾತ್ರವೂ ಶಂಕಿಸಬೇಕಾದುದಿಲ್ಲ. ವೃದ್ಧ ಮುಮ್ಮಡಿ ಕೃಷ್ಣರಾಜ ಒಡೆಯರು ದಿವಂಗತರಾಗಿ, ರಾಜ್ಯಕ್ಕೆ ಪೂರ್ವವಯಸ್ಕರಾದ ಶ್ರೀ ಚಾಮರಾಜ ಒಡೆಯರು ಪ್ರಭುಗಳಾಗಿ ಏರ್ಪಟ್ಟ ಆ ಸಂಧಿಕಾಲದಲ್ಲಿ ನಮ್ಮ ಕಥಾನಾಯಕರಂತಹ ನಿಸ್ಪೃಹರೂ, ಕರ್ತವ್ಯನಿಷ್ಠರೂ, ಸ್ವಾರ್ಥತ್ಯಾಗಿಗಳೂ, ರಾಜನೀತಿ ವಿಶಾರದರೂ ದೊರೆತಿದ್ದುದು ಮೈಸೂರು ದೇಶದ ಸುಕೃತವಿಶೇಷವೆನ್ನಬೇಕು. ರಾಜ್ಯವೆಂಬ ರಥದ ಸಾರಥಿತ್ವವು ಪುನಃ ಅಂತಹ ಮಹನೀಯರ ಕೈಗೆ ಎಂದಿಗೆ ದೊರೆಯುವುದೋ, ಅಂದಿಗೆ ಅದರ ಸ್ಥಿತಿಗತಿಗಳೂ ಉತ್ತಮಗೊಳ್ಳುವುವು.

ರಂಗಾಚಾರ್ಲುಯವರು ಬಹುಸಣ್ಣ ನೌಕರಿಯಿಂದ ಅಧಿಕಾರಸ್ಥಾನದ ಅತ್ಯುನ್ನತ ಶಿಖರಕ್ಕೆ ಏರಿದ ಪ್ರತಿಭಾಶಾಲಿಗಳು. ಅವರ ಅಭಿವೃದ್ಧಿಗೆ ಅವರಲ್ಲಿ ಮೂರ್ತಿಮತ್ತಾಗಿದ್ದ ರಾಜನೀತಿಯ ಮೂಲತತ್ವಗಳೇ ಕಾರಣವೆಂ

ದರೆ ಅದರಲ್ಲಿ ಅತಿಶಯೋಕ್ತಿಯಿಲ್ಲ. ಆದರೆ ಚಿಕ್ಕ ಉದ್ಯೋಗದಿಂದ ಹೆಚ್ಚು ಹೆಚ್ಚು ಸಂಬಳಗಳನ್ನು ಗಳಿಸುವ ದೊಡ್ಡ ಉದ್ಯೋಗಗಳಿಗೆ ಏರಿದವರೆಲ್ಲರೂ -ಏರುವವರೆಲ್ಲರೂ ರಾಜನೀತಿ ವಿಶಾರದರಾಗಿಯೇ ಇರುವರೆಂದು ಎಣಿಸಲು ಸಾಧ್ಯವಿಲ್ಲ. ಹಾಗೆ ಅಭಿವೃದ್ಧಿಗೆ ಬರುವುದಕ್ಕೆ ಬೇರೆ ಹಲವು ಮಾರ್ಗಗಳೂ ಉಂಟು. ತಮ್ಮ ಮೇಲ್ಪಟ್ಟ ಅಧಿಕಾರಿಗಳಿಗೆ ಅನನ್ಯಭಕ್ತರಾಗಿ ನಡೆದು, ಅವರು 'ಕತ್ತಲೆಂದರೆ ಕತ್ತಲೆಂದು, ಬೆಳಕೆಂದರೆ-ಬೆಳಕೆಂದು', ದೊಡ್ಡ ಪದವಿಗಳಿಗೇರುವವರು ಕೆಲವರು. ಜಾತಿಮತಗಳ ಕಾರಣಗಳನ್ನು ಮುಂದು ಮಾಡಿಕೊಂಡು, ಸುತ್ತುಮುತ್ತಲೂ ಇರುವವರ ಬಾಯಿ ಬಡಿದು, ಇಲಿಯ ಮೇಲೆ ಬೆಕ್ಕನ್ನೂ, ಬೆಕ್ಕಿನ ಮೇಲೆ ನಾಯಿಯನ್ನೂ 'ಛೂ' ಬಿಟ್ಟು-ಅವವು ಬಡಿದಾಡಿ-ಕಚ್ಚಾಡುತ್ತಿರುವ ಸಂಧಿಕಾಲವನ್ನು ಕಾಯ್ದು ಮೇಲಕ್ಕೇರುವ ಸ್ವಾರ್ಥಸಾಧಕರು ಕೆಲವರು. ವಿದ್ಯೆ, ನ್ಯಾಯನಿಷ್ಠೆಗಳು, ಸೇವಾಧರ್ಮದ ಪರಿಜ್ಞಾನ, ಕರ್ತವ್ಯನಿಷ್ಠೆ, ಮುಂತಾದುವುಗಳ ಬೆಂಬಲವಿಲ್ಲದಿದ್ದರೂ, ಕೇವಲ ಅಧಿಕಾರದ ಒಣದರ್ಪವನ್ನು ಮಾತ್ರ ಪ್ರಕಟಿಸಿ, ಅಜ್ಞರಾದ ಬಡಪಾಯಿಗಳನ್ನು ಬೆದರಿಸಿ, ಅಷ್ಟರಿಂದಲೇ ಗಟ್ಟಿಗರೆನ್ನಿಸಿಕೊಂಡು-ಬಂಡವಾಳವಿಲ್ಲದ ಈ ಬಡಾಯಿಯನ್ನೇ ಆಶ್ರಯಿಸಿ-ಉನ್ನತ ಅಧಿಕಾರಗಳನ್ನು ಏರುವವರು ಕೆಲವರು. ಪ್ರಬಲರೂ ಬಾಯಾಳಿಗಳೂ ಆದ ಕೆಲ ಅಧಿಕಾರಿಗಳ ಮನೋವೃತ್ತಿಯನ್ನು ಅನುಸರಿಸಿ ನಡೆದು, ಅವರ ಹೇಯ ಕಾಮನೆಗಳನ್ನು ಪೂರ್ತಿಗೊಳಿಸುವಲ್ಲಿ ಸಹಾಯಕರಾಗಿ ವರ್ತಿಸಿ, ತನ್ಮೂಲಕ ಕ್ರಮಕ್ರಮವಾಗಿ ಉನ್ನತಾಧಿಕಾರಗಳನ್ನು ಪಡೆದವರು ಕೆಲವರು. ಹೀಗೆ ವಿಚಿತ್ರವಾದ ಇನ್ನೂ ಹಲವು ಮಾರ್ಗಗಳುಂಟು. ಕೇವಲ ಪಟ್ಟಣಶೃಂಗಾರ, ತೋಟ, ಸಭಾಂಗಣ ಮುಂತಾದುವುಗಳ ಅಲಂಕಾರ, ಸರಬರಾಯಿ ಮಾಡುವಿಕೆ ಮುಂತಾದ ಕೆಲಸಗಳನ್ನು ಮಾಡುವ ಕಾರಣಗಳನ್ನು ಆಧಾರವಾಗಿಟ್ಟುಕೊಂಡು ವಿಶೇಷ ಸಂಬಳದ ಅಧಿಕಾರ-ಪದವಿಗಳನ್ನು ಅಲಂಕರಿಸುವವರೂ ಉಂಟು. ಆದರೆ ಪಾಪ-ಹೊಟ್ಟೆಯ ಪಾಡಿಗಾಗಿ ಈ ವೇಷಗಳನ್ನೆಲ್ಲ ಧರಿಸುವವರು ರಾಜನೀತಿಜ್ಞರೆನ್ನಿಸಿಕೊಳ್ಳಬಲ್ಲರೆ ? ರಸವಿಳಿದು ಹೋದಮೇಲೆ ಸಪ್ಪೆಬೀಳುವ ಕಬ್ಬಿನಂತೆ, ಅಧಿಕಾರ ತಪ್ಪಿದ ಮಾರನೆಯ ದಿನವೇ ಅವರು ಜನಮನದಿಂದ ಮರೆಯಾಗುವರು. ಅವರ ದಂಭದರ್ಪಗಳೆಲ್ಲವೂ ಅಣಗಿಹೋಗುವುವು.

ಮಾತ್ರವಲ್ಲ-ಪದವಿಯಿದ್ದ ಎರಡುದಿನ ಅಹಂಕಾರದಿಂದ ಉರಿದುಬಿದ್ದು, ಬಡಜನರ ಬಾಯಿಬಡಿದು, ಗೋಳುಗುಟ್ಟಿಸಿದ ಪಾಪಾತ್ಮ-ನೆಂದು ಸಕಲರ ದೂಷಣೆಗೂ ಪಾತ್ರರಾಗುವರು. ಆದರೆ ಯಾರು ಈ ಲೋಕಸೇವಾ ಕಾರ್ಯವನ್ನು ಭಗವತ್ಸೇವೆಯೆಂಬ ಸ್ಥಿರನಂಬಿಕೆಯಿಂದ ಕೈಕೊಂಡು, ನಿಸ್ವಾರ್ಥತೆಯಿಂದ-ಮನಸ್ಸಿನಲ್ಲಿ ಲೇಶಮಾತ್ರವೂ ಕಳಂಕಗೊಳ್ಳದೆ ನಡೆದಿರುವರೋ, ಅವರಿಗೆ ಮಾತ್ರವೇ ಜೀವಿತದ ಸಂಧ್ಯಾಕಾಲವಾದ ವೃದ್ಧಾಪ್ಯದಲ್ಲಿ ಚಿರಶಾಂತಿಯು ಲಭಿಸುವುದು. ಅವರ ಕೀರ್ತಿಯು ಮಾತ್ರ ಆಚಂದ್ರಾರ್ಕವಾಗಿರುವುದು. ಲೋಕವು ಅವರನ್ನು ಮಾತ್ರವೇ ಮಹನೀಯರೆಂದೂ-ಮಹಾತ್ಮರೆಂದೂ ಎಂದೆಂದಿಗೂ ಜ್ಞಾಪಿಸಿಕೊಳ್ಳುತ್ತ ಗೌರವಿಸುವುದು.

ಭಗವದ್ದತ್ತವಾದ ಈ ರಾಜ್ಯಾಧಿಕಾರವೆಂಬುದು ಅಮೌಲ್ಯವಾದ ಸ್ಥಾನವು ಸಹಸ್ರಾರುಮಂದಿ-ಲಕ್ಷಾಂತರಮಂದಿ ಮಾನವಪ್ರಾಣಿಗಳ ಕ್ಷೇಮಚಿಂತನೆಯ ಮಹತ್ತಾದ ಜವಾಬುದಾರಿಯನ್ನು ಉಂಟಾಗಿರುವ ಈ ಅಧಿಕಾರವೆಂಬ ಸ್ಥಾನವನ್ನು ಬಹು ಪೂಜ್ಯಭಾವದಿಂದ ಸ್ವೀಕರಿಸಿ, ಪಾಪಭೀತಿಯನ್ನು ಮನಸ್ಸಿನಲ್ಲಿಟ್ಟುಕೊಂಡು ನಿರ್ವಹಿಸಿ, ಮನುಷ್ಯನು ಸದ್ಗತಿಗೆ ಸಾಧನೆಯನ್ನು ಉಂಟುಮಾಡಿಕೊಳ್ಳಬೇಕಲ್ಲದೆ-ಎರಡುದಿನದ ಅಧಿಕಾರಕ್ಕಾಗಿ ತಲೆತಿರುಗಿ, ತನ್ನ ಕಾಲಮೇಲೆ ತಾನೇ ಕಲ್ಲನ್ನೆತ್ತಿ ಹಾಕಿಕೊಂಡಂತೆ-ಮನಸ್ಸಾಕ್ಷಿಗೆ ವಿರೋಧವಾಗಿ ನಡೆದು, ತನ್ಮೂಲಕ ಅಗಾಧ ಪಾಪಸಾಧನೆಗೆ ಅವಕಾಶವನ್ನುಂಟು ಮಾಡಿಕೊಳ್ಳಬಾರದು.

ನಮ್ಮ ಕಥಾನಾಯಕರು, ತಮ್ಮ ಸ್ವಲ್ಪದಿನದ ಅಧಿಕಾರದಲ್ಲೇ ನಮ್ಮ ಸಂಸ್ಥಾನಕ್ಕೆ ಮಹತ್ತಾದ ಪ್ರಯೋಜನಗಳನ್ನು ಉಂಟುಮಾಡಿದರು. ಅವರು ಹಾಕಿಕೊಟ್ಟ ಮೇಲ್ಪಙ್ಕ್ತಿಯನ್ನೇ ಅನುಸರಿಸಿ, ಅವರ ತರುವಾಯ ಬಂದ ಸರ್. ಕೆ. ಶೇಷಾದ್ರಿಐಯ್ಯರರೂ ಇದರ **'ಮಾದರಿ ಸಂಸ್ಥಾನ'** ವೆಂದೆಂಬ ಕೀರ್ತಿಯನ್ನು ರಕ್ಷಿಸಿಕೊಂಡಿದ್ದರು. ತನ್ನ ಪೂರ್ವಿಕರು ಅಗಾಧ ಶ್ರಮಪಟ್ಟು ಗಳಿಸಿದ್ದ ವಂಶಗೌರವವನ್ನು ಕಾಪಾಡಿಕೊಳ್ಳುವುದು ಗೃಹಸ್ಥನಿಗೆ ಹೇಗೆ ಕರ್ತವ್ಯವೋ, ರಾಷ್ಟ್ರಗೌರವವನ್ನು ಕಾಪಾಡಿಕೊಳ್ಳುವುದೂ ಹಾಗೆಯೇ, ರಾಷ್ಟ್ರಾಧಿಪರ ಕರ್ತವ್ಯವಲ್ಲವೆ? ಸಂಸ್ಥಾನದ ಧವಳಕೀರ್ತಿ

ಯು ಮಾಸದಂತೆ ಹಾಗೆ ಕಾಪಾಡಿಕೊಳ್ಳಲು ಆವಶ್ಯಕವಾದ ಶಕ್ತಿ ಸಾಮರ್ಥ್ಯಗಳೂ, ಕರ್ತವ್ಯನಿಷ್ಠೆಯೂ, ನಿಷ್ಪಕ್ಷಪಾತತೆಯೂ-ಪ್ರಭುಗಳಲ್ಲೂ, ರಾಜ್ಯಾಧಿಕಾರಿಗಳಲ್ಲೂ ಪ್ರಕಟವಾಗುವಂತೆ ಸರ್ವೇಶ್ವರನು ಅನುಗ್ರಹಿಸಲಿ!

ಸರ್ಕಾರದ ಉದ್ಯೋಗಸ್ಥರು, ಜೀವನೋಪ ಸಾಧನವಾಗಿ ದಿನಕ್ಕೆ ಕೆಲವು ಗಂಟೆಗಳಕಾಲ ದುಡಿದುಬಿಡುವುದು ಮಾತ್ರವೇ ತಮ್ಮಕರ್ತವ್ಯವು ಎಂದು ತಿಳಿವುದಕ್ಕಿಂತಲೂ, ಅದನ್ನು ತಮ್ಮ ಪಾಲಿನ ದೇಶಸೇವೆ ಎಂಬ ಭಾವನೆಯನ್ನು ಕೈಕೊಂಡು ನಿರ್ವಹಿಸುವುದರಿಂದ ವಿಶೇಷ ಪ್ರಯೋಜನಗಳನ್ನು ಹೊಂದಬಹುದು. 'ದೇಶಸೇವೆ ಮಾಡಬೇಕೆಂಬುವವರು, ತಮ್ಮವೃತ್ತಿ ವ್ಯವಹಾರಗಳನ್ನೆಲ್ಲ ಬಿಟ್ಟುಕುಳಿತು, ತಮ್ಮ ಸರ್ವಸ್ವವನ್ನೂ ಒಪ್ಪಿಸಿ, ಬೀದಿಗೆ ಹೊರಡಬೇಕು-ಇಲ್ಲವಿದ್ದರೆ ದೇಶಸೇವಾ ಕಾರ್ಯಮಾಡಲು ಸಾಧ್ಯವಿಲ್ಲ' ಎಂದು ಭಾವಿಸಬಾರದು. ಲೌಕಿಕವ್ಯವಹಾರದ ವಿವಿಧಸ್ಥಾನಗಳಲ್ಲಿರುವವರು ತಮ್ಮಿಂದ-ತಮ್ಮಸ್ಥಾನದಿಂದಲೇ ದೇಶಕ್ಕೂ ದೇಶೀಯರಿಗೂ, ಯಾವ ಬಗೆಯ ಉಪಕಾರವನ್ನು-ಎಷ್ಟುಸ್ವಲ್ಪ ಪ್ರಮಾಣದಿಂದಲಾದರೂ ಆಗಲಿ, ಮಾಡಲು ಸಾಧ್ಯವಿರುವುದು ಎಂಬುದನ್ನು ತೀವ್ರವಾಗಿ ಯೋಚಿಸಿ, ಅದರಂತೆ ನಿರಲಸಿಕೆಯಿಂದ ನಡೆಯಲು ಪ್ರಯತ್ನಿಸಿದರೆ, ತನ್ಮೂಲಕ ದೇಶದಲ್ಲಿ ಅಗಾಧಕಾರ್ಯವು ನಡೆಯಲು ಅವಕಾಶವುಂಟು. ನಮ್ಮ ಕಥಾನಾಯಕರು ಸರ್ಕಾರದ ಕೆಲಸವನ್ನು-ಪ್ರಜಾಪಾಲನೆಯ ಈ ಮಹತ್ಕಾರ್ಯವನ್ನು ದೇಶಸೇವೆಯೋ ಈಶಸೇವೆ ಎಂಬ ಭಾವನೆಯನ್ನು ಮನಸ್ಸಿನಲ್ಲಿಟ್ಟು ನಿರ್ವಹಿಸಿದ ಮಹನೀಯರು. ಇವರ ಈ ಸಂಕ್ಷಿಪ್ತ ಜೀವನ ಚರಿತ್ರೆಯನ್ನೂ ಗ್ರಂಥಮಾಲಾ ವಾಚಕಮಹಾಶಯರು ಆದರದಿಂದ ಸ್ವೀಕರಿಸಿ, ನಮ್ಮ ಸೇವಾಕಾರ್ಯವನ್ನು ಪ್ರೋತ್ಸಾಹಿಸಬೇಕೆಂದು ಪ್ರಾರ್ಥಿಸುತ್ತೇವೆ.

ಬೆಂಗಳೂರು ನಗರ

ತಾ|| ೨೪-೧೧-೧೯೩೦

ಇತಿ ಸುಜನ ವಿಧೇಯ,

ಯಂ. ರಾಮರಾವ್.

ಸುಬೋಧ ಮುದ್ರಣಾಲಯ, ಬೆಂಗಳೂರು ನಗರ.



ಮೈಸೂರಿನ ಸುಪ್ರಸಿದ್ಧ ದಿವಾನ್ **ರಂಗಾಚಾರ್ಲುಯವರು**

ಶ್ರೀರಾಮ ಸಹಾಯಂ

ವೈಸೂರಿನ ಸುಪ್ರಸಿದ್ಧ ದಿವಾನ್

# ರಂಗಾಚಾರ್ಲುರವರು.

ಅಧ್ಯಾಯ ೧. 'ಜನನ, ಬಾಲ್ಯ, ವಿದ್ಯಾಭ್ಯಾಸ'

ಆರ್ಷೇಯವಾಗಿ ಯದುವಂಶದ ರಾಜಶಿರೋಮಣಿಗಳಿಂದ ಪರಿಪಾಲಿಸಲ್ಪಡುತ್ತಾ ಬಂದ ಈ ವೈಸೂರು ದೇಶವು, ನಮ್ಮ ಮಾತೃಭೂಮಿಯಾದ ಭಾರತದೇಶಕ್ಕೆ ಸೇರಿದ, ದೇಶೀಯ ಸಂಸ್ಥಾನಗಳಲ್ಲಿ ಸುಪ್ರಸಿದ್ಧವಾದುದು, ಸರ್ವಶ್ರೇಷ್ಠವಾದುದು, ಸರ್ವಸಂಪತ್ತುಗಳಿಗೂ ಆಶ್ರಯಿಭೂತವಾದುದು. ಈ ದೇಶದ ಭೂಪ್ರದೇಶವು ಫಲವತ್ತಾದುದು. ವಾಯುಗುಣವು ಶೀತೋಷ್ಣಗಳ ಸಮಸ್ಥಿತಿಯಿಂದ ಅತಿಶಯ ಹಿತಕರವಾದುದು. ದೇಶದ ಸಮಸ್ತಭಾಗದಲ್ಲೂ ಕೆರೆಕುಂಟೆಗಳೂ, ನದಿಗಳೂ, ನದಿಗಳಿಂದ ತೆಗೆಯಲ್ಪಟ್ಟ ಕಾಲುವೆಗಳೂ ವಿಪುಲವಾಗಿದ್ದು, ಜಲಾಸರಿಯನ್ನೊದಗಿಸಿ ಹೊಲಗದ್ದೆ ತೋಟಗಳ ವ್ಯವಸಾಯಕ್ಕೆ ವಿಶೇಷ ಅನುಕೂಲತೆಯನ್ನು ಉಂಟುಮಾಡಿವೆ. ಈ ದೇಶದ ಕಾಡುಗಳಲ್ಲಿ ತೇಗದಮರಗಳೂ ಬಹುಬೆಲೆಯ ಶ್ರೀಗಂಧ ವೃಕ್ಷಗಳೂ ಮತ್ತು ನೇರಳೆ ಹೊನ್ನೆ ಹಲಸು ಮುಂತಾದ ಇತರ ಅನೇಕ ಜಾತಿಯ ವೃಕ್ಷಗಳೂ ಲೆಕ್ಕವಿಲ್ಲದಷ್ಟು ಸಂಖ್ಯೆಯಿಂದ ಬೆಳೆಯುತ್ತವೆ. ಭೂಮಿಯು ಫಲವತ್ತಾದುದು ಮಾತ್ರವಲ್ಲ, ಚಿನ್ನ, ಕಬ್ಬಿಣ ಮುಂತಾದ ಖನಿಜಗಳನ್ನೂ ವಿಶೇಷ ಪ್ರಮಾಣದಿಂದ ಒಳಗೊಂಡುದು. ಇವುಗಳ ಸಂಬಂಧದಿಂದಲೂ, ಶ್ರೀಗಂಧವೇ ಮುಂತಾದ ಉದ್ಭಿಜ್ಜಗಳ ಸಂಬಂಧದಿಂದಲೂ ದೇಶವು ಅನೇಕ ಬಗೆಯ ಕೈಗಾರಿಕೆಗಳಿಗೂ ಮಾತೃಸ್ಥಾನವಾಗಿದೆ. ಭಗವಾನನು, ಈ ದೇಶದಮೇಲೆ ಪರಮಾನುಗ್ರಹವಿಟ್ಟು ಪ್ರಸಾದಿಸಿರುವ ಸೌಭಾಗ್ಯಗಳು ಇಷ್ಟೇಅಲ್ಲ. ಶಿವಸಮುದ್ರ, ಜೋಗ ಮುಂತಾದ ಸ್ಥಳ

ಗಳು ಪ್ರಕೃತಿದೇವತೆಯು ಲೀಲಾಕ್ಷೇತ್ರವೋ ಎಂಬಂತೆ, ಪ್ರಪಂಚದಲ್ಲೇ ಅದ್ಭುತವೆನ್ನಿಸಿರುವ ಜಲಪಾತಗಳನ್ನುಂಟಾಗಿ ಮನೋಹರವಾದ ನಿಸರ್ಗ ಸೌಂದರ್ಯದಿಂದ ಸುಶೋಭಿತವಾಗಿವೆ. ದೇಶದಲ್ಲಿ ಅಲ್ಲಲ್ಲೇ, ಬೆಟ್ಟಗುಡ್ಡಗಳು, ಕೆರೆತೊರೆಗಳು, ಎಲ್ಲಿನೋಡಿದರೂ ಹಚ್ಚನೆಯ ಹುಲ್ಲುಗಾವಲುಗಳು-ಮಧ್ಯೆಮಧ್ಯೆ ಗ್ರಾಮಗಳು, ಪಟ್ಟಣಗಳು ಮುಂತಾದ ಸಕಲವಸ್ತು ಸಾಮಗ್ರಿಗಳಲ್ಲೂ ಕುಂದೆನಿಸಿಕೊಳ್ಳದಂತೆ ನವಿನ್ಯಾ ಮಹಿಸೂರು ದೇಶವು, ಮಹೀಸುರನಗರ (ಮೈಸೂರು ರಾಜಧಾನಿ) ಯೆಂಬ ಮುಖ್ಯಪಟ್ಟಣದಿಂದ ಕೂಡಿ ವಿರಾಜಿಸುತ್ತಿದೆ. ಈ ದೇಶವನ್ನು ಮೇಲೆಹೇಳಿದಂತೆ ಯದುವಂಶದ ನರಪತಿಗಳು ಹಿಂದೆ ಬಹುದಿನಗಳಿಂದಲೂ ಪ್ರಜಾರಂಜಕರಾಗಿ ಪಾಲಿಸುತ್ತಾ ಬರುತ್ತಿದ್ದಾರೆ. ಮುಂದೂ, ಈ ಯದುಸಂತಾನವೇ ಚಿರಕಾಲ ಈ ದೇಶವನ್ನು ಪಾಲಿಸುತ್ತಾ ಬರುವಂತೆ ಭಗವದನುಗ್ರಹನಾಗಲಿ!

ದಿವಂಗತರಾದ ಯದುರಾಯರ ಕಾಲದಿಂದಲೂ ಅವರ ವಂಶೀಯರಾದ ಹಿಂದೂರಾಜರಿಂದಲೇ ಪರಿಪಾಲಿಸಲ್ಪಟ್ಟು ನಡೆದುಬಂದ ಈ ಸಂಸ್ಥಾನದ ರಾಜ್ಯಭಾರವು ಹದಿನೆಂಟನೆಯ ಶತಮಾನದ ಕೊನೆಯಭಾಗದಲ್ಲಿ ಸುಮಾರು ನಾಲ್ವತ್ತು ವರ್ಷಕಾಲ ಹೈದರಾಲಿ ಮತ್ತು ಟಿಪ್ಪೂಸುಲ್ತಾನರೆಂಬ ಮಹಮ್ಮದೀಯರ ವಶ್ಯಕೆಗೊಳಪಟ್ಟಿದ್ದಿತು. ಆಗ ಪೂರ್ವಕರಾಜವಂಶವು ಬಹುಬಗೆಯ ಕಿರುಕುಳಕ್ಕೆ ಒಳಪಟ್ಟು-ಶತ್ರುನಿಗ್ರಹಮಾಡಿ, ತಮ್ಮರಾಜ್ಯವನ್ನು ತಮ್ಮಪಾಲಿಗೆ ವಹಿಸಿಕೊಟ್ಟು ಕಾಪಾಡುವ ಪುಣ್ಯಾತ್ಮರು ಯಾರಾದರೂ ದೊರೆಯುವರೇ ಎಂದು ಹಾಡಿ ಹಲುಬಿಹಂಬಲಿಸಿಕೊಂಡಿದ್ದಿತು. ಆ ಕಾಲಕ್ಕೆ ಸರಿಯಾಗಿ ಭಾರತದೇಶದಲ್ಲಿ ಯೂರೋಪಿನಿಂದ ದಿಂದ ವ್ಯಾಪಾರಕ್ಕಾಗಿ ಬಂದ ಇಂಗ್ಲೆಂಡು, ಫ್ರಾನ್ಸ್, ಪೋರ್ಚುಗಲ್ ಮುಂತಾದ ದೇಶಗಳವರು, ಅಲ್ಲಲ್ಲೇ ಪ್ರಬಲರಾಗಿ ರಾಜ್ಯವನ್ನು ಕಟ್ಟಲು ಪ್ರಯತ್ನನಡೆಸಿಕೊಂಡಿದ್ದು-ಕೊನೆಗೆ ಅವರಲ್ಲಿ ಎಲ್ಲರಿಗಿಂತಲೂ ಇಂಗ್ಲೀಷರೇ ಪ್ರಬಲರಾಗಿ ದೇಶದ ಅನೇಕ ಭಾಗಗಳನ್ನಾಕ್ರಮಿಸಿ ಸ್ವಾಧೀನಗೊಂಡು ಕ್ರಮಕ್ರಮವಾಗಿ ದೇಶಕ್ಕೆಲ್ಲಾ ಪ್ರಭುಗಳಾಗತೊಡಗಿದರು. ಇದನ್ನು ಕಂಡು, ನಿರ್ಬಂಧದಲ್ಲಿ ಸಿಕ್ಕು ನರಳುತ್ತಿದ್ದ ಮೈಸೂರರಾಜವಂಶೀಯರು ಇಂಗ್ಲೀಷು ಸರ್ಕಾರದೊಂದಿಗೆ ಸಂಧಾನನಡೆಸಿ, ತನ್ಮೂಲಕ ಟಿಪ್ಪೂಸುಲ್ತಾನ

ನನ್ನು ಸಂಹರಿಸಿ ಕಳೆದುಹೋಗಿದ್ದ ರಾಜ್ಯಾಧಿಪತ್ಯವನ್ನು ಪುನಃ ಗಳಿಸಿಕೊಂಡ (೧೭೯೯)ರು! ಆಗ ಪೀಠವನ್ನೇರಿದವರು ಮುಮ್ಮಡಿಕೃಷ್ಣರಾಜ ಒಡೆಯರು. ಇವರು ಸುಮಾರು ೧೮೩೧ರವರೆಗೆ ರಾಜ್ಯವಾಳಿದರು. ಇವರ ಆಳ್ವಿಕೆಯ ಕೊನೆಯಭಾಗದಲ್ಲಿ ದೇಶದಲ್ಲಿ ಅಲ್ಲಲ್ಲಿ ಗಲಭೆಯುಂಟಾಗಿ ಶಾಂತತೆಯು ತಪ್ಪಿದ ಪ್ರಯುಕ್ತ, ಪುನಃ ಬ್ರಿಟಿಷ್ ಪ್ರಭುತ್ವದವರೇ ಇದರ ಆಳ್ವಿಕೆಯನ್ನು ಕೈಕೊಂಡು ಐವತ್ತು ವರ್ಷ ಕಾಲ ತಮ್ಮ ಸ್ವಾಧೀನದಲ್ಲಿಟ್ಟುಕೊಂಡಿದ್ದರು.

ಯಾವ ಕ್ರಿಸ್ತಶಕದ ೧೮೩೧ನೆಯ ಸಂವತ್ಸರವು, ದೇಶವು ಮಹಾರಾಜರಿಂದ ಕೈತಪ್ಪಿಹೋಗಿ, ತನ್ಮೂಲಕ ಮೈಸೂರು ರಾಜವಂಶಕ್ಕೆ ಅಗಾಧ ದುರ್ದಶೆ ಪ್ರಾಪ್ತವಾಗಲು ಕಾರಣವಾಗಿದ್ದಿತೋ, ಆ ಸಂವತ್ಸರವೇ-ಈ ಸಂಸ್ಥಾನವು ಹಿಂದಿರುಗಿಕೊಡಲ್ಪಟ್ಟ ಕಾಲದಲ್ಲಿ ಇದರ ಸರ್ವಾಧಿಪತ್ಯವನ್ನು ವಹಿಸಿಕೊಂಡು ಅದನ್ನು ಸರ್ವಶ್ರೇಷ್ಠವಾದುದೆನ್ನಿಸಿದ-ಒಬ್ಬ ಮಹಾಪುರುಷನ ಉದಯಕ್ಕೂ ಕಾರಣವಾಯಿತು. ಆದರೆ ಕಾಲಪುರುಷನ ಇಚ್ಛಾನುಸಾರವಾಗಿ ನಡೆಯುತ್ತಿರುವ ಈ ಕಾರ್ಯಗಳ ಆರಂಭ-ಪರ್ಯವಸಾನಗಳನ್ನು ತಿಳಿಯಬಲ್ಲವನಾರು ? ಭಗವದಿಚ್ಛಾನುಸಾರವಾಗಿಯೋ ಎಂಬಂತೆ ಅದೃಶ್ಯವಾಗಿ ನಡೆಯುವ ಈ ಕಾರ್ಯಗಳನ್ನು ಕುರಿತು ಸಾವಧಾನವಾಗಿ ಯೋಚಿಸಿದರೆ, ಅಜ್ಞಾನದಿಂದ ನಾವೊಂದುವೇಳೆ ಮರೆತರೂ ಭಗವಂತನು ನಮ್ಮನ್ನು ಮರೆಯದೆ ನಮ್ಮ ರಕ್ಷಣೆಗಾಗಿ ಸದಾ ನಮ್ಮ ಬೆನ್ನಹಿಂದೆಯೇ ಇದ್ದು ಸಹಾಯಮಾಡುತ್ತಿರುವನೆಂಬುದಕ್ಕೆ ಕಾರಣವು ದೊರೆಯದಿರಲಾರದು!

ಹತ್ತೊಂಬತ್ತನೆಯ ಶತಮಾನದ ಆದಿಭಾಗದಲ್ಲಿ, ಮದ್ರಾಸು ಅಧಿಪತ್ಯಕ್ಕೆ ಸೇರಿದ ಚಂಗಲ್ಪಟ್ಟುಜಿಲ್ಲೆಯಲ್ಲಿ ನರಸಿಂಹಾಚಾರ್ಯರೆಂಬ ಶ್ರೀವೈಷ್ಣವ ಬ್ರಾಹ್ಮಣರೊಬ್ಬರು ಕುಟುಂಬಸಮೇತರಾಗಿ ವಾಸಿಸಿದ್ದರು. ಇವರಿಗೆ ತಕ್ಕಷ್ಟು ಭೂಸ್ಥಿತಿಯಿದ್ದುದರಿಂದ ಸ್ವಸ್ಥಚಿತ್ತರಾಗಿ ಸ್ನಾನಾಹ್ನಿಕಾದಿ ಧರ್ಮಕೃತ್ಯಗಳಲ್ಲಿ ಕಾಲಯಾಪನೆ ಮಾಡುಕೊಂಡಿರುತ್ತಿದ್ದರು. ಇವರ ವಂಶವು ಮಾನ್ಯವಾದುದು. ಇವರ ಸಂಬಂಧಿಗಳಲ್ಲೊಬ್ಬರಾದ ವೆಂಬಾಕಂ ರಾಮಯ್ಯಂಗಾರ್ಯ (ಸಿ. ಎಸ್. ಐ.) ರೆಂಬುವರು ತಿರುವಾಂಕೂರಿನ ದಿವಾನರಾಗಿದ್ದರು. ಮತ್ತೊಬ್ಬ ಸರ್. ಟಿ. ಭಾಷ್ಯಂ ಐಯಂಗಾರ್ಯರೆಂಬುವರು

ಮದ್ರಾಸಿನ ಸುಪ್ರಸಿದ್ಧ ನ್ಯಾಯವಾದಿಯಾಗಿದ್ದರು. ನರಸಿಂಹಾಚಾರ್ಯರಿಗೆ ರಾಘವಾಚಾರ್ಯರೆಂಬ ಮಕ್ಕಳೊಬ್ಬರಿದ್ದರು. ಇವರು ಚಂಗಲ್ಪಟ್ಟು ಜಿಲ್ಲಾ ಕಲೆಕ್ಟರು ಕಚೇರಿಯಲ್ಲಿ ಗುಮಾಸ್ತೆಯ ಕೆಲಸದಲ್ಲಿದ್ದರು. ಇವರಿಗೆ ನರಸಿಂಹಾಚಾರ್ಯನೆಂಬ ಪುತ್ರನೊಬ್ಬನು ಹುಟ್ಟಿ ಕೆಲವುಕಾಲವಾದ ಮೇಲೆ, ನಮ್ಮ ಕಥಾನಾಯಕರಾದ ರಂಗಾಚಾರ್ಯರು ಎರಡನೆಯ ಮಗನಾಗಿ ಜನಿಸಿದರು. ಇವರ ಜನನವು ೧೮೬೧ನೆಯ ಇಸ್ವಿಗೆ ಸರಿಯಾದ ವಿಕೃತಿನಾಮ ಸಂವತ್ಸರದ ಫಾಲ್ಗುಣ ಬಹುಳ ಏಕಾದಶೀ ಶುಕ್ರವಾರದ ದಿನ ಕೊಳತೂರೆಂಬ ಗ್ರಾಮದಲ್ಲಿ ಆಯಿತು.

ಬಾಲಕ ರಂಗಾಚಾರ್ಯನು ತನ್ನ ಶೈಶವಬಾಲ್ಯಾವಸ್ಥೆಗಳನ್ನು ತಂದೆತಾಯಿಗಳ ಬಳಿಯಲ್ಲೇ ಇದ್ದು ಕಳೆದನು. ಶಿಶುವಾಗಿದ್ದಾಗ ಒದಗಿದ ಒಂದು ಗಂಡಾಂತರದಿಂದ ಮಗುವು ಆಗಲೇ ದುರ್ಮರಣಕ್ಕೀಡಾಗಬೇಕಾಗಿದ್ದಿತಂತೆ! ಒಂದಾನೊಂದುಸಾರಿ ತಾಯಿಯು ಚಿಕ್ಕಮಗುವಾದ ರಂಗಾಚಾರ್ಯನನ್ನು ಎತ್ತಿಕೊಂಡು ಬಂಡಿಯಲ್ಲಿ ಕುಳಿತು ಪ್ರಯಾಣಮಾಡುತ್ತಿದ್ದಳಂತೆ! ಮಾರ್ಗಮಧ್ಯದಲ್ಲಿ ಬಂಡಿಯು ಆಕಸ್ಮಾತ್ತಾಗಿ ಉರುಳಿ ತಲೆಕೆಳಗಾಯಿತು. ತಾಯಿಮಕ್ಕಳಿಬ್ಬರೂ ಬಂಡಿಯಿಂದ ಬಿದ್ದರು. ದೈವಯೋಗದಿಂದ ಏನಪಾಯವೂ ಉಂಟಾಗದಿದ್ದರೂ, ಇನ್ನೊಂದು ನಿಮಿಷ ಸಾವಕಾಶವಾಗಿದ್ದರೆ, ಶಿಶುವಿನ ಮೇಲೆ ಚಕ್ರವು ಉರುಳಿ ಮಗುವು ಸಾಯಬೇಕಾದುದೇ! ಅಷ್ಟರಲ್ಲಿ ಹಿರಿಯಣ್ಣನಾದ ನರಸಿಂಹಾಚಾರ್ಯನು ಓಡಿಬಂದು ತಾಯಿಯ ಕೈಯಿಂದ ಮಗುವನ್ನೆತ್ತಿಕೊಂಡು ರಕ್ಷಿಸಿದನಂತೆ! ಈ ಮಗುವಿನ ತರುವಾಯ ರಾಘವಾಚಾರ್ಯರ ಉದರದಲ್ಲಿ ಲಕ್ಷ್ಮಮ್ಮನೆಂಬೊಬ್ಬ ಕನ್ಯೆಯೂ, ಶ್ರೀನಿವಾಸಾಚಾರ್ಯನೆಂಬ ಪುತ್ರನೂ ಜನಿಸಿದರು.

ನಮ್ಮ ಕಥಾನಾಯಕರ ಜನನಮುಹೂರ್ತ ಬಲೀಯವಿರಬಹುದು. ಮುಂದೆ ಅವರು ಬರಬೇಕಾದ ಅಭಿವೃದ್ಧಿಗೆ ಕಾರಣವೋ ಎಂಬಂತೆ ಪ್ರಾರಂಭದಿಂದಲೂ ತಮ್ಮ ಪುತ್ರನಿಗೆ ಉತ್ತಮರೀತಿಯಿಂದ ಇಂಗ್ಲೀಷ್ ವಿದ್ಯಾಭ್ಯಾಸ ಮಾಡಿಸಬೇಕೆಂಬುದೇ ರಾಘವಾಚಾರ್ಯರ ಅಂತರ್ಯ ಅಪೇಕ್ಷೆಯಾಗಿದ್ದಿತು. ಆದರೆ ಆ ಕಾಲದಲ್ಲಿ ಅಷ್ಟು ಉಪಪನ್ನಸ್ಥಿತಿಯಲ್ಲಿರದಿದ್ದ ಅವರಿಗೆ ಅದು ಅತಿಶಯ ಕಷ್ಟಸಾಧ್ಯವೆಂದು ತೋರಿ, ಮುಂದೆ ಮಾಡಬೇಕಾದ

ಮಾರ್ಗ ತಿಳಿಯದೆ ಚಿಂತೆಗೀಡಾಗಿದ್ದರು. ಅಷ್ಟರಲ್ಲಿ ಮುಂದೆ ಕೆಲವು ದಿನಗಳಲ್ಲೇ ಅವರ ದಾಯಾದಿಯೊಬ್ಬನು ಮೃತನಾಗಲು, ಈ ಮೂಲಕವಾಗಿ ಸುಮಾರು ೮೦೦ ರೂಪಾಯಿಗಳಷ್ಟು ದ್ರವ್ಯವು ಅವರಿಗೆ ಲಭ್ಯವಾಯಿತು. ಇದರಿಂದ ಅವರ ಮನಸ್ಸಿಗೆ ಧೈರ್ಯತೋರಿತಾದರೂ, ಮುಂದೆ ತಮ್ಮ ಮಗನನ್ನು ಎಲ್ಲಿಗೆ ಕಳುಹಿಸಿ ವಿದ್ಯಾಭ್ಯಾಸಮಾಡಿಸುವುದೆಂಬ ಯೋಚನೆಗೆ ಆರಂಭವಾಯಿತು. ನಂತರ ಕೆಲವು ದಿನಗಳೊಳಗಾಗಿ ಅದಕ್ಕೂ ಒಂದು ಅನುಕೂಲ ಪ್ರದೇಶವು ದೊರೆಯಿತು. ಮದ್ರಾಸು ನಗರದಲ್ಲಿ ವೆಂಬಾಕಂ ರಾಘವಾಚಾರ್ಯರೆಂಬ ಅವರ ಸಮೀಪಬಂಧುವೇ ಮೊದಲನೆಯ (ನೇಟಿವ್) ನ್ಯಾಯಾಧಿಪತಿಯಾಗಿ ನಿಯಮಿತರಾದರು. ಅವರು ಬಾಲಕ ರಂಗಾಚಾರ್ಲುಯವರನ್ನು ತಮ್ಮ ಬಳಿಯಲ್ಲಿಟ್ಟುಕೊಂಡು ಓದಿಸಲು ಒಪ್ಪಿಕೊಂಡರು. ರಾಘವಾಚಾರ್ಯರು ದೈವಾನುಕೂಲ ಒದಗಿತೆಂದುಕೊಂಡು ಪರಮಾನಂದಪಟ್ಟು, ತಮ್ಮ ಮಗನನ್ನು ವಿದ್ಯಾಭ್ಯಾಸಕ್ಕಾಗಿ ಮದರಾಸು ರಾಜಧಾನಿಗೆ ಕಳುಹಿಸಿಬಿಟ್ಟರು.

ರಂಗಾಚಾರ್ಲುಯವರು ಬಾಲ್ಯದಲ್ಲಿ ಅತಿಶಯ ಸೂಕ್ಷ್ಮಮತಿಯುಳ್ಳವರಾಗಿದ್ದರೆಂದು ಹೇಳಬೇಕಾದುದಿಲ್ಲ ಸ್ವಾಭಾವಿಕವಾಗಿಯೇ ನಿಶಿತವಾಗಿದ್ದ ಅವರ ಬುದ್ಧಿಯು ಇನ್ನೂ ಚುರುಕುಗೊಂಡು ಬಲಿಷ್ಟವಾಗಲು ಮದ್ರಾಸಿನಂತಹ ಪ್ರಸಿದ್ಧ ಪಟ್ಟಣದಲ್ಲಿ ಅನೇಕ ಸುಸಂದರ್ಭಗಳು ಬಾಲ್ಯದಲ್ಲೇ ಒದಗಿರಬೇಕು. ಆದರೆ ಇತರ ಎಲ್ಲಾ ಸಾಧನಗಳಿಗಿಂತಲೂ, ಅಪೂರ್ವವಾದ ಒಂದು ಸಾಧನವು ಪ್ರಬಲತಮವಾಯಿತು. ಮನೆಯಲ್ಲಿ ಹಿರಿಯರು ಚದುರಂಗವೆಂಬ ಆಟವಾಡುತ್ತಾ ಇದ್ದಾಗ್ಗೆ ಅದನ್ನೇ ಗಮನವಿಟ್ಟು ನೋಡುತ್ತಾ ಕುಳಿತಿರುತ್ತಿದ್ದ ರಂಗಾಚಾರ್ಲುಯವರು ಯಾವಯಾವ ಸಂದರ್ಭಕ್ಕೆ ಯಾವಯಾವ ಕಾಯಿಗಳನ್ನು ನಡಿಸಬೇಕೆಂಬುದನ್ನು ತಿಳಿವುದರಲ್ಲಿ ಅತ್ಯಂತ ಚತುರರಾದರು. ಅನೇಕ ಸಂದರ್ಭಗಳಲ್ಲಿ ಆಟಕ್ಕಾಗಿ ಕುಳಿತವರಿಗೇ ಸಂದೇಹ ತೋರಿದಾಗ ಅವರು ನಮ್ಮ ರಂಗಾಚಾರ್ಲುಯವರ ಸಲಹೆಯನ್ನು ಕೇಳಿ, ಕಾಯಿಗಳನ್ನು ನಡೆಸಿ ಜಯಹೊಂದುತ್ತಿದ್ದರೆಂದೂ ಹೇಳಿಕೆಯುಂಟು.

ಪ್ರಾರಂಭಕ್ಕೆ ರಂಗಾಚಾರ್ಲುಯವರು ಪಚ್ಚಯಪ್ಪ ಮೊದಲಿಯಾರ್ ಎಂಬೊಬ್ಬ ಧರ್ಮಾತ್ಮನು ಸ್ಥಾಪಿಸಿದ್ದ ಪಾಠಶಾಲೆಗೆ ಸೇರಿ, ವಿದ್ಯಾಭ್ಯಾಸ

ಮಾಡಿದರು. ಪ್ರಾರಂಭದ ತರಗತಿಗಳಲ್ಲಿ ಪ್ರಿಯಜ್ಞಾನ ಮೊದಲಿಯಾರ್ರೆಂಬ ಉಪಾಧ್ಯಾಯರಬಳಿ ಅವರ ಪಾಠಪ್ರವಚನಗಳು ನಡೆದುವು. ತಮ್ಮ ಈ ವಿದ್ಯಾಗುರುವಿನ ವಿಷಯದಲ್ಲಿ ನಮ್ಮ ಕಥಾನಾಯಕರಿಗೆ ಇದ್ದ ಗೌರವಾದರಗಳು ವಿಶೇಷವಾದುವು. ಮುಂದೆ ಅವರು ಮೈಸೂರು ಸಂಸ್ಥಾನದಲ್ಲಿ ದಿವಾನ್‌ಪದವಿಯನ್ನು ಸ್ವೀಕರಿಸಿದಮೇಲೆ ಸಹ, ಬಾಲಕರಿಗೆ ಪ್ರಾರಂಭ ವಿದ್ಯಾಭ್ಯಾಸಮಾಡಿಸುವ ವಿಚಾರದಲ್ಲಿ ಪ್ರಿಯಜ್ಞಾನ ಮೊದಲಿಯಾರ್ರಿಗೆ ಸಮಾನರಾದವರು, ಮದರಾಸು ಆಧಿಪತ್ಯದಲ್ಲಾಗಲೀ ಮೈಸೂರು ಸಂಸ್ಥಾನದಲ್ಲಾಗಲೀ ಇಲ್ಲವೆಂದು ಹೇಳುತ್ತಿದ್ದರು. ಮೊದಲಿಯಾರ್ರು ವೃದ್ಧಾಪ್ಯದಿಂದ ಪಾಠಶಾಲಾ ಕಾರ್ಯವನ್ನು ನಿರ್ವಹಿಸಿ, ತನ್ಮೂಲಕ ಜೀವನಕ್ಕೆ ಸಂಪಾದಿಸಿಕೊಳ್ಳಲು ಅಶಕ್ತರಾಗಿದ್ದಾಗ ಕೃತಜ್ಞರಾದ ರಂಗಾಚಾರ್ಲುಯವರು, ಅವರಿಗೆ ಪ್ರತಿ ತಿಂಗಳಲ್ಲೂ ಖರ್ಚಿಗಾಗಿ ಸ್ವಲ್ಪದ್ರವ್ಯವನ್ನು ಕಳುಹಿಸುತ್ತಿದ್ದರಂತೆ! ಇದಲ್ಲವೆ ಆದರ್ಶ ಗುರುಭಕ್ತಿಯ ಪ್ರದರ್ಶನೆ!

ಬಾಲ್ಯದಲ್ಲಿ ಅವರಿಗೆ ಪಾಠಗಳಿಗಿಂತಲೂ ಆಟದಮೇಲೆಯೇ ಹೆಚ್ಚು ಗಮನವಿದ್ದಿತು. ಆದರೆ ದಿನಕ್ಕೆ ಬಹುಸ್ವಲ್ಪಕಾಲ ಮಾತ್ರ ಓದುತ್ತಲಿದ್ದು, ಅಷ್ಟರಿಂದಲೇ ಅವರು ತಮ್ಮ ತರಗತಿಯ ಮಿಕ್ಕ ಎಲ್ಲಾ ವಿದ್ಯಾರ್ಥಿಗಳಿಗಿಂತಲೂ ಉತ್ತಮತರವಾಗಿ ಪಾಠಗಳನ್ನು ಜ್ಞಾಪಕದಲ್ಲಿಟ್ಟುಕೊಳ್ಳಲು ಶಕ್ತರಾಗಿದ್ದರು. ಪಚ್ಚಯಪ್ಪ ಪಾಠಶಾಲೆಯಲ್ಲಿ ಪ್ರಾರಂಭ ವಿದ್ಯಾಭ್ಯಾಸವು ಮುಗಿದತರುವಾಯ, ಅವರು 'ಮದರಾಸ್ ಹೈಸ್ಕೂಲ್' ಎಂಬ ಉನ್ನತ ಪಾಠಶಾಲೆಗೆ ಹೋಗಿ ಸೇರಿದರು. ಅಲ್ಲಿಯ ಮುಖ್ಯೋಪಾಧ್ಯಾಯರಾಗಿದ್ದ ಮಿ|| ಪೊವೆಲ್ ಎಂಬವರು ರಂಗಾಚಾರ್ಲುಯವರ ಶಕ್ತಿಸಾಮರ್ಥ್ಯಗಳನ್ನು ಬಹುಸ್ವಲ್ಪಕಾಲದಲ್ಲೇ ಮೆಚ್ಚಿಕೊಂಡು, ಅಂತಹ ಪ್ರತಿಭಾಶಾಲಿಗೆ ತಕ್ಕ ಪ್ರೋತ್ಸಾಹ ಕೊಡುವುದಾದರೆ ಮುಂದೆ ಅವರಿಂದ ಅಗಾಧ ಕಾರ್ಯವು ನಡೆಯಬಹುದೆಂದು ಯೋಚಿಸಿ, ತಿಂಗಳೊಂದಕ್ಕೆ ಹದಿನಾಲ್ಕು ರೂಪಾಯಿಗಳಂತೆ ವಿದ್ಯಾರ್ಥಿವೇತನವನ್ನು ಕೊಡುತ್ತಾಬಂದರು. ವಿದ್ಯಾಗುರುಗಳಾಗಿದ್ದ ಮಿ|| ಪೊವೆಲ್‌ರ ಬೋಧನಾ ಪ್ರೌಢಿಮೆಯಿಂದ, ಫಲವಂತವಾಗಿದ್ದ ಆ ವಿದ್ಯಾರ್ಥಿಯ ಮನೋಮಯ ಕ್ಷೇತ್ರವು ವಿಶೇಷ ವಿಸ್ತಾರಹೊಂದಲು ಶಕ್ತವಾಯಿತು. ತರಗತಿಯ ಅಗ್ರಸ್ಥಾನವಂತೂ ಅವರಿಗೆ ಎಂದೂ ತಪ್ಪಿದು

ದಿಲ್ಲ. ಅವರ ಜೊತೆಯ ಬಾಲಕರೆಲ್ಲರೂ, ಅವರ ತರುವಾಯದ-'ಎರಡನೆಯ ಸ್ಥಾನವು ನನಗೆ ಸಿಕ್ಕಬೇಕು. ನನಗೆ ಸಿಕ್ಕಬೇಕು-ಎಂದು ಬಡಿದಾಡುತ್ತಿದ್ದರಲ್ಲದೆ, ಪ್ರಥಮಸ್ಥಾನದ ಅಪೇಕ್ಷೆಯೇ ಅವರಲ್ಲಿ ಯಾರಿಗೂ ಉಂಟಾಗಲು ಅವಕಾಶವಿರಲಿಲ್ಲ.

ಈವರೆಗೆ ಅವರ ಪ್ರತಿಭೆಯು ಎಷ್ಟು ಮಾತ್ರವಾದುದೆಂಬುದು ಅವರ ತರಗತಿಯ ಉಪಾಧ್ಯಾಯರಿಗೂ ಮತ್ತು ಜೊತೆಗೆ ಓದುತ್ತಿದ್ದ ಬಾಲಕರಿಗೂ ಮಾತ್ರ ತಿಳಿಯಲು ಅವಕಾಶವಿದ್ದಿತು. ಆದರೆ ಅವರಿಗೆ ಹದಿನೈದು ವರ್ಷಗಳು ತುಂಬುತ್ತಿರಲಾಗಿ, ೧೮೪೫-೪೬ನೆಯ ಸಂವತ್ಸರದಲ್ಲಿ, ಮದ್ರಾಸು ವಿಶ್ವವಿದ್ಯಾನಿಲಯದವರು, ಸರ್ಕಾರಕ್ಕೆ ಕಳುಹಿಸುತ್ತಿದ್ದ ಪಂಚವಾರ್ಷಿಕ ವರದಿ (Quinquniam report) ಯಲ್ಲಿ ಮಿ|| ಪೊವೆಲ್‌ರು ಕಳುಹಿಸಿದ್ದ ಹೈಸ್ಕೂಲಿನ ವರದಿಯನ್ನು ವಿಮರ್ಶಿಸಿ, ಅದರಲ್ಲಿ ರಂಗಾಚಾರ್ಲುಯವರ ವಿದ್ಯಾಭಿವೃದ್ಧಿಯ ವಿಚಾರದಲ್ಲಿ ಅವರ ಸದಭಿಪ್ರಾಯಗಳನ್ನು ಕುರಿತು ಬರೆದಿದ್ದರು. ದೇಶಚರಿತ್ರೆ, ಇಂಗ್ಲೀಷ್ ಸಾಹಿತ್ಯ, ಗಣಿತಶಾಸ್ತ್ರ, ಪ್ರಬಂಧ ರಚನೆ ಮುಂತಾದುವುಗಳಲ್ಲಿ ಅವರಲ್ಲಿ ಕಂಡುಬಂದ ಪ್ರೌಢಿಮೆಯನ್ನು ತಿಳಿಯಪಡಿಸಲು ಅವರು ಪರೀಕ್ಷೆಯಲ್ಲಿ ಬರೆದುಕೊಟ್ಟಿದ್ದ ಉತ್ತರಪತ್ರಿಕೆಗಳನ್ನೇ ಪ್ರಕಟಿಸಿದರಂತೆ! ಹೀಗೆ ೧೮೪೯ನೆಯ ಸಂವತ್ಸರದವರೆಗೂ ವಿದ್ಯಾಭ್ಯಾಸವು ಸಾಗಿತು. ಆ ಸಂವತ್ಸರದಲ್ಲಿ ನಡೆಯಲಿದ್ದ 'ಪ್ರೊಫಿಷಿಯಂಟ್' (ಪ್ರವೀಣ) ಪರೀಕ್ಷೆಗೆ ಕುಳ್ಳಿರಲು, ರಂಗಾಚಾರ್ಲುಯವರು ನಿರ್ಧರಿಸಿದರು. ಆ ಸಂಗತಿಯನ್ನು ಕೇಳಿದ ಮಿ|| ಪೊವೆಲ್‌ರು ಬಹುಸಂತೋಷಪಟ್ಟು-'ಈ ಪರೀಕ್ಷೆಗೆ ಕುಳ್ಳಿರಲು ನೀವು ಮನಸ್ಸುಮಾಡಿದ್ದನ್ನು ಕುರಿತು ನನ್ನಮನಸ್ಸಿಗೆ ಅತ್ಯಂತ ಸಮಾಧಾನವೆನ್ನಿಸಿದೆ. ಇದರಿಂದ ನಮ್ಮ ಪಾಠಶಾಲೆಯ ಗೌರವವು ಹೆಚ್ಚಲು ಅಡ್ಡಿಯಿಲ್ಲ. ಈ ಪರೀಕ್ಷೆಯಲ್ಲಿ ನೀವು ಉತ್ತಮ ರೀತಿಯಲ್ಲಿ ತೇರ್ಗಡೆಹೊಂದುವಿರೆಂದು ನಾನು ದೃಢವಾಗಿ ನಂಬಿದ್ದೇನೆ' ಎಂದು ಬರೆದಿದ್ದರು.

ಯುಕ್ತಕಾಲದಲ್ಲಿ ಪರೀಕ್ಷೆಯೂ ನಡೆಯಿತು (೧೮೪೯). ಅದರ ಫಲಿತಾಂಶವೇನಾಯಿತೆಂಬುದನ್ನು ಹೇಳಬೇಕಾದುದಿಲ್ಲ. ರಂಗಾಚಾರ್ಲುಯವರೇ ಪ್ರಥಮ ತರಗತಿಯಲ್ಲಿ ಉತ್ಕೃಷ್ಟರೀತಿಯಿಂದ ತೇರ್ಗಡೆಹೊಂದಿದರು.

ಪೊವೆಲ್‌ರು ಯೋಗ್ಯತಾಪತ್ರಿಕೆಯನ್ನು ಒಪ್ಪಿಸುವಾಗ್ಗೆ, ಗಣಿತಶಾಸ್ತ್ರ, ವಿಜ್ಞಾನಶಾಸ್ತ್ರಗಳಲ್ಲಿ ಅವರಿಗಿದ್ದ ಪಾಂಡಿತ್ಯವನ್ನೂ, ಅವರ ಇಂಗ್ಲೀಷ್ ಭಾಷಾ ಪರಿಚಯವನ್ನೂ, ಪ್ರಬಂಧರಚನೆಯಲ್ಲಿ ಅವರಿಗಿದ್ದ ಅಗಾಧ ಸಾಮರ್ಥ್ಯವನ್ನೂ ಹೊಗಳಿದರು. ಪೊವೆಲ್‌ರಿಗೆ ಮಾತ್ರವಲ್ಲ, ಆ ಪಾಠಶಾಲೆಯಲ್ಲಿದ್ದ ಇತರ ಎಲ್ಲಾ ಉಪಾಧ್ಯಾಯರಿಗೂ ಅವರು ಅಚ್ಚುಮೆಚ್ಚಾಗಿದ್ದರು. ಎಲ್ಲರಿಗೂ ಅವರ ವಿಷಯದಲ್ಲಿ ವಿಶೇಷ ಪ್ರೇಮವಿದ್ದಿತು.

ಅವರಿಗಿದ್ದ ಪ್ರಬಂಧರಚನಾ ಕೌಶಲವು ಎಷ್ಟು ವ್ಯಾಪಕವಾದುದು ಎಂಬುದನ್ನು ತಿಳಿಸಲು ಆಕಾಲದಲ್ಲೇ ನಡೆದ ಮತ್ತೊಂದು ಸಂಗತಿಯನ್ನು ಉದಹರಿಸಬಹುದು. ಮದರಾಸಿನಲ್ಲಿ ಗವರ್ನರಾಗಿದ್ದ ಲಾರ್ಡ್ ಎಲ್ಫಿನ್‌ಸ್ಟನ್ ಎಂಬುವರ ಹೆಸರನ್ನು ಶಾಶ್ವತಗೊಳಿಸುವ ಉದ್ದೇಶಹುಟ್ಟಿ ಅದಕ್ಕಾಗಿ ಮದ್ರಾಸಿನ ಮಹಾಜನರು, ಒಂದು ನಿಧಿಯನ್ನು ಏರ್ಪಡಿಸಿದ್ದರು. ಅದರಿಂದ ಹುಟ್ಟುವ ಬಡ್ಡಿಯಿಂದ ಯೋಗ್ಯರಾದ ವಿದ್ಯಾರ್ಥಿಗಳಿಗೆ ಮಾಸಾಶನವನ್ನೂ ಪಾರಿತೋಷಕವನ್ನೂ ಕೊಟ್ಟು ಪ್ರೋತ್ಸಾಹ ಪಡಿಸಬೇಕೆಂದೂ, ನಿರ್ಣಯಮಾಡಿದ್ದರು. 'ನಾನಾ ಜನಾಂಗಗಳವರ ಪರಸ್ಪರ ಸಂಸರ್ಗವು ಅವರವರ ಅಭಿವೃದ್ಧಿಯಲ್ಲಿ ಹೇಗೆ ಬದಲಾವಣೆಯನ್ನುಂಟುಮಾಡುವುದು!' ಎಂಬುದೇ ಪ್ರಬಂಧದ ವಿಷಯವಾಗಿದ್ದಿತು. ರಂಗಾಚಾರ್ಯರು, ಸಮಿತಿಯವರು ಕೊಟ್ಟಿದ್ದ ಆ ವಿಷಯವನ್ನು ಕುರಿತು ಒಂದು ಪ್ರೌಢ ಪ್ರಬಂಧವನ್ನು ಬರೆದುಕಳುಹಿಸಿದರು. ಕೊನೆಗೆ ವಿಮರ್ಶೆಯಲ್ಲಿ ನಮ್ಮ ರಂಗಾಚಾರ್ಯರ ಪ್ರಬಂಧವೇ ಸರ್ವೋತ್ಕೃಷ್ಟವಾದುದೆಂದು ನಿರ್ಣಯವಾಯಿತು. ಅದರ ಫಲವಾಗಿ ಅವರಿಗೆ ಐದು ಸವರನ್‌ಗಳ ಪಾರಿತೋಷಕವು ದೊರೆಯಿತು.

ಮಿ|| ಪೊವೆಲ್‌ರೂ ಮಿ|| ಗಾರ್ಡನ್‌ರೂ ತಮ್ಮ ಶಿಷ್ಯಶ್ರೇಷ್ಠರಾದ ರಂಗಾಚಾರ್ಯರ ಮೇಧಾಶಕ್ತಿಯನ್ನೂ ವಿದ್ಯಾಭಿವೃದ್ಧಿಯನ್ನೂ ಕುರಿತು ಮಾತ್ರ ಮೆಚ್ಚಿಕೊಂಡಿದ್ದರೆಂದಲ್ಲ. ಅಂತಹ ಪ್ರತಿಭಾಸಂಪನ್ನರಾಗಿದ್ದರೂ ಅವರಲ್ಲಿ ದುರಭಿಮಾನ, ಅಹಂಕಾರ ಮುಂತಾದ ದುರ್ಗುಣಗಳ ಲೇಶಮಾತ್ರ ಸೋಂಕಾದರೂ ಕಂಡುಬರದೆ, 'ತುಂಬಿದ ಕೊಡ ತುಳುಕದು' ಎಂಬ ಲೋಕೋಕ್ತಿಯಂತೆ, ವಿನಯ, ಗಾಂಭೀರ್ಯ, ಸೌಶೀಲ್ಯ, ಗುರುಹಿರಿಯ

ರಲ್ಲಿ ಭಕ್ತಿ, ಋಜುಭಾಷೆ ಮುಂತಾದ ಸದ್ಗುಣಗಳೇ ಎದ್ದು ಕಾಣುತ್ತಿದ್ದುದರಿಂದ ಅವರಲ್ಲಿ ವಿಶೇಷ ಪ್ರೀತಿಯನ್ನೂ ಗೌರವಾಭಿಮಾನಗಳನ್ನೂ ಇಟ್ಟುಕೊಂಡಿದ್ದರು. ಹೀಗೆ ನಮ್ಮ ಕಥಾನಾಯಕರ ಪಾಠಶಾಲಾ ವಿದ್ಯಾಭ್ಯಾಸವು ೧೮೪೯ರಲ್ಲಿ ಎಂದರೆ ಅವರ ಹತ್ತೊಂಬತ್ತನೆಯ ವಯಸ್ಸಿನಲ್ಲಿ ಕೊನೆಗಂಡಿತು.



## ಅಧ್ಯಾಯ ೨. 'ಉದ್ಯೋಗ ಪ್ರವೇಶ'

ಈವರೆಗೆ ಹೇಳಿದ ಸಂಗತಿಗಳಿಂದ ಕಂಡುಬಂದಂತೆ, ನಮ್ಮ ಕಥಾನಾಯಕರು, ತಮ್ಮ ವಿದ್ಯಾಭ್ಯಾಸವನ್ನು ಮುಂದರಿಸಿದ್ದರೆ, ಅವರೂ ವಿಶ್ವವಿದ್ಯಾನಿಲಯದ ದೊಡ್ಡದೊಡ್ಡ ಪರೀಕ್ಷೆಗಳನ್ನು ಕೊಟ್ಟು ಪದವಿ-ಪ್ರಶಸ್ತಿಗಳನ್ನು ಪಡೆಯುವುದು ಕಷ್ಟವಾಗಿರಲಿಲ್ಲ. ಆದರೆ ಅವರ ಗೃಹಕೃತ್ಯದ ಸ್ಥಿತಿಗತಿಗಳು ಅದಕ್ಕೆ ಅವಕಾಶ ಕೊಡಲಿಲ್ಲ. ವಿದ್ಯಾರ್ಥಿಯಾಗಿದ್ದಾಗ, ಅವರ ಬುದ್ಧಿಕೌಶಲತೆ, ವಿನಯವಿಧೇಯತೆಗಳನ್ನು ಕಂಡು ಮೆಚ್ಚಿಕೊಂಡಿದ್ದ ವರದಾಚಾರ್ಯರೆಂಬ ಸದ್ಗೃಹಸ್ಥರು ಹದಿನಾಲ್ಕನೆಯ ವಯಸ್ಸಿನಲ್ಲೇ ಅವರನ್ನು ತಮ್ಮ ಅಳಿಯನನ್ನಾಗಿ ಮಾಡಿಕೊಂಡಿದ್ದರು. ಈ ಕಾರಣದಿಂದ ಅವರ ಪಾಠಶಾಲಾ ವಿದ್ಯಾಭ್ಯಾಸವು ಮುಗಿವವೇಳೆಗೆ ಸಂಸಾರಭಾರವೂ ಕೊರಳಿಗೆ ಬಿದ್ದಿತು. ಆದರ ನಿರ್ವಹಣಕ್ಕಾಗಿ, ಅವರು ಉದ್ಯೋಗ ಪ್ರವೇಶ ಮಾಡಿಯೇ ತೀರಬೇಕಾಯಿತು.

ಆದರೆ ಅವರು ಉದ್ಯೋಗದ ಬೇಟೆಗಾಗಿ ಎಲ್ಲೂ ಅಲೆಯಬೇಕಾದ ಆವಶ್ಯಕವೊದಗಲಿಲ್ಲ. ಹಿಂದೆ 'ಎಲ್ಫಿನ್‌ಸ್ಟನ್' ನಿಧಿಯ ಸಂಬಂಧದಲ್ಲಿ ಪ್ರಬಂಧ ಬರೆದಿದ್ದಾಗ, ಅವರ ಬುದ್ಧಿಶಕ್ತಿಯ ಪ್ರಮಾಣವೆಷ್ಟೆಂಬುದು, ಆ ನಿಧಿಯ ಕಾರ್ಯದರ್ಶಿಯಾಗಿದ್ದ ಮಿ|| ಟೈಲರ್ ಎಂಬಾತನ ಗಮನಕ್ಕೆ ಬಂದಿದ್ದಿತು. ಗುಣಪಕ್ಷಪಾತಿಯಾಗಿದ್ದ ಆತನು, ರಂಗಾಚಾರ್ಲುಯವರು ಪಾಠಶಾಲಾ ವಿದ್ಯಾಭ್ಯಾಸವನ್ನು ಮುಗಿಸಿದರೆಂಬುದನ್ನು ತಿಳಿದು, ಆ ರತ್ನವನ್ನೇ ಹೇಗಾದರೂ ಸಂಗ್ರಹಿಸಬೇಕೆಂದು ಸಂಕಲ್ಪಿಸಿ, ತನ್ನ ಮಿತ್ರನಾದ ಆಗ

ಮದ್ರಾಸ್ ಇಲಾಖೆಯಲ್ಲಿ ಕಲೆಕ್ಟರಾಗಿದ್ದ ಮಿ|| ಎಲ್ಲಿಸ್ ಎಂಬಾತನಿಗೆ ಹೇಳಿ ಅವರಿಗೆ ತಿಂಗಳಿಗೆ ೩೫ ರೂ. ಗಳ ವೇತನದ ಒಂದು ಒದಲಿ ಉದ್ಯೋಗವನ್ನು ಕೊಡಿಸಿದನು. ರಂಗಾಚಾರ್ಲುರವರು ತಮಗೆ ಅಪ್ರಯತ್ನವಾಗಿ ದೊರಕಿದ ಆ ಉದ್ಯೋಗವೇ ಸರ್ವಸ್ವವೆಂದು ತಿಳಿದು ಮುಂದೆ ತೃಪ್ತರಾಗಿ ಕುಳ್ಳಿರಲಿಲ್ಲ. ಅದೇ ವರ್ಷದಲ್ಲೇ 'ಪಬ್ಲಿಕ್ ಸರ್ವಿಸ್ ಟೆಸ್ಟ್' ಎಂಬೊಂದು ಪರೀಕ್ಷೆಗೆ ಕುಳಿತು ಅದರಲ್ಲೂ ತೇರ್ಗಡೆಯಾದರು. ಒಡನೆ ಚೆಂಗಲ್ಪಟ್ಟು ಜಿಲ್ಲೆಯ ಕಲೆಕ್ಟರ ಕಚೇರಿಯಲ್ಲಿ ಗುಮಾಸ್ತೆ ಕೆಲಸವು ಕಾಯಂ ಆಗಿ ದೊರೆಯಿತು. ಅಲ್ಲಿಂದ ಒಂದು ತಿಂಗಳೊಳಗಾಗಿಯೇ ಸೇಲಂ ಜಿಲ್ಲಾ ಕಚೇರಿಯಲ್ಲಿ ೫೦ ರೂ. ಸಂಬಳದ ಇಂಗ್ಲೀಷ್ ರಿಕಾರ್ಡ್ ಕೀಪರ್ ಕೆಲಸಕ್ಕೆ ವರ್ಗವಾಯಿತು. ಪುನಃ ಒಂದು ವರ್ಷದೊಳಗಾಗಿ ಚಂಗಲ್ಪಟ್ಟಿಗೆ ೭೦ ರೂ. ನ ಉದ್ಯೋಗಕ್ಕೆ ವರ್ಗವಾಯಿತು. ಅದೇ ಉದ್ಯೋಗದಲ್ಲೇ ಎರಡು ವರ್ಷಕಾಲ ಬಹು ತೃಪ್ತಿಕರವಾಗಿ ಕೆಲಸಮಾಡಿಕೊಂಡಿದ್ದರೆಂಬ ವೇಳೆಗೆ ೧೮೫೨ನೆಯ ಸಂವತ್ಸರದಲ್ಲಿ ೮೫ ರೂಪಾಯಿ ಸಂಬಳದ ಹೆಡ್‌ರೈಟರ್ ಮತ್ತು ಟ್ರಾನ್ಸ್‌ಲೇಟರ್ ಉದ್ಯೋಗಕ್ಕೆ ಪುನಃ ಬಡ್ತಿ ದೊರೆಯಿತು.

೧೮೫೫ನೆಯ ಫೆಬ್ರವರಿ ತಿಂಗಳಲ್ಲಿ ಮತ್ತೊಂದು ಪಬ್ಲಿಕ್ ಸರ್ವಿಸ್ ಪರೀಕ್ಷೆಯು ನಡೆಯಿತು. ರಂಗಾಚಾರ್ಲುರವರು ಅದಕ್ಕೂ ಕುಳಿತು, ಪ್ರಥಮಸ್ಥಾನದಲ್ಲಿ ತೇರ್ಗಡೆಯಾದರು. ರಾಜಕಾರ್ಯಕ್ಕೆ ಸಂಬಂಧಿಸಿದ ವಿವಿಧ ವಿಚಾರಗಳಲ್ಲಿ ಅವರಿಗಿದ್ದ ಸರ್ವತೋಮುಖವಾದ ಪ್ರತಿಭೆಯು ಅವರ ಉತ್ತರ ಪತ್ರಿಕೆಗಳಿಂದ ವ್ಯಕ್ತವಾಗುತ್ತಿದ್ದುದನ್ನು ಕಂಡು ಪರೀಕ್ಷಕರು ರಂಗಾಚಾರ್ಲುರವರನ್ನು ಬಹುಬಗೆಯಿಂದ ಶ್ಲಾಘಿಸಿ, ಆ ಪ್ರಥಮ ಸ್ಥಾನಕ್ಕೆ ಪಾರಿತೋಷಕವಾಗಿ ಇಟ್ಟಿದ್ದ ಐದುನೂರು ರೂಪಾಯಿಗಳ ಬಹುಮಾನವನ್ನು ಪ್ರಶಂಸಾಪತ್ರಗಳೊಂದಿಗೆ ಅವರಿಗೆ ಒಪ್ಪಿಸಿದರು. ಅವರ ಜೊತೆಯವರಿಗೆಲ್ಲರಿಗೂ ಆಶ್ಚರ್ಯವೆನ್ನಿಸುವಂತೆ ಅಷ್ಟು ಶೀಘ್ರವಾಗಿಯೇ ಬಡ್ತಿಹೊಂದುತ್ತ ಇದ್ದರಾದರೂ ರಂಗಾಚಾರ್ಲುರವರು ತೃಪ್ತರಾಗಿ ಕುಳ್ಳಿರದೆ, ಪ್ಲೀಡರ್ ಪರೀಕ್ಷೆಗೆ ಪ್ರವೇಶಿಸಿ ಅದರಲ್ಲೂ ತೇರ್ಗಡೆಹೊಂದಿದರು. ತರುವಾಯ ಅದೇ ವರ್ಷವೇ ಅವರಿಗೆ (೧೮೫೬) ಸೈದಾಪೇಟೆ ತಾಲ್ಲೂಕಿನ ತಹಶೀಲ್ದಾರಿ ಕೆಲಸಕ್ಕೆ ಬಡ್ತಿ ದೊರೆಯಿತು. ಹೀಗೆ ಆ ಮಹ

ನೀಯರು ಕೇವಲ ಪ್ರಾರಂಭಕ್ಕೆ ಒಂದು ಗುಮಾಸ್ತೆಯ ಕೆಲಸಕ್ಕೆ ಸೇರಿದರಾದರೂ ಮುಂದೆ ಆರು-ಏಳು ವರ್ಷಗಳೊಳಗಾಗಿಯೇ ಒಂದು ತಾಲ್ಲೂಕಿನ ಅಧಿಕಾರಸ್ಥಾನವನ್ನೇ ಆಕ್ರಮಿಸಿ ದಕ್ಷತೆಯಿಂದ ಅಧಿಕಾರ ನಿರ್ವಹಣ ಮಾಡಲಾರಂಭಿಸಿದರು.

ಅವರ ಸರಿಸಮಾನ ಉದ್ಯೋಗಗಳಲ್ಲಿದ್ದ ಇತರರಿಗೂ ರಂಗಾಚಾರ್ಲುಯವರಿಗೂ, ಒಂದು ದೊಡ್ಡ ವ್ಯತ್ಯಾಸವಿದ್ದಿತು. ಇತರರು, ಜೀವನೋಪಾಯಕ್ಕಾಗಿ ದೊರೆತಿರುವ ಆ ಉದ್ಯೋಗಕ್ಕೆ ಆವಶ್ಯಕವೆನ್ನಿಸುವಷ್ಟು ಕಾಲ ಎಂದರೆ ದಿನಕ್ಕೆ ಐದಾರು ಗಂಟೆಗಳಷ್ಟು ಮಾತ್ರ ಲೇಖನಿಕಾಗದಗಳನ್ನು ಸಂದರ್ಶಿಸಿ, ಅಷ್ಟುಹೊತ್ತು ಮುಗಿಯಿತೆಂದೊಡನೆಯೇ, ಸೆರೆಮನೆಯಿಂದ ಹೊರಬಿದ್ದ ಕೈದಿಗಳಂತೆ-ಅಬ್ಬ, ಈ ಗುಲಾಮಗಿರಿಯ ಸೇವೆಯು ಈ ದಿನಕ್ಕೆ ತಪ್ಪಿತೇ-ಎಂದೊಂದು ನಿಟ್ಟುಸಿರಿನೊಂದಿಗೆ ಹೊರಹೊರಟು, ಮಿಕ್ಕಕಾಲವನ್ನೆಲ್ಲ, ಹಾಳುಹರಟೆ ಮೂಳುಪ್ರಸಂಗಗಳಲ್ಲೋ, ಅವರಿವರ ಮೇಲಿನ ದೂಷಣೆ, ಛಿದ್ರಾನ್ವೇಷಣೆಗಳಲ್ಲೋ, ಅಥವ ಇಸ್ಪೀಟು ಗಂಜೀಫು ಮುಂತಾದ ಆಟಪಾಟಗಳಲ್ಲೋ ಕಳೆದು, ತರುವಾಯ ಮನೆಗೆ ಬಂದು ಅಶನ ಧ್ವಂಸಕಾರ್ಯವನ್ನು ನೆರವೇರಿಸಿ ದಿನಕ್ಕೆ ಎಂಟು ಹತ್ತು ಗಂಟೆಗಳ ಕಾಲ ನಿದ್ರೆಹೋಗಿ, ಹೀಗೆ ವ್ಯರ್ಥಕಾಲಕ್ಷೇಪ ಮಾಡುತ್ತಿದ್ದರೆ, ರಂಗಾಚಾರ್ಲುಯವರು, ಸರ್ಕಾರಿಯ ಕಾರ್ಯವನ್ನು ಎಂದೂ ಗುಲಾಮಗಿರಿಯೆಂದು ಭಾವಿಸಿಕೊಳ್ಳದೆ, ತಮ್ಮ ಜೀವನಕ್ಕಾಗಿ ಭಗವದ್ದತ್ತವಾಗಿ ದೊರೆತಿದ್ದ ಆ ಉದ್ಯೋಗವನ್ನು ಹೀನಭಾವದಿಂದ ಕಾಣದೆ ವಿಶೇಷ ಶ್ರದ್ಧೆವಹಿಸಿ ಆಕಾರ್ಯವನ್ನು ಮಾಡುತ್ತಿದ್ದರಲ್ಲದೆ-ಮಿಕ್ಕವೇಳೆಯನ್ನೆಲ್ಲ ತಮ್ಮ ಜ್ಞಾನಾಭಿವೃದ್ಧಿ ಸಾಧನೆಗಾಗಿ ಗ್ರಂಥ ವ್ಯಾಸಂಗ-ಲೇಖನ ಮುಂತಾದ ವ್ಯವಹಾರಗಳಲ್ಲಿ ಕಳೆಯುವರು. ನಮ್ಮವರಿಗೆ ಜೀವನೋಪಾಯಕ್ಕಾಗಿ ಏರ್ಪಟ್ಟಿರುವ ಕಾರ್ಯಕ್ಕಾಗಿ ದುಡಿಯುವುದೊಂದಲ್ಲದೆ,-ಮುಂದೆ ತಾವು ಮಾಡಬೇಕಾದ ಕೆಲಸವೇ ಪ್ರಪಂಚದಲ್ಲಿ ಇಲ್ಲವೆಂಬ ಭಾವನೆಯೊಂದು ಇರುವುದು. ಇದು ಬಹು ತಪ್ಪು ಅಭಿಪ್ರಾಯ. ಸರ್ಕಾರಿಯ ಕೆಲಸಮಾಡುವ ಹಲವು ಇಲಾಖಾ ನೌಕರರಿಗೆ ದಿನಕ್ಕೆ ಐದಾರು ಗಂಟೆಗಳಲ್ಲದೆ, ಮಿಕ್ಕವೇಳೆಯಲ್ಲಿ ಯಾವ

ಕೆಲಸವೂ ಇಲ್ಲದೆ, ಅನೇಕರು ವ್ಯರ್ಥ ಕಾಲಕ್ಷೇಪ ಮಾಡುವವರಿರುವರು. ಹಾಗಲ್ಲದೆ, ಅವರೂ ಗ್ರಂಥಕಾಲಕ್ಷೇಪ, ಲೇಖನೋದ್ಯೋಗ, ಚಿತ್ರಲೇಖನ, ಅಂಗಸಾಧನೆ, ವೈದ್ಯ, ಜ್ಯೋತಿಷ ಮುಂತಾದ ಶಾಸ್ತ್ರಾಧ್ಯಯನ, ಹಾಗಲ್ಲದಿದ್ದರೆ ಮತಸಂಬಂಧ ಗ್ರಂಥಾಭ್ಯಾಸ. ಇವುಗಳನ್ನಾಗಲೀ. ಅಥವ ಮರಗೆಲಸ, ಚಿತ್ರದಕೆಲಸ, ನೂಲುವಿಕೆ-ನೇಯ್ಗೆ, ಗಿಡಗಂಟಿಗಳನ್ನು ಬೆಳೆಸುವಿಕೆ ಮುಂತಾದುವನ್ನಾಗಲೀ ತಮ್ಮ ಉಪಉದ್ಯೋಗ (Hobby) ವಾಗಿಟ್ಟುಕೊಂಡು ತಮ್ಮಕಾಲವನ್ನು ಸದುಪಯೋಗಗೊಳಿಸಲು ಅವಕಾಶವುಂಟು. ದ್ರವ್ಯಸಂಪಾದನೆಯು ಸಾಧನವಾಗಿ ಅಲ್ಲದಿದ್ದರೂ, ವಿನೋದಕ್ಕಾಗಿಯಾದರೂ, ತಮ್ಮಮನಸ್ಸನ್ನು ಮೇಲೆ ಹೇಳಿದಂತಹ ಯಾವುದಾದರೊಂದು ಉಪವಿದ್ಯೆಯಲ್ಲಿ ಹೂಗಿಸಿದ್ದರೆ, ಮನಸ್ಸನ್ನು ಸೋಮಾರಿತನವು ಆಕ್ರಮಿಸಿಕೊಳ್ಳದಂತೆ ಉದ್ಯೋಗಶೀಲತೆಯು ಅಭ್ಯಾಸವಾಗಿ ಕಾಲಕ್ರಮದಲ್ಲಿ ಇದೇ ಸಂಪಾದನೆಗೂ ಮಾರ್ಗವಾಗದಿರದು. ಪಾಶ್ಚಾತ್ಯ ವಿದ್ಯಾವಂತರೆಲ್ಲರೂ, ತಮ್ಮ ಜೀವನಕ್ಕಾಗಿ ಅವಲಂಬಿಸಿರುವ ಉದ್ಯೋಗವಲ್ಲದೆ, ಮತ್ತೇನಾದರೊಂದು ಉಪಉದ್ಯೋಗವಿಲ್ಲದೆ ಇರುವುದಿಲ್ಲ. ಜೀವನವೊಂದು ಸಾಗಿದರೆ ಪರಮ ಪುರುಷಾರ್ಥಸಾಧನೆಯಾಯಿತು ಎಂಬ ಭಾವನೆಯು ಅವರಿಗಿರುವುದಿಲ್ಲ. ಸದಾ ಉದ್ಯೋಗಶೀಲತೆಯ ಅಭ್ಯಾಸವು ಉಂಟಾಗಬೇಕೆಂಬುದೇ ಈ 'ಹಾಬಿ' ಯ ಮುಖ್ಯ ಉದ್ದೇಶವಾಗಿದೆ.

ನಮ್ಮ ಕಥಾನಾಯಕರು ಗ್ರಂಥವ್ಯಾಸಂಗ ಲೇಖನಕಾರ್ಯ ಇವುಗಳನ್ನು ತಮ್ಮ ಉಪ ಉದ್ಯೋಗವನ್ನಾಗಿ ಇಟ್ಟುಕೊಂಡು, ಸರ್ಕಾರದ ಕೆಲಸಕ್ಕಾಗಿ ವಿನಿಯೋಗವಾಗುವ ವೇಳೆಯು ಹೊರತಾಗಿ ಮಿಕ್ಕ ಕಾಲವನ್ನೆಲ್ಲ ತಮ್ಮ ಜ್ಞಾನಾಭಿವೃದ್ಧಿಗಾಗಿ ಉಪಯೋಗಿಸಿಕೊಳ್ಳುತ್ತಿದ್ದರು. ಈವರೆಗೆ ಆರೇಳು ವರ್ಷಕಾಲ ಸರ್ಕಾರದ ಉದ್ಯೋಗದಲ್ಲಿದ್ದ ಅನುಭವವೂ ನ್ಯಾಯಪಕ್ಷಪಾತ ಸ್ವಭಾವವೂ, ಅವರಿಗೆ ಆಕಾಲದಲ್ಲಿ 'ರೆವಿನ್ಯೂ ಇಲಾಖೆಯಲ್ಲಿ ನಡೆಯುತ್ತಿದ್ದ ಲಂಚರುಷವತ್ತುಗಳ ಅನ್ಯಾಯಾಧಿಪತ್ಯವನ್ನು ಕಂಡು ಬಹು ಬೇಸರವನ್ನೂ ಅಸಹ್ಯವನ್ನೂ ಉಂಟುಮಾಡಿದ್ದುವು. ಅದನ್ನು ನೋಡಿ ಸಹಿಸಿಕೊಂಡಿರುವುದು ಅಸಾಧ್ಯವಾಯಿತು. ಆಗ ಅವರು ಈ

ವಿಚಾರಕ್ಕೆ ಸಂಬಂಧಪಟ್ಟ * ಒಂದು ಚಿಕ್ಕ ಪುಸ್ತಕವನ್ನು ಬರೆದು ಪ್ರಕಟಗೊಳಿಸಿದರು. ಮತ್ತು ಇದೇಕಾಲದಲ್ಲೇ ತಂಜಾವೂರು ಮತ್ತು ಚೆಂಗಲ್ಪಟ್ಟು ಜಿಲ್ಲೆಗಳಲ್ಲಿದ್ದ ಮಿರಾಶಿ ಹಕ್ಕುಬಾಧ್ಯತೆಗಳನ್ನು ಕುರಿತು ಒಂದು ಚಿಕ್ಕ ಹಸ್ತಕವನ್ನೂ ಬರೆದಿದ್ದರು. ಮೊದಲನೆಯ ಪುಸ್ತಕದಲ್ಲಿ. ಲಂಚ ತೆಗೆದು ಕೊಳ್ಳುವ ಅಭ್ಯಾಸವು ಸರ್ಕಾರದ ಉದ್ಯೋಗಸ್ಥರಲ್ಲಿ ಪ್ರವೇಶಿಸಿ ಪ್ರಬಲಗೊಳ್ಳಲು ಮುಖ್ಯಕಾರಣವನ್ನೂ, ಅದನ್ನು ನಿವಾರಿಸುವಲ್ಲಿ ಸರ್ಕಾರದವರು ಕೈಗೊಳ್ಳಬೇಕಾದ ಪ್ರತೀಕಾರ ಉಪಾಯಗಳನ್ನೂ ವಿಪುಲವಾಗಿ ಸೂಚಿಸಿರುತ್ತಾರೆ.

ಅವರ ಅಭಿಪ್ರಾಯವು ಈ ವಿಚಾರದಲ್ಲಿ ಎಷ್ಟು ಸಮಂಜಸವಾದುದೆಂಬುದನ್ನು ಸೂಚಿಸಲು ಆ ಹಸ್ತಕದ ಮುಖ್ಯಾಂಶಗಳಲ್ಲಿ ಒಂದೆರಡನ್ನು ಇಲ್ಲಿ ಕೊಡುತ್ತೇವೆ.

ನೌಕರರಿಗೆ ಅವರ ಜೀವನಕ್ಕೂ ಸಾಕಾಗದಷ್ಟು ಅಲ್ಪವೇತನವೂ, ಗುಣಾಢ್ಯರೂ ವಿದ್ಯಾವಂತರೂ ಆದ ಜನರು ಜವಾಬುದಾರಿಯ ಕೆಲಸಗಳಿಗೆ ನಿಯಮಿಸಲ್ಪಡದಿರುವುದೂ, ಇಲಾಖೆಯ ಮುಖ್ಯಾಧಿಕಾರಿಯು ಅಶಕ್ತನಾಗಿರುವಿಕೆಯೂ, ತನ್ಮೂಲಕ ಆ ಇಲಾಖೆಯ ಕಾರ್ಯಕ್ರಮದಲ್ಲಿ ಉಂಟಾಗುವ ದೋಷಗಳೂ, ಲಂಚದ ಅಭ್ಯಾಸವು ನೌಕರರಲ್ಲಿ ಪ್ರವೇಶಗೊಳ್ಳಲು ಮುಖ್ಯಕಾರಣವೆಂದು ಅವರು ಅಭಿಪ್ರಾಯ ಪಟ್ಟಿರುವರು.

ಲಂಚವು ಕೊಡುವವನನ್ನೂ ತೆಗೆದುಕೊಳ್ಳುವವನನ್ನೂ ಕೆಡಿಸುತ್ತದಾದುದರಿಂದ, ಅದರಿಂದ ಪ್ರಜೆಗಳಲ್ಲಿ ಪ್ರಾಮಾಣಿಕತನವೇ ಲೋಪವಾಗಲು ಅವಕಾಶವೊದಗುತ್ತದೆ. ರಾಜ್ಯಾಧಿಕಾರಿಗಳು ದಕ್ಷರೂ ಪ್ರಾಮಾಣಿಕರೂ ಆಗಿಲ್ಲದೆ, ಸುಖಾಭಿಲಾಷಿಗಳೂ ದುರ್ವ್ಯಸನಿಗಳೂ ಆಗಿರುವುದೇ ಕೀಳ್ಪಟ್ಟ ನೌಕರರಲ್ಲಿ ಲಂಚಕ್ಕೆ ಪ್ರೋತ್ಸಾಹವನ್ನೂ ಅವಕಾಶವನ್ನೂ ಉಂಟುಮಾಡುತ್ತದೆ ಎಂದು ಅವರು ಅಭಿಪ್ರಾಯ ಪಟ್ಟಿದ್ದಾರೆ.

---

* "Bribery and corruption in the Revenue Department."

ಇದನ್ನು ಹೋಗಲಾಡಿಸಬೇಕಾಗಿದ್ದರೆ, ಸರ್ಕಾರಿ ನೌಕರಿಗೆ ಜನಗಳನ್ನು ತೆಗೆದುಕೊಳ್ಳುವಾಗ ಜಾತಿ-ಮತ ಪಕ್ಷಪಾತಗಳನ್ನು ಬಿಟ್ಟು ಯೋಗ್ಯತಾ ಪರೀಕ್ಷೆಯಿಂದ ಚುನಾಯಿಸಬೇಕು. ಯೋಗ್ಯರಾದವರಿಗೆ ಅವರ ಕಾರ್ಯನಿರ್ವಾಹಕ ಶಕ್ತಿಯನ್ನು ನೋಡಿ ಒಡನೆ ಬಡ್ತಿಗಳನ್ನು ಕೊಡಬೇಕು. ಅನಾವಶ್ಯಕವಾಗಿ ಸಣ್ಣಸಣ್ಣ ನೌಕರರನ್ನು ಹಿಂಸೆಗೊಳಿಸದಂತಿರಬೇಕು. ಅಧಿಕಾರಿಗಳು, ತಮ್ಮ ಕೈಕೆಳಗಿನ ಗುಮಾಸ್ತರುಗಳ ಕೈಗೊಂಬೆಗಳಾಗಿ ವರ್ತಿಸದೆ, ದಕ್ಷತೆಯಿಂದ ಕಾಗದ ಪತ್ರಗಳನ್ನು ಸ್ವತಃ ವಿಮರ್ಶಿಸಿ ಜವಾಬು ಬರೆಸುವಷ್ಟು ಚಟುವಟಿಕೆಯನ್ನು ವಹಿಸಬೇಕು. ಮುಖ್ಯ ರಾಜ್ಯದಲ್ಲಿ ಪ್ರಾಮಾಣಿಕತನವನ್ನು ವೃದ್ಧಿಗೊಳಿಸಲಿಕ್ಕಾದರೂ, ಅಧಿಕಾರಸ್ಥಾನದಲ್ಲಿರುವವರು ದಕ್ಷರೂ ನ್ಯಾಯಪರರೂ ಆಗಿರಬೇಕು, ಎಂಬೀ ವಿಚಾರಗಳು ರಂಗಾಚಾರ್ಲುರವರ ಉಜ್ವಲಲೇಖನಿಯಿಂದ ಹೊರಬಿದ್ದವು. ಅವು ಆಗ ಅಧಿಕಾರಸ್ಥಾನಗಳಲ್ಲಿದ್ದ ಅನೇಕರಿಗೆ ತಲೆನೋವನ್ನುಂಟು ಮಾಡಿರಬಹುದು. ಆ ಪುಸ್ತಕ ಲೇಖಕರು ರಂಗಾಚಾರ್ಲುರವರು ಎಂಬುದು ತಿಳಿದಮೇಲೆ ಅನೇಕರಿಗೆ ಅವರ ವಿಷಯದಲ್ಲಿ ದ್ವೇಷಾಸೂಯೆಗಳೂ ಉಂಟಾದುವು. ಆದರೆ ಧೀರರಾದ ಅವರು ಅವುಗಳಿಗೆ ಬೆದರಲಿಲ್ಲ. ಈ ನೀತಿಬಾಹಿರ ನಡತೆಯನ್ನು ತಮಗೆ ಅವಕಾಶವೊದಗಿದಾಗಲೆಲ್ಲ ತಪ್ಪದೆ ಖಂಡಿಸುತ್ತಿದ್ದರು. ಮುಂದೆ ಮೈಸೂರು ಸಂಸ್ಥಾನದ ಸರ್ವಾಧಿಕಾರವು ಕೈಗೆ ದೊರೆತಾಗ, ತಮ್ಮ ಮನಸ್ಸಿನಲ್ಲಿದ್ದ ಈ ಸಂಗತಿಗಳನ್ನು ಕಾರ್ಯಕ್ಷೇತ್ರಕ್ಕೆ ತಂದು, ಅಧಿಕಾರಿಗಳಲ್ಲಿದ್ದ ಹಲವು ದುರ್ಗುಣಗಳನ್ನು ಖಂಡಿಸಿ, ರಾಜಕೀಯ ಸೇವಾಕ್ಷೇತ್ರವನ್ನು ಶುದ್ಧಿಗೊಳಿಸಿದರು.

ಹೀಗೆ ಉನ್ನತಾದರ್ಶಗಳನ್ನೂ, ಉತ್ತಮವಾದ ನಡತೆಯನ್ನೂ ಇಟ್ಟುಕೊಂಡು ಉದ್ಯೋಗ ಪ್ರವೇಶಮಾಡಿದರೆ, ಯಾವನಿಗೆ ತಾನೆ ಶ್ರೇಯಸ್ಸುಂಟಾಗಲಾರದು!



## ಅಧ್ಯಾಯ ೩. 'ಅಮಾತ್ಯಪದವಿ'

ಮನುಷ್ಯನಿಗೆ ಲೋಕಜೀವಿತದಲ್ಲಿ ಏರ್ಕೆಯ ಕಾಲವೊಂದು. ಇಳಿಕೆಯ ಕಾಲವೊಂದು. ಕರ್ಮಾನುಗುಣವಾಗಿ ಗ್ರಹಗತಿಯನ್ನನುಸರಿಸಿ ಏರ್ಕೆಯ ಕಾಲವೊದಗಿದಾಗ, ಅವನಿಗೆ ಧನಧಾನ್ಯ ಲಾಭವಾಗುವುದು, ಉನ್ನತವಾದ ಪದವಿ-ಗೌರವಗಳೂ, ಬಿರುದು ಬಹುಮತಿಗಳೂ ಬೇಕೆನ್ನದಿದ್ದರೂ ಲಭಿಸುವುವು. ಪತ್ನೀಪುತ್ರಾದಿ ಸುಖಸಂಪತ್ತುಗಳು ಅಭಿವೃದ್ಧಿಸ್ಥಿತಿಯಲ್ಲೇ ಇರುವಂತೆ ತೋರುತ್ತಿರುವುವು. ಮನಸ್ಸಿನಲ್ಲಿ ಆನಂದಪ್ರವಾಹವು ಅವಿಚ್ಛಿನ್ನವಾಗಿ ಹರಿಯುತ್ತಿರುವುದು. ಅವನು 'ಸಂಸಾರವು-ಸುಖಮಯವಾದುದು' ಎಂದುಕೊಳ್ಳುವನು. ಅಂತಹ ಸಂದರ್ಭದಲ್ಲಿ ಅವನು ಸಾತ್ವಿಕ ಗುಣಪ್ರಧಾನವಾದ ಮನೋಭಾವವುಳ್ಳವನಾಗಿದ್ದರೆ, ಇವೆಲ್ಲವೂ ಭಗವದನುಗ್ರಹದಿಂದ ಪ್ರಾಪ್ತವಾದುವುಗಳೆಂದು ತಿಳಿದು, ಸ್ವಾಮ್ಯವಹಿಸದೆ, ಅಹಂಕಾರಪಡದೆ, ಅಭಿಮಾನ ತ್ಯಾಗಮಾಡಿ 'ಗಾಳಿ ಬಂದ ಕೈಯಲ್ಲೇ ತೂರಿಕೊಳ್ಳಬೇಕು' ಎಂಬ ನೀತಿಯನ್ನವಲಂಬಿಸಿ, ಹಲವು ವಿಧ ದಾನಧರ್ಮಕಾರ್ಯಗಳನ್ನು ಆಚರಿಸಿ ಪಾರಲೌಕಿಕ ಪ್ರಯಾಣಕ್ಕೆ ಬುತ್ತಿಯನ್ನು ಸಿದ್ಧಗೊಳಿಸಿಕೊಳ್ಳುವನು. ಅವನು ರಾಜಸ ಗುಣಪ್ರಧಾನವಾದ ಮನೋಭಾವವುಳ್ಳವನಾಗಿದ್ದರೆ, ಇವೆಲ್ಲವೂ ನನ್ನ ಪ್ರಯತ್ನದಿಂದ ಲಭ್ಯವಾದುವೆಂದುಕೊಂಡು ಅಭಿಮಾನ ಅಹಂಕಾರಾದಿಗಳನ್ನು ವಹಿಸಿ, ಯಾರ ಲಕ್ಷ್ಯವೂ ಇಲ್ಲದೆ ವರ್ತಿಸುವನು. ತನ್ನ ಸಮಾನ ಭಾಗ್ಯಶಾಲಿಗಳೇ ಇಲ್ಲವೆಂಬ ಹುಚ್ಚು ಅವನ ತಲೆಗೆ ಏರುವುದು. ಆಗ ಅವನೂ ಸಹ 'ಗಾಳಿ ಬಂದ ಕೈಯಲ್ಲೇ ತೂರಿಕೊಳ್ಳಬೇಕು' ಎಂಬ ನೀತಿಯನ್ನವಲಂಬಿಸಿ, ಧನಧಾನ್ಯಾದಿ ಸಂಪತ್ಸೌಭಾಗ್ಯಗಳಿರುವಾಗ, ಪತ್ನೀಪುತ್ರಾದಿ ಭೋಗಸಾಮಗ್ರಿಯಿರುವಾಗ, ಯೌವನದ ಸಹಾಯವು ಅಕ್ಷಯವಾಗಿರುವಾಗ ಈಗಲ್ಲದೆ ಸುಖಪಡುವುದಕ್ಕೆ ಯೋಗ್ಯಸಮಯವು ಮತ್ತಾವಾಗ ಎಂದೆಣಿಸಿ ವಿಷಯಭೋಗಗಳಲ್ಲಿ ಮಗ್ನನಾಗುವನು. ದಾನಧರ್ಮ ಪರೋಪಕಾರಾದಿ ಕಾರ್ಯಗಳಲ್ಲಿ ನಂಬಿಕೆಯುಂಟಾಗದಿದ್ದರೂ ಅವರಿವರ ಹೊಗಳಿಕೆ ದಾಕ್ಷಿಣ್ಯಗಳಿಗಾಗಿ ಮಾಡಲು ಸಮ್ಮತಿಸುವನು. ಮಾಡುವ ಸತ್ಕಾರ್ಯವು ಭಗವದರ್ಪಿತವಾಗ

ಬೇಕೆಂಬ ಭಾವನೆಯು ಸಾತ್ವಿಕನಿಗಿದ್ದರೆ, ಮಾಡುವ ಸತ್ಕಾರ್ಯಕ್ಕೆ ಪಿರುದು ಬಹುಮತಿಗಳು ಲಭ್ಯವಾಗಬೇಕು. ಹತ್ತುಮಂದಿಯ ಬಾಯಲ್ಲಿ ತನ್ನ ಕೀರ್ತಿಯು ಹೊಗಳಲ್ಪಡಬೇಕು. ತಾನು ಧರ್ಮಾತ್ಮನೆಂದು ಲೋಕದಲ್ಲಿ ಪ್ರಸಿದ್ಧಿಯುಂಟಾಗಬೇಕು ಎಂಬ ಅಪೇಕ್ಷೆಯು ಈ ರಾಜಸನಿಗೆ ಹುಟ್ಟಿ ಮನೋಮಯ ಕ್ಷೇತ್ರದಲ್ಲಿ ಹಬ್ಬುವುದು. ಇನ್ನು ಅವನು ತಾಮಸಗುಣ ಪ್ರಧಾನನಾಗಿದ್ದರಂತೂ ಹೇಳಬೇಕಾದುದೇ ಇಲ್ಲ. ಅವನ ದುರಭಿಮಾನಕ್ಕೂ ಅಹಂಕಾರಕ್ಕೂ ಮೇರೆಯೇ ಇರಲಾರವು. ಸ್ವಕರ್ತೃತ್ವ ಅಭಿಮಾನವು ಸರ್ವವಿಧ ದುರಾಚಾರಗಳಿಗೂ ಅವನ ಮನಸ್ಸಿನಲ್ಲಿ ಪ್ರೇರಣೆಯನ್ನುಂಟು ಮಾಡುವುದು. ಅವನೂ ಸಹ, ತನ್ನ ಐಶ್ವರ್ಯ ಅಧಿಕಾರ ವಿದ್ಯೆ ಯೌವನ ಮುಂತಾದ ಸಾಧನಗಳ ದುರುಪಯೋಗಗೊಂಡು ಅವುಗಳಿಂದಲೆಲ್ಲಾ ಎಷ್ಟುಮಟ್ಟಿಗೆ ಪರಪೀಡೆ ಮಾಡಲು ಸಾಧ್ಯವುಂಟೋ ಅಷ್ಟು ಬಗೆಯಿಂದ ಮಾಡಿ ಪಾಪಸಾಧನೆ ಮಾಡಿಕೊಳ್ಳುವನು. ಒಂದುವೇಳೆ ದಾನಧರ್ಮಾದಿಗಳನ್ನು ಮಾಡುವನಾದರೂ ಅಪಾತ್ರರಿಗೆ, ಅವೇಳೆಯಲ್ಲಿ, ದಂಭದರ್ಪಗಳಿಂದ, ಹಂಗಿಸಿ-ಅಪಮಾನಗೊಳಿಸಿ, ಅಲ್ಪಸ್ವಲ್ಪವನ್ನು ಕೊಟ್ಟು, ಕೀರ್ತಿಪ್ರತಿಷ್ಠೆಗಳನ್ನು ಅಪೇಕ್ಷಿಸುವನು. ಹೀಗೆ, ಪ್ರಾಪ್ತವಾದ ಒಂದೇ ಅಭಿವೃದ್ಧಿಯು ವ್ಯಕ್ತಿಯ ಸಾತ್ವಿಕ ರಾಜಸ ತಾಮಸ ಗುಣಗಳನ್ನು ಅನುಸರಿಸಿ ಅವನಿಂದ ವಿವಿಧ ಕ್ರಿಯೆಗಳನ್ನು ಮಾಡಿಸುವುದು. ಆದರೆ ಪ್ರಕೃತಿಧರ್ಮವನ್ನನುಸರಿಸಿ ಅಭಿವೃದ್ಧಿಯಂತೆಯೇ ಅವನತಿಯಾದರೂ, ಅಪ್ರಯತ್ನವಾಗಿಯೇ ಪ್ರಾಪ್ತವಾಗುವುದು. ಐಶ್ವರ್ಯಪದವಿಗಳು ಹೋಗುವುವು, ಪತ್ನೀ ಪುತ್ರಾದಿಗಳ ವಿಯೋಗವಾಗುವುದು, ಗೃಹಾರಾಮಾದಿಗಳು ಪರಾಕ್ರಾಂತವಾಗುವುವು. ಅಂತಹ ವೇಳೆಯಲ್ಲೂ ಸಾತ್ವಿಕನು ಎಲ್ಲವೂ ಭಗವದಧೀನವೆಂದು ತಿಳಿದು ನಿಶ್ಚಿಂತನಾಗಿರುವನು. ಆ ಕಾರಣದಿಂದ ಅನ್ಯಾಯಮಾರ್ಗವನ್ನವಲಂಬಿಸನು. ತನಗೆ ಪ್ರಾಪ್ತವಾದ ದುರ್ವಿಧಿಗಾಗಿ ಪರರನ್ನು ನಿಂದಿಸನು. ಕಷ್ಟಸಂಕಟಗಳೇನಿದ್ದರೂ, ಹಲುಬದೆ ಹಂಬಲಿಸದೆ ಕಾತರಗೊಳ್ಳದೆ ಶಾಂತತೆಯಿಂದ ಅನುಭವಿಸುವನು. ಆದರೆ ಇಂತಹ ಸಂದರ್ಭಗಳಲ್ಲಿ ರಾಜಸತಾಮಸರ ಮನೋವೃತ್ತಿಯೇ ಬೇರೆ. ತಮಗೆ ಪ್ರಾಪ್ತವಾದ ಕಷ್ಟಕ್ಕೆಲ್ಲಾ ಅವರು ಪರಕೀಯರು ಕಾರಣರೆಂದು ಅವರನ್ನು ನಿಂದಿಸಿ-ದ್ವೇ

ಪಿಸುವರು. ಸಾಧ್ಯವಿರುವ ಅನ್ಯಾಯಮಾರ್ಗಗಳಿಂದಲೆಲ್ಲ, ಪುನಃ ಅವು ಗಳನ್ನು ಗಳಿಸಬೇಕೆಂದು ವೃಥಾ ಪ್ರಯತ್ನಪಡುವರು. ಆದರೆ, ಬೆಟ್ಟದಿಂದ ಉರುಳತೊಡಗಿದವನು ತಳಕ್ಕೆ ಬಂದು ಬೀಳುವವರೆಗೂ ಹೇಗೆ ನಿಲ್ಲಲಾರ ನೋ ಹಾಗೆಯೇ ಅವನ ಗತಿಯಾದರೂ ಇರುವುದು. ಕೇವಲ ಕರ್ಮಾ ಧೀನವಾಗಿ ನಡೆಯುತ್ತಿರುವ ಈ ಕ್ರಿಯೆಗಳಲ್ಲಿ ಮನುಷ್ಯನು ತನ್ನ ಸ್ವಾಮ್ಯ ವನ್ನು ಸ್ಥಾಪಿಸದೆ, ಕೇವಲ ಪರತಂತ್ರನಂತೆ ನಿರ್ಲಿಪ್ತನಾಗಿರುವವರೆಗೆ ಎಲ್ಲವೂ-ಅಭಿವೃದ್ಧಿ ಅವನತಿಗಳೆರಡೂ-ಅವನಿಗೆ ಉದ್ವೇಗವನ್ನಾಗಲೀ ವಿಷಾ ದವನ್ನಾಗಲೀ ಉಂಟುಮಾಡದೆ ಇರುವುವು. ಹಾಗಲ್ಲದೆ, ಈ ಎಲ್ಲಕ್ಕೂ ಕಾರಣನು ನಾನೇ ಎಂದದಿನವೇ ಅವನು ಅವುಗಳ ಆಶಾಮೋಹಗಳಲ್ಲಿ ಬಂ ಧಿತನಾಗಿ, ಶಾಂತತೆಯನ್ನು ನೀಗಿಕೊಂಡು ಅಗಾಧ ದುಃಖಕ್ಕೀಡಾಗುವನು. ಹೀಗೆ ಮೋಹದಿಂದ ಬಾಧಿತನಾದವನಿಗೆ ಅವನತಿಯಿಂದ ಮಾತ್ರ ವ್ಯಥೆ ಯುಂಟಾಗುವುದೆಂದಲ್ಲ-ಅಭಿವೃದ್ಧಿಯಲ್ಲೂ ಅವನು ವಿಶೇಷ ತಾಪತ್ರಯ ಗಳಲ್ಲಿ ಸಿಕ್ಕಿ ನರಳುವುದು ತಪ್ಪದು. ಸಾತ್ವಿಕಗುಣಪ್ರಧಾನರಾದ ನಮ್ಮ ಕಥಾನಾಯಕರಂತಹ ಮಹಾನ್ ವ್ಯಕ್ತಿಗಳಿಗೆ ಹೀಗೆ ಅಭಿವೃದ್ಧಿಯು ಕಾಲ ವೊದಗಿದಾಗ, ಅವರಿಂದ ಲೋಕಕ್ಕೂ ಮಹೋಪಕಾರವಾಗುವುದು. ರಾ ಜಸತಾಮಸರಿಗೆ ಅಭಿವೃದ್ಧಿಯು ಯೋಗವೊದಗಿದರೆ, ಅದರಿಂದ ಲೋಕವೇ ಮಹತ್ಕಷ್ಟಕ್ಕೆ ಈಡಾಗುವುದು.

ಸೈದಾಪೇಟೆಯ ತಹಶೀಲ್ದಾರೀ ಕೆಲಸದಿಂದ ರಂಗಾಚಾರ್ಲುಗಾರುವ ರಿಗೆ ನೆಲ್ಲೂರಿನ ನಾಯಬ್ ಶಿರಸ್ತೆದಾರಿ ಕೆಲಸಕ್ಕೆ ವರ್ಗವಾಯಿತು. ಮುಂದೆ ಎರಡು ವರ್ಷಗಳ ಒಳಗಾಗಿಯೇ ರಾಜಮಹೇಂದ್ರಿಗೆ ಡೆಪ್ಯುಟಿ ಕಲೆಕ್ಟರ ಅಧಿಕಾರವು ದೊರೆತು ವರ್ಗವಾಯಿತು. ಈ ನೂತನ ಉದ್ಯೋಗದಲ್ಲಿ ಇನ್ನೂ ಕೆಲವು ವಾರಗಳು ಕಳೆದುವೆಂಬ ವೇಳೆಗೆ ಮದರಾಸು ಸರ್ಕಾರ ದವರಿಂದ ಇನಾಂಕಮಿಷನ್ ಎಂಬ ನೂತನ ಇಲಾಖೆಯೇ ಸ್ಥಾಪಿಸಲ್ಪ ಟ್ಟಿತು. ಅದರ ಅಧ್ಯಕ್ಷತೆಯು ಎ.|| ಟೈಲರ್‌ರವರ ಪಾಲಿಗೇ ಬಂದುದ ರಿಂದ ಅವರು ತಮ್ಮ ಮಿತ್ರರಾದ ರಂಗಾಚಾರ್ಲುಗಾರುವರನ್ನು ತಿಂಗ ಳೊಂದಕ್ಕೆ ೬೦೦ ರೂಪಾಯಿ ಸಂಬಳ ೧೦೦ ರೂಪಾಯಿ ಉಪವೇತನದ

ಮೇಲೆ ತಮ್ಮ ಬಳಿ ಉದ್ಯೋಗಕ್ಕೆ ಕರೆಸಿಕೊಂಡರು. ಆ ಉದ್ಯೋಗದಲ್ಲಿ ಮುಂದೆ ಏಳುವರ್ಷಕಾಲ ಕಳೆದಬಳಿಕ ಅದೇ ಟೈಲರ್ ಸಾಹೇಬರೇ, ಹಿಂದಣ ಸ್ಥಾನದ ರೈಲ್ವೆಗಳ ಆಡಳಿತವನ್ನು ತನಿಖೆಮಾಡುವುದಕ್ಕಾಗಿ ನಿಯಮಿತರಾದರು. ಆಗ್ಗೆ ಅವರು ತಮ್ಮ ಸಹೋದ್ಯೋಗಿಯಾಗಿರಲು ತಿಂಗಳೊಂದಕ್ಕೆ ೯೦೦ ರೂಪಾಯಿಗಳ ವೇತನದಮೇಲೆ ರಂಗಾಚಾರ್ಯರನ್ನೇ ಚುನಾಯಿಸಿಕೊಂಡರು. ರಂಗಾಚಾರ್ಯರು ತಮ್ಮ ಆಪ್ತಮಿತ್ರರನ್ನು ಕೇಳಿ ಅವರ ಅಭಿಪ್ರಾಯ ಪಡೆಯಲಿಕ್ಕೂ ಅವಕಾಶವಿರಲಿಲ್ಲವಾದುದರಿಂದ ಆ ಕಾರ್ಯವನ್ನು ಒಪ್ಪಿಕೊಂಡು ಬಿಟ್ಟರು. ಈ ನೂತನ ಉದ್ಯೋಗದ ಕೆಲಸಕಾರ್ಯಗಳಿಗಾಗಿ ಅವರು ಸಮುದ್ರ ಪ್ರಯಾಣ ಮಾಡಿಕೊಂಡು ಕಲ್ಕತ್ತೆಗೆ ಹೋಗಬೇಕಾಯಿತು.— 'ಬ್ರಾಹ್ಮಣನಿಗೆ ಸಮುದ್ರ ಪ್ರಯಾಣವು ನಿಷಿದ್ಧವೆಂದು ಶಾಸ್ತ್ರಗಳು ಹೇಳುತ್ತವೆ. ಅಶಾಸ್ತ್ರೀಯವಾದ ಈ ಆಚರಣೆಗೆ ನಿಮ್ಮಂತಹವರೇ ಮುಂದಾಳುಗಳಾಗುವುದು ತಕ್ಕುದಲ್ಲ. ಆದ್ದರಿಂದ ಸಮುದ್ರ ಪ್ರಯಾಣವನ್ನು ನಿಲ್ಲಿಸಬೇಕು' ಎಂದು ಅವರ ನಂಟರಿಷ್ಟರು ವಿಶೇಷ ಪ್ರತಿಬಂಧಕವನ್ನುಂಟು ಮಾಡಿದರು. ಆದರೆ ರಂಗಾಚಾರ್ಯರು ಅದನ್ನು ಮಾನಸಿಕಮಾಡಿ ತಮ್ಮನಿಶ್ಚಯದಂತೆ ಪ್ರಯಾಣಮಾಡಿಯೇ ಮಾಡಿದರು. ಈ ಉದ್ಯೋಗದಲ್ಲೂ ಸಹ ಅವರ ಕಾರ್ಯನಿಷ್ಠೆ, ನಿಸ್ಪೃಹತೆ, ನಿರಲಸಿಕೆ ಮುಂತಾದುವು ಮೇಲ್ಪಟ್ಟ ಅಧಿಕಾರಿಗಳ ಗಮನವನ್ನು ಆಕರ್ಷಿಸಿ, ಅವರು ಇತರ ಅನೇಕಮಂದಿ ಆಂಗ್ಲೇಯ ಉದ್ಯೋಗಸ್ಥರ ಪ್ರೀತಿವಿಶ್ವಾಸಗಳಿಗೆ ಪಾತ್ರರಾದರು. ಉತ್ತರದೇಶದ ಈ ಕೆಲಸವನ್ನು ಮುಗಿಸಿಕೊಂಡು ಮದರಾಸಿಗೆ ಹಿಂತಿರುಗಿದ ತರುವಾಯ ಅವರು ಅದೇ ಕೆಲಸಕ್ಕಾಗಿ ಮುಂಬಯಿ ಪ್ರಾಂತಕ್ಕೂ ಸಂಚಾರಹೋಗಿ ಬರಬೇಕಾಯಿತು ಆ ಕಾರ್ಯವನ್ನೂ ಆಚಾರ್ಯರು ತೃಪ್ತಿಕರವಾಗಿ ನೆರವೇರಿಸಿದರು. ಈ ಸಂದರ್ಭದಲ್ಲಿ ಮಿ|| ಟೈಲರ್‌ರವರು ಬರೆದಿರುವ ಒಂದು ಪತ್ರದಲ್ಲಿ:—"ಶ್ರೀಮಾನ್ ರಂಗಾಚಾರ್ಯರು ೧೮೪೯ರಲ್ಲಿ ಕಾಲೇಜನ್ನು ಬಿಟ್ಟು ಉದ್ಯೋಗಕ್ಕೆ ಸೇರಿದಾಗಿನಿಂದಲೂ ನಮ್ಮಿಬ್ಬರ ಸ್ನೇಹವೂ ಅತಿಶಯ ನಿಕಟವೂ ನಿಷ್ಕಪಟವಾದುದೂ ಆಗಿದೆ. ಪ್ರಾರಂಭದಲ್ಲೂ, ತರುವಾಯ ಉದ್ಯೋಗದಲ್ಲಿ ಅಭಿವೃದ್ಧಿ

ಹೊಂದುತ್ತಾ ಬಂದಂತೆಯೂ ನಾನು ಅವರಿಗೆ ಏನಾದರೂ ಅಲ್ಪಸ್ವಲ್ಪ ಸಹಾಯ ಮಾಡಿದ್ದರೆ, ಅದಕ್ಕೆ ಪ್ರತಿಯಾಗಿ ತಮ್ಮ ಕಾರ್ಯನಿಷ್ಠೆಯಿಂದಲೂ, ಆಯಾಸವನ್ನೇ ಅರಿಯದೆ ಮಾಡಿದ ಅಗಾಧ ಸೇವೆಯಿಂದಲೂ ಅವರು ಅದಕ್ಕೆ ಹತ್ತು ಪಾಲು-ನೂರುಪಾಲು ನನಗೆ ಸಹಾಯ ಮಾಡಿದ್ದಾರೆ. ಅವರ ಲೋಕವ್ಯವಹಾರ ಜ್ಞಾನವೂ, ತಮ್ಮ ಕೈಯಲ್ಲಿನ ಕೆಲಸದ ವಿಷಯದಲ್ಲಿನ ಸಂಪೂರ್ಣ ಪರಿಚಯವೂ, ಕಾರ್ಯನಿರ್ವಾಹಕ ಸಾಮರ್ಥ್ಯವೂ, ಮತ್ತು ಬೇಸರಗೊಳ್ಳದೆ ಯಾವ ಹೊತ್ತಿಗೆಂದರೆ ಆಹೊತ್ತಿಗೆ ಮುಂದೆ ಬಂದು ಕೆಲಸಮಾಡುತ್ತಿದ್ದ ಅವರ ಸೌಜನ್ಯವೂ ಅಸಾಧಾರಣವಾದವು. ನಾನು ನನ್ನ ಸ್ಥಾನದಿಂದ ಏನಾದರೂ ಕೆಲಸಮಾಡಲು ಸಾಧ್ಯವಿದ್ದರೆ, ಅದಕ್ಕೆಲ್ಲಾ ಶ್ರೀಮಾನ್ ರಂಗಾಚಾರ್ಲುಯವರ ಸಹಾಯವೇ ಮುಖ್ಯಕಾರಣವೆಂದು ನಾನು ನಿಸ್ಸಂಕೋಚವಾಗಿ ಹೇಳುತ್ತೇನೆ'' ಎಂದು ಹೇಳಿರುವರು.

ತರುವಾಯ ರಂಗಾಚಾರ್ಲುಯವರು ಮದರಾಸು ರೈಲ್ವೆ ಕಂಪೆನಿಯ ಕಮಿಷನರಾಗಿ ನಿಯಮಿತರಾದರು. ೧೮೬೪ನೆಯ ಇಸವಿಯಲ್ಲಿ ಕರೆನ್ಸಿ ಇಲಾಖೆಯು ಏರ್ಪಡಾದ ತರುವಾಯ ಅವರಿಗೆ ಟ್ರಜರಿ ಡೆಪ್ಯುಟಿಕಲೆಕ್ಟರ ಉದ್ಯೋಗಕ್ಕೆ ಕಲ್ಲೇಕೋಟೆಗೆ ವರ್ಗವಾಯಿತು. ಅಲ್ಲಿ ಅವರು ನಿರ್ವಹಿಸಿದ ಕೆಲಸವೂ ಕಲೆಕ್ಟರಾದ ಮಿ|| ಜಿ. ಬಲ್ಲಾರ್ಡ್ ಮುಂತಾದ ದೊಡ್ಡ ಅಧಿಕಾರಿಗಳಿಗೆ ಅತಿಶಯ ತೃಪ್ತಿಯನ್ನುಂಟುಮಾಡಿತು.

ಮೈಸೂರು ರಾಜ್ಯವು ೧೮೩೧ನೆಯ ಇಸವಿಯಲ್ಲೇ ಬ್ರಿಟಿಷ್ ಸರ್ಕಾರದ ಆಡಳಿತಕ್ಕೆ ಒಳಪಟ್ಟಿದ್ದಿತೆಂದು ಹಿಂದೆಯೇ ಹೇಳಿದೆಯಲ್ಲವೆ? ಮುಮ್ಮಡಿ ಕೃಷ್ಣರಾಜಒಡೆಯರು ೧೮೬೮ನೆಯ ಮಾರ್ಚಿ ೨೭ನೆಯ ದಿನ ರಾತ್ರಿ ೧೧ ಗಂಟೆಗೆ ಸ್ವರ್ಗಸ್ಥರಾದರು. ಆಗ ಅರಮನೆಯ ಆಡಳಿತಗಳು ಕೇವಲ ಅವ್ಯವಸ್ಥಿತವಾಗಿದ್ದುವು. ಅವರ ಪಾಲಕಪುತ್ರರಾದ ಶ್ರೀ ಚಾಮರಾಜೇಂದ್ರ ಒಡೆಯರು ಇನ್ನೂ ಬಾಲ್ಯವಯಸ್ಸಿನಲ್ಲಿದ್ದರು. ಆದುದರಿಂದ, ಅರಮನೆಗೆ ಸಂಬಂಧಿಸಿದ ಚರಸ್ಥಿರ ಸ್ವತ್ತುಗಳು ಹಲಾಕಾಗದಂತೆ ಜೋಪಾನಪಡಿಸುವುದೂ, ಬಾಲ್ಯವಯಸ್ಸಿನ ಚಾಮರಾಜೇಂದ್ರರಿಗೆ ವಿದ್ಯಾಭ್ಯಾಸಮಾಡಿಸಿ ಹದಿನೆಂಟನೆಯ ವಯಸ್ಸು ಪ್ರಾಪ್ತವಾದೊಡನೆಯೇ ಅವರಿಗೆ ರಾಜ್ಯವನ್ನು

ಒಪ್ಪಿಸುವುದೂ ಬ್ರಿಟಿಷ್ ಸರ್ಕಾರದವರ ಕರ್ತವ್ಯವಾಗಿತ್ತು. ಆ ಕಾರ್ಯ ನಿರ್ವಹಣವು ಮೇಜರ್ ಎಲಿಯಟ್ ಎಂಬೊಬ್ಬ ಆಂಗ್ಲೇಯಾಧಿಕಾರಿಗೆ ವಹಿಸಲ್ಪಟ್ಟಿತ್ತು. ಆತನ ಸಲಹೆಯನ್ನು ಅನುಸರಿಸಿ, ಆಗ ಬ್ರಿಟಿಷ್ ರೆಸಿಡೆಂಟಾಗಿದ್ದ ಬೌರಿಂಗ್‌ಸಾಹೇಬರು, ಸಮರ್ಥನೂ ಅನುಭವಸ್ಥನೂ ಆದ ಒಬ್ಬ ದೇಶೀಯ ಅಧಿಕಾರಿಯನ್ನು ಕಳುಹಿಸಿರೆಂದು ಮದರಾಸಿನಲ್ಲಿದ್ದ ಮಿ|| ಎಲ್ಲಿಸ್‌ಸಾಹೇಬರಿಗೆ ಬರೆದರು. ಎಲ್ಲಿಸ್‌ಸಾಹೇಬರು ನಮ್ಮ ರಂಗಾಚಾರ್ಲುಯವರನ್ನು ಆ ಕೆಲಸಕ್ಕೆ ಚುನಾಯಿಸಿ ಕಳುಹಿಸಿಕೊಟ್ಟರು. ತಮ್ಮ ಕೈಗೆ ಯಾವ ಕೆಲಸಬಂದರೂ, ಪ್ರತಿಹೇಳದೆ ಅದನ್ನು ಅಂಗೀಕರಿಸಿ ತೃಪ್ತಿಕರವಾಗಿಮಾಡಿ ಮುಗಿಸುವುದು ಅವರ ಜನ್ಮಸಿದ್ಧ ಸಂಪ್ರದಾಯವಾಗಿದ್ದುದರಿಂದ ಶ್ರೀಮಾನ್ ರಂಗಾಚಾರ್ಲುರವರು ಒಡನೆ ಆ ಕೆಲಸವನ್ನು ಒಪ್ಪಿಕೊಂಡು ಹೊರಟು ಮೈಸೂರನ್ನು ಸೇರಿ, ತಮ್ಮನೂತನ ಕಾರ್ಯದ ಜವಾಬುದಾರಿಯನ್ನು ವಹಿಸಿಕೊಂಡರು.

ರಂಗಾಚಾರ್ಲುರವರ ಈ ನೂತನ ಉದ್ಯೋಗಕ್ಕೆ ಅರಮನೆಯ ಕಂಟ್ರೋಲರ್ ಎಂದು ಹೆಸರು. ತಿಂಗಳೊಂದಕ್ಕೆ ೮೦೦ ರೂಪಾಯಿಗಳ ವೇತನ. ಅವರ ಈ ನೂತನ ಉದ್ಯೋಗವು ಎಷ್ಟುಮಟ್ಟಿನ ಜವಾಬುದಾರಿಯನ್ನುಳ್ಳದು ಎಂಬುದನ್ನು ತಿಳಿಯಲು ಆಗ ಅರಮನೆಯ ಆಡಳಿತವಿದ್ದ ಸ್ಥಿತಿಯನ್ನು ತಿಳಿಯುವುದು ಆವಶ್ಯಕ. ಅರಮನೆಯ ಇಲಾಖೆಯಿಂದ ಆಗ ೬೮೯ ಮಂದಿ ರಾಜಬಂಧುಗಳೂ, ೯೬೮೭ ಮಂದಿ ಇತರ ನೌಕರರೂ ಜೀವಿಸುತ್ತಿದ್ದರು. ಪುರೋಹಿತರು, ಪಂಡಿತರು, ಸಂಗೀತಗಾರರು, ವೈದ್ಯರು, ಓಲೇಕಾರರು, ಒಡೆಯರು, ಗೊಲ್ಲರು, ಕಟ್ಟಿಗೆಯವರು, ಭತ್ಯೆಯವರು, ಕಂದಾಚಾರದವರು, ಜಟ್ಟಿಗಳು, ಮಾಹುತರು, ಮೋಳಗಾರರು, ಮಪಾಲ್ಕಿಯವರು, ನರ್ತಕರು, ವಿನೋದಗಾರರು ಹೀಗೆ ಇಪ್ಪತ್ನಾಲ್ಕು ಬೇರೆಬೇರೆ ಇಲಾಖೆಯವರಿಗಾಗಿ ತಿಂಗಳಿಗೆ ೫೭೪೫೨ ರೂಪಾಯಿಗಳು ಬಟವಾಡೆಯಾಗುತ್ತಿದ್ದಿತು. ರಂಗಾಚಾರ್ಲುರವರು ಕೆಲಸದ ಛಾರ್ಜನ್ನು ವಹಿಸಿಕೊಂಡ ಒಡನೆಯೇ, ಮೊದಲು ಅರಮನೆಯಲ್ಲಿದ್ದ ಜವಾಹಿರಿಗಳ ಮತ್ತು ಇತರ ಬೆಲೆಯುಳ್ಳ ವಸ್ತುಗಳ ಒಂದು ಕರಾರುವಾಕಾ ಪಟ್ಟಿಯನ್ನು ತಯಾರಿಸಿ, ಅದನ್ನು ಭದ್ರಪಡಿಸಿದರು. ತರುವಾಯ, ಅನಾ

ವಶ್ಯಕವಾದ ಹೆಚ್ಚು ಸಿಬ್ಬಂದಿಯನ್ನು ತೆಗೆದುಹಾಕಿ, ಇರುವವರಿಗೆ ಗೊತ್ತಾದ ಕೆಲಸಕಾರ್ಯಗಳನ್ನು ನಿಯಮಿಸಿ, ಮೇಲೆ ಹೇಳಿದಂತೆ ಇದ್ದ ಅಪಾರವಾದ ವೆಚ್ಚವನ್ನು ತಿಂಗಳಿಗೆ ೧೯೨೬೮ ರೂ. ಗಳಾಗುವಂತೆ ಮಾಡಿದರು. ಸುಮಾರು ಮೂರು ಮೂರೂವರೆ ತಿಂಗಳೊಳಗಾಗಿ ಹೀಗೆ ಅರಮನೆಯ ವೆಚ್ಚದ ಮೂರರಸೆ ಎರಡುಭಾಗವು ತಗ್ಗಿಸಲ್ಪಟ್ಟಿತು. ಅವರು ಧೈರ್ಯ ಸ್ಥೈರ್ಯಗಳಿಂದಲೂ, ತಾಳ್ಮೆಯಿಂದಲೂ ಮಾಡಿದ ಈ ಕೆಲಸವು ಮಿ|| ಎಲಿಯಟ್ ಮತ್ತು ಬೌರಿಂಗ್ ಸಾಹೇಬರಿಗೆ ಬಹು ತೃಪ್ತಿಯನ್ನುಂಟು ಮಾಡಿತು. ಬೌರಿಂಗ್ ಸಾಹೇಬರು ಇಂಡಿಯಾ ಸರ್ಕಾರಕ್ಕೆ ಬರೆದ ವರದಿಯಲ್ಲಿ ರಂಗಾಚಾರ್ಲುಯವರ ಶ್ರದ್ಧೆ, ಸಹನೆ, ಸ್ಥೈರ್ಯ, ಪ್ರಾಮಾಣಿಕತನ ಮುಂತಾದುವುಗಳನ್ನು ಕುರಿತು ವಿಶೇಷವಾಗಿ ಪ್ರಶಂಶಿಸಿ ಹೇಳಿದರು. ಹಾಗೆ ಮೇಲಿನಿಂದ ಪ್ರಶಂಸೆಯು ದೊರೆತಂತೆಯೇ ಇಲ್ಲಿ ಅರಮನೆಯ ಉಗ್ರಾಣದಲ್ಲಿ ಹೆಗ್ಗಣಗಳಂತೆ ಸೇರಿಕೊಂಡು ಮೇಯುತ್ತಿದ್ದ ಬಹುಮಂದಿಗೆ ಜೀವನೋಪಾಯವು ತಪ್ಪಿದುದರಿಂದ, ರಂಗಾಚಾರ್ಲುಯವರು ಬಹುಜನರ ದ್ವೇಷಾಸೂಯೆಗಳಿಗೂ ಕಾರಣರಾಗಬೇಕಾಯಿತು. ಮಾತ್ರವಲ್ಲ—ರಂಗಾಚಾರ್ಲುಯವರ ಅರಮನೆಯ ಆಡಳಿತವು ಅನೇಕ ಮಂದಿ ಸ್ವಾರ್ಥಸಾಧಕರ ಕಣ್ಣಿಗೆ ಶೂಲಪ್ರಾಯವಾಗಿದ್ದುದರಿಂದ ಅವರ ಮೇಲೆ ಹಲವು ದೋಷಾರೋಪಣೆಗಳೂ ಬಂದುವು. ಆದರೆ ಧೀರರಾದ ರಂಗಾಚಾರ್ಲುಯವರು ಆ ಪೊಳ್ಳುಬೆದರಿಕೆಗಳಿಗೂ ದೂಷಣೆ ಭೂಷಣೆಗಳಿಗೂ ಲಕ್ಷ್ಯಕೊಡದೆ, ತಮಗೆ ನ್ಯಾಯವೆಂದು ತೋರಿದುದನ್ನು ಧೈರ್ಯವಾಗಿ ಆಚರಿಸಿಬಿಡುತ್ತಿದ್ದರು. ಪ್ರಭುವಿನ ಅಭಿವೃದ್ಧಿಯನ್ನೂ ಕ್ಷೇಮ ಚಿಂತನೆಯನ್ನೂ ಮಾತ್ರ ಮನಸ್ಸಿನಲ್ಲಿಟ್ಟು ಕಾರ್ಯಮಾಡುತ್ತಿದ್ದ ಅವರಿಗೆ ಪರ್ವತದಂತೆ ಬರುತ್ತಿದ್ದ ಈ ಅಪವಾದಗಳೆಲ್ಲವೂ ಮಂಜಿನಂತೆ ಕರಗಿ ಹೋಗುತ್ತಿದ್ದುವು.

ವೃದ್ಧರಾಜರು ಮೃತರಾದ ವರ್ಷದಲ್ಲೇ-ಡಿಸೆಂಬರು ೨೩ನೆಯ ಶುಭ ದಿನದಲ್ಲಿ ಶ್ರೀ ಚಾಮರಾಜೇಂದ್ರ ಒಡೆಯರವರಿಗೆ ಪಟ್ಟಾಭಿಷೇಕ ಮಹೋತ್ಸವವು ನೆರವೇರಿ, ಅವರ ಪೋಷಣೆ ಮತ್ತು ವಿದ್ಯಾಭ್ಯಾಸಾದಿಗಳಿಗೆ ತಕ್ಕ ಏರ್ಪಾಟು ಮಾಡಲ್ಪಟ್ಟಿತು. ಲೆಫ್ಟಿನೆಂಟ್ ಕರ್ನಲ್ ಹೀನಸ್, ಕರ್ನಲ್

ಮ್ಯಾಲೆಸನ್ ಮತ್ತು ಜೇಮ್ಸ್‌ಗಾರ್ಡನ್ ಎಂಬ ಇಂಗ್ಲೀಷ್ ಅಧಿಕಾರಿಗಳು ಒಬ್ಬರಾದ ಮೇಲೊಬ್ಬರಂತೆ ಅವರ ಪೋಷಣೆಯ ಭಾರವನ್ನು ವಹಿಸಿ ಶ್ರದ್ಧೆಯಿಂದ ನೋಡಿಕೊಳ್ಳುತ್ತಿದ್ದರು. ರಂಗಾಚಾರ್ಲುಯವರು, ಅರಮನೆಯ ಕಾರ್ಯದರ್ಶಿಗಳಾಗಿ ನಿಯಮಿತರಾಗಿದ್ದುದರಿಂದ ಅವರೂ ಮೇಲ್ಕಂಡ ಐರೋಪ್ಯರಿಗೆ ಸರ್ವವಿಧದಲ್ಲೂ ಸಹಾಯಕರಾಗಿ ಮಹಾರಾಜರ ಯೋಗಕ್ಷೇಮಚಿಂತನೆಯಲ್ಲಿ ಭಾಗಿಗಳಾಗಿದ್ದರು. ರಂಗಾಚಾರ್ಲುಯವರು ಆ ಸಂದರ್ಭದಲ್ಲಿ, ಕೇವಲ ವೇತನಕ್ಕಾಗಿ ನೌಕರಿಮಾಡುವ ಒಬ್ಬ ರಾಜಸೇವಕನೆಂಬಷ್ಟು ಮಟ್ಟಿಗೆ ಮಾತ್ರವಲ್ಲ. ರಾಜರ ಪಾಠಪ್ರವಚನಗಳು, ಅವರ ಆಟಪಾಟಗಳು, ಮಾತುಕತೆಗಳು, ಅಂಗಸಾಧನೆ, ಆರೋಗ್ಯ, ಉಡುಪು ನಡೆನುಡಿಗಳು ಮುಂತಾದ ಸಕಲವನ್ನೂ ತಿದ್ದುವುದರಲ್ಲಿ ಆಸಕ್ತಿವಹಿಸಿ, ಅವರನ್ನು ಆ ಮಹತ್ಪದವಿಗೆ ಯೋಗ್ಯರನ್ನಾಗಿ ತಯಾರಿಸುವಲ್ಲಿ, ವಿಶೇಷ ಶ್ರದ್ಧೆವಹಿಸಿ ಕೆಲಸಮಾಡಿದರು. ಅವರು ಮಹಾರಾಜರ ಪುರೋವೃದ್ಧಿ ವಿಚಾರದಲ್ಲಿ ಪಿತೃವಾತ್ಸಲ್ಯವನ್ನಿಟ್ಟು ತಿದ್ದಿ ಅವರನ್ನು ಸನ್ಮಾರ್ಗದಲ್ಲಿ ನಡೆಯುವಂತೆ ಪ್ರೇರಣೆಯನ್ನುಂಟು ಮಾಡಿದುದನ್ನು ಚಾಮರಾಜೇಂದ್ರರಾಜರೂ ಮರೆಯದೆ ಅವರಲ್ಲಿ ಗುರುಭಕ್ತಿಯನ್ನಿಟ್ಟು, ಹಿತಚಿಂತಕನಾದ ತಂದೆಯಲ್ಲಿ ವಿನಯವಿಧೇಯತೆಗಳಿಂದ ನಡೆದುಕೊಳ್ಳುವ ಮಗನಂತೆ ನಡೆದುಕೊಳ್ಳುತ್ತಿದ್ದರು.

ಸರ್ವತೋಮುಖವಾದ ಪ್ರತಿಭಾಸಂಪನ್ನರಾದ ರಂಗಾಚಾರ್ಲುಯವರು ತಮ್ಮ ಕಾರ್ಯವು ಅರಮನೆಯ ಮತ್ತು ಮಹಾರಾಜರ ಮಟ್ಟಿಗೇ ಸಂಬಂಧಿಸಿದುದೆಂದು ಅಷ್ಟಕ್ಕೇ ತೃಪ್ತರಾಗಿ ಕುಳ್ಳಿರಲಿಲ್ಲ. ೧೮೭೪ನೆಯ ಸಂವತ್ಸರದಲ್ಲಿ, ಅವರು * ಮೈಸೂರಿನಲ್ಲಿ 'ಬ್ರಿಟಿಷರ ಆಡಳಿತ' ಎಂಬ ಶಿರೋನಾಮೆಯನ್ನುಳ್ಳ ಒಂದು ಚಿಕ್ಕಪುಸ್ತಕವನ್ನು ಬರೆದರು. ಅದು ಇಂಗ್ಲೆಂಡಿನಲ್ಲಿ ಛಾಪಿಸಲಾಗಿ ಪ್ರಕಟವಾಯಿತು. ಅದನ್ನು ಓದಿದ ಇಂಗ್ಲೀಯಾಧಿಕಾರಿಗಳೆಲ್ಲರಿಗೂ ರಂಗಾಚಾರ್ಲುಯವರು, ಕೇವಲ ಅರಮನೆಯ ಕಂಟ್ರೋಲರು ಮಾತ್ರವಲ್ಲ-ಅವರಲ್ಲಿ ಸಂಸ್ಥಾನಾಧಿಪತ್ಯಕ್ಕೆ ಆವಶ್ಯಕವಾದ ಅಗಾಧ ಶಕ್ತಿಸಾಮರ್ಥ್ಯಗಳೂ ಅಡಗಿವೆ ಎಂಬ ಭಾವನೆಯುಂಟಾಯಿತು.

---

* The British Administration in Mysore.

ಮುಂದೆ ಕೆಲವು ದಿನಗಳಲ್ಲೇ (೧೮೭೯) ಆಗ ಮೈಸೂರಿನ ಚೀಫ್ ಕಮಿಷನರಾಗಿದ್ದ ಮಿ|| ಗಾರ್ಡನ್ ಸಾಹೇಬರು ಅವರನ್ನು ತಮ್ಮ ರೆವಿನ್ಯೂ ಸೆಕ್ರೆಟರಿಯಾಗಿ ಚುನಾಯಿಸಿಕೊಂಡರು. ಅವರಿಬ್ಬರೂ ಐಕ್ಯವಾಗಿ ಸಂಸ್ಥಾನದಲ್ಲಿ ಹೆಚ್ಚಿ ಹೋಗಿದ್ದ ಖರ್ಚುವೆಚ್ಚಗಳನ್ನು ತಗ್ಗಿಸಿ, ಆಡಳಿತವನ್ನು ಕ್ರಮಪಡಿಸುವುದರಲ್ಲಿ ನಿರತರಾದರು. ಪ್ರಾರಂಭಕ್ಕೆ ಇಂಗ್ಲೀಯ ಅಧಿಕಾರಿಗಳಿಗೆ ಮಿತಿ ಮೀರಿ ಕೊಡುತ್ತಿದ್ದ ಸಂಬಳವನ್ನು ಕಡಮೆಮಾಡುವುದರಲ್ಲಿ ಅವರ ಗಮನವು ಹೋಯಿತು. ಡೆಪ್ಯೂಟಿ ಕಮಿಷನರುಗಳಿಗೆ ೧೦೦೦ ರೂ. ಯಿಂದ ೧೬೬೬ ರೂ. ವರೆಗೂ ಇದ್ದ ಸಂಬಳವನ್ನು ೭೦೦ ರಿಂದ ೧೨೦೦ಕ್ಕೆ ಇಳಿಸಿದರು. ಸಮರ್ಥರಾದ ನಾಲ್ಕು ಮಂದಿ ಡೆಪ್ಯೂಟಿ ಕಮಿಷನರನ್ನು ಮಾತ್ರ ಇಟ್ಟು ಮಿಕ್ಕವರನ್ನೆಲ್ಲ ತೆಗೆದು ಆ ಸ್ಥಳಗಳಿಗೆ ಕಡಮೆ ಸಂಬಳದ ದೇಶೀಯ ಅಧಿಕಾರಿಗಳನ್ನೇ ನಿಯಮಿಸಿದರು. ಒಟ್ಟು ಸಂಸ್ಥಾನದಲ್ಲಿದ್ದ ೨೭ ಮಂದಿ ಅಸಿಸ್ಟೆಂಟು ಕಮಿಷನರುಗಳಲ್ಲಿ ಅನಾವಶ್ಯಕವಾಗಿದ್ದ ೮ ಮಂದಿಯನ್ನು ತೆಗೆದುಹಾಕಿದರು. ಇದರಂತೆಯೇ ವಿದ್ಯಾಭ್ಯಾಸದ ಇಲಾಖೆ, ಫಾರೆಸ್ಟ್ ಇಲಾಖೆ, ಮರಾಮತ್ ಇಲಾಖೆ ಮುಂತಾದ ಎಲ್ಲಾ ಇಲಾಖೆಗಳಲ್ಲಿಯೂ, ಹೆಚ್ಚು ಸಂಬಳವುಳ್ಳ ಬಿಳಿಯ ಅಧಿಕಾರಿಗಳನ್ನು ತೆಗೆದು ಆ ಸ್ಥಳಗಳಿಗೆ ಕಡಮೆ ಸಂಬಳದ ಸಮರ್ಥರಾದ ದೇಶೀಯ ಅಧಿಕಾರಿಗಳನ್ನೇ ನಿಯಮಿಸಿದರು. ಹೀಗೆ ಅವರು ರೆವಿನ್ಯೂ ಸೆಕ್ರೆಟರಿಯಾಗಿ ಉದ್ಯೋಗ ಸ್ವೀಕಾರಮಾಡಿದ ಒಂದು ವರ್ಷಕಾಲದಲ್ಲೇ, ಸರ್ಕಾರಿಯ ಆಡಳಿತದಲ್ಲಿ ಮಾಡಿದ ಈ ಸುಧಾರಣೆಗಳಿಂದ ಖರ್ಚುಕಳೆದು ಎರಡೂವರೆ ಲಕ್ಷ ರೂಪಾಯಿಗಳು ಖಜಾನೆಯಲ್ಲಿ ಉಳಿಯುವಂತಾಯಿತು.

ಶ್ರೀಮಾನ್ ರಂಗಾಚಾರ್ಲುಯವರ ಈ ಸಾಹಸಕಾರ್ಯವು, ಚೀಫ್ ಕಮಿಷನರವರ ಮೂಲಕ ಇಂಡಿಯಾ ಸರ್ಕಾರಕ್ಕೆ ತಿಳಿಸಲ್ಪಟ್ಟಿತು. ಅವರ ಕಾರ್ಯನಿಷ್ಠೆಯೂ ಆಡಳಿತ ಸಾಮರ್ಥ್ಯವೂ ವೈಸ್‌ರಾಯಿಯವರ ಗಮನಕ್ಕೆ ಬಂದುವು. ೧೮೮೦ನೆಯ ಸಂವತ್ಸರದಲ್ಲಿ 'ಸಿ. ಐ. ಇ.' ಎಂಬ ಘನತರವಾದ ಬಿರುದನ್ನು ದಯಪಾಲಿಸಿ, ಇಂಡಿಯಾ ಸರ್ಕಾರದವರು ಅವರನ್ನು ಗೌರವಿಸಿದರು.

ಗಲಿಗಾನೆಯ ಸಂವತ್ಸರವು ಸಮಾಪಿಸುತ್ತಿದ್ದಿತು. ಚಾಮರಾಜೇಂದ್ರ ಒಡೆಯರವರಿಗೆ ಯುಕ್ತವಯಸ್ಸು ಪ್ರಾಪ್ತವಾಗುತ್ತಿದ್ದಿತು. ಅವರಿಗೆ ರಾಜ್ಯಾಧಿಕಾರವು ಪ್ರಾಪ್ತವಾದರೆ, ಆಗ್ಗೆ ಸಂಸ್ಥಾನದಲ್ಲಿ ಬಹು ಪ್ರಬಲರಾಗಿರುವ ರಂಗಾಚಾರ್ಯರವರೇ ದಿವಾನ್ ಪದವಿಗೂ ಏರುವರೋ ಎಂಬ ಶಂಕೆಯು ಎಲ್ಲರ ಮನಸ್ಸಿನಲ್ಲೂ ಹುಟ್ಟಿತು. ಆ ಶಂಕೆಗೆ ಕಾರಣವೂ ಇಲ್ಲದಿರಲಿಲ್ಲ. ಅವರು ಆ ಮಹೋನ್ನತ ಪದವಿಯಲ್ಲಿ ಕುಳಿತು, ತಡೆಬಡೆಯಿಲ್ಲದೆ ಅಧಿಕಾರ ಚಲಾವಣೆಗೆ ಪ್ರಾರಂಭಮಾಡಿದರೆ, ಆಡಳಿತದಲ್ಲಿ ಇನ್ನೂ ಎಂತೆಂತಹ ಸುಧಾರಣೆಗಳು ತಲೆದೋರಿ, ಏನೇನು ವ್ಯತ್ಯಾಸಗಳು ನಡೆಯುವುವೋ ಎಂಬ ವಿಚಾರವು ಅಧಿಕಾರಿವರ್ಗದಲ್ಲೂ ನೌಕರರ ಮನಸ್ಸಿನಲ್ಲೂ ಹುಟ್ಟಿತು. ಈವರೆಗೆ ಅವರ ನಿಸ್ಪೃಹವಾದ ಮತ್ತು ನಿರ್ದಾಕ್ಷಿಣ್ಯವಾದ ಆಡಳಿತದ ಚಕ್ರಕ್ಕೆ ಸಿಕ್ಕು ವ್ಯಥೆಪಟ್ಟಿದ್ದ ಹಲವು ಮಂದಿ ಅವರ ಹೆಸರಿಗೆ ಕಳಂಕವನ್ನು ತಂದು ಅವರನ್ನು ಉದ್ಯೋಗದಿಂದಲೇ-ಸಂಸ್ಥಾನದಿಂದಲೇ ಹೊರಡಿಸಬೇಕೆಂದು ಇಲ್ಲಸಲ್ಲದ ನೋಪಾರೋಪಣೆಗಳನ್ನು ಬಿತ್ತಿ ಹಬ್ಬಿಸಿದರು. ಅವರು ಅರಮನೆಯ ಕಂಟ್ರೋಲರ ಉದ್ಯೋಗವನ್ನು ಕೈಕೊಂಡು ಆಭರಣಾದಿಗಳ ಪಟ್ಟಿಯನ್ನು ತಯಾರಿಸಿದಾಗ, ಕೆಲವು ಬೆಲೆಯುಳ್ಳ ಆಭರಣಾದಿಗಳು ಕಾಣದೇ ಹೋದುವೆಂದೂ, ಆ ಲೋಪಕ್ಕೆ ರಂಗಾಚಾರ್ಯರವರೇ ಜವಾಬುದಾರರೆಂದೂ ಒಂದು ದುಷ್ಟವಾರ್ತೆಯು ಹಬ್ಬಿತು. ರಂಗಾಚಾರ್ಯರವರ ನಡತೆಯ ವಿಚಾರದಲ್ಲೂ, ನಿಸ್ಪೃಹತೆಯ ವಿಚಾರದಲ್ಲೂ ಉತ್ತಮಾಭಿಪ್ರಾಯವನ್ನುಂಟಾಗಿದ್ದ ಬೌರಿಂಗ್ ಮುಂತಾದ ಬ್ರಿಟಿಷ್ ಅಧಿಕಾರಿ ವರ್ಗದಲ್ಲೂ ಅವರ ವಿಷಯದಲ್ಲಿ ಸಂಶಯವು ಉತ್ಪನ್ನವಾಗತೊಡಗಿತು. ಕೊನೆಗೆ ಮಿ|| ಗಾರ್ಡನ್, ಮಿ|| ವಿಲ್ಸನ್ ಮುಂತಾದ ಕೆಲಮಂದಿ ಅಧಿಕಾರಿಗಳು, ಆ ವಿಚಾರವನ್ನು ಕುರಿತು ವಿಶೇಷವಿಚಾರ ನಡೆಸಿ, ಅದು ಕೇವಲ ಗುಮಾಸ್ತರ ಹಸ್ತದೋಷದಿಂದ ಉಂಟಾದ ಲೋಪವಲ್ಲದೆ, ಆ ವಿಷಯದಲ್ಲಿ ರಂಗಾಚಾರ್ಯರವರ ಮೇಲೆ ಬಂದ ಅಪವಾದಕ್ಕೆ ಆಸ್ಪದವಲ್ಲವೆಂದು ಪ್ರಕಟಿಸಿದರು. ಆಂಗ್ಲೇಯ ಅಧಿಕಾರಿಗಳಿಗೆ ಅವರ ವಿಷಯದಲ್ಲಿ ಮೊದಲಿಗಿಂತಲೂ ವಿಶೇಷ ಅಭಿಮಾನವೂ ಗೌರವಭಾವವೂ ಉಂಟಾದುವು. ಹೀಗೆ ಅವರ ಧವಳಯಶಶ್ಚಂದ್ರನಿಗೆ ಗ್ರಹಣರೂಪವಾಗಿ ಪ್ರಾಪ್ತವಾಗಿದ್ದ ಈ ಅಪ

ವಾದವು ಮೇಲೆಹೇಳಿದ ರೀತಿಯಲ್ಲಿ ಪರಿಹಾರವಾಯಿತೆಂಬ ವೇಳೆಗೆ ಶ್ರೀ ಚಾಮರಾಜೇಂದ್ರ ಒಡೆಯರಿಗೆ ರಾಜ್ಯಾಭಿಷೇಕ ಮಹೋತ್ಸವದ ಸುದಿನವೂ ಸಮೀಪಿಸಿತು. ೧೮೮೧ನೆಯ ಮಾರ್ಚಿ ೨೫ನೆಯ ಶುಭದಿನದಲ್ಲಿ ಐವತ್ತು ವರ್ಷಗಳ ಹಿಂದೆ ಮೈಸೂರು ರಾಜವಂಶಕ್ಕೆ ಕೈತಪ್ಪಿಹೋಗಿದ್ದ ಸಿಂಹಾಸನಾರೋಹಣ ಸಮಾರಂಭವು ಪುನಃ ನೆರವೇರಿತು. ಶ್ರೀಮನ್ಮಹಾರಾಜರವರು ಆದಿನವೇ ನಮ್ಮ ಕಥಾನಾಯಕರನ್ನು ತಮ್ಮ ಅಮಾತ್ಯಪದವಿಗೆ ನಿಯಮಿಸಿಕೊಂಡರು.



## ಅಧ್ಯಾಯ ೪. ‘ರಾಜಕೀಯ-ಸಾಮಾಜಿಕ ಸುಧಾರಣೆಗಳು’

ಶ್ರೀಮಾನ್ ರಂಗಾಚಾರ್ಲುಯವರು ತಮ್ಮ ಅಮಾತ್ಯಪದವಿಯಲ್ಲಿ ಯಾವ ಮಹತ್ಕಾರ್ಯವನ್ನು ನಿರ್ವಹಿಸಿದರು, ದೇಶಕ್ಕೆ ಯಾವಬಗೆಯ ಉಪಕಾರಮಾಡಿದರು, ಅವರ ಪರಿಶ್ರಮಗಳಿಂದ ದೇಶಸ್ಥಿತಿಯು ಹೇಗೆ ಬದಲಾವಣೆ ಹೊಂದಿತು, ಎಂಬ ಸಂಗತಿಗಳನ್ನು ತಿಳಿಯಬೇಕಾದರೆ, ಮೊದಲು ಅವರು ಅಧಿಕಾರವನ್ನು ವಹಿಸಿದಾಗ ದೇಶಸ್ಥಿತಿಯು ಹೇಗಿತ್ತು ಎಂಬುದನ್ನು ತಿಳಿದುಕೊಳ್ಳುವುದು ಅತ್ಯಾವಶ್ಯಕ. ರಾಜ್ಯದ ಪ್ರತಿಯೊಂದು ಇಲಾಖೆಯಲ್ಲೂ ಅಧಿಕಾಧಿಕ ವೇತನಗಳುಳ್ಳ ಆಂಗ್ಲೇಯ ಅಧಿಕಾರಿಗಳಿದ್ದು ಅವರ ಸಂಬಳಕ್ಕಾಗಿಯೇ, ಉತ್ಪತ್ತಿಯಾದ ದ್ರವ್ಯವೆಲ್ಲವೂ ವಿನಿಯೋಗವಾಗಿ ದೇಶವು ಕೇವಲ ಕ್ಷಾಮದೇವತೆಯ ನೆಲೆವೀಡಾಗಿತ್ತು. ಸಾಲದುದಕ್ಕೆ ೧೮೭೭ನೆಯ ಸಂವತ್ಸರದ ದಾರುಣವಾದ ಕ್ಷಾಮವು ಸಂಸ್ಥಾನದ ಬಹುಭಾಗವನ್ನು ಆಕ್ರಮಿಸಿ ಅಸಾಧ್ಯಹಾವಳಿಮಾಡಿಬಿಟ್ಟುದರಿಂದ ರಾಜಭಂಡಾರವು ತಳಮುಟ್ಟಿಹೋಯಿತು. ಈ ಕ್ಷಾಮದಿಂದ ದೇಶದ ಜನಸಂಖ್ಯೆಯಲ್ಲಿ ಹತ್ತು ಲಕ್ಷ ಪ್ರಜೆಗಳು ಕಾಲಾಧೀನರಾಗಿ ಹೋದರು. ಹೀಗೆ ಹೋದವರಲ್ಲಿ ಮುಕ್ಕಾಲುಪಾಲು ದೃಢಾಂಗರಾದ ದುಡಿಯುವ ಜನರೇ ಆಗಿದ್ದುದರಿಂದ ಅವರ ಮರಣದಿಂದ, ವ್ಯವಸಾಯವೂ ಕೈಗಾರಿಕೆಗಳೂ ಮೂಲೆಗೆ

ಬಿದ್ದವು. ಈ ಕ್ಷಾಮದಿಂದ ದನಕರುಗಳ, ಧಾನ್ಯ ಮತ್ತು ಕೈಗಾರಿಕೆಗಳ ಮೂಲಕ ನಷ್ಟವು ಎಷ್ಟೇ ಕಡಮೆಯೆಂದರೂ ಒಂದು ಕೋಟಿ ರೂಪಾಯಿಗಳಿಗೆ ಮೇಲೆ ಆಗಿರಬಹುದು. ಈ ಕಾರಣಗಳಿಗಾಗಿ ಬ್ರಿಟಿಷ್ ಸರ್ಕಾರದಲ್ಲಿ ೮೦ ಲಕ್ಷ ರೂಪಾಯಿಗಳ ಸಾಲವನ್ನು ತೆಗೆದಿದ್ದರು. ಅದರ ಬಡ್ಡಿಯೇ ಸಂವತ್ಸರಕ್ಕೆ ೪ ಲಕ್ಷ ರೂಪಾಯಿಗಳಾಗುತ್ತಿತ್ತು. ಹೊಸದಾಗಿ ಕಂದಾಯ ಕೌಳಿಗೆಗಳನ್ನು ಹಾಕಿ ಸಂಸ್ಥಾನಕ್ಕೆ ಹೆಚ್ಚು ಸಂಪಾದನೆಯನ್ನು ತೋರಿಸುವಂತಿಲ್ಲ. ಅಲ್ಲದೆ ರಂಗಾಚಾರ್ಲುಯವರಿಗೆ ಎಲ್ಲೆಲ್ಲೂ ಶತ್ರುಗಳು ವ್ಯಾಪಿಸಿದ್ದು ಅವರು ಯಾವ ಅಭಿವೃದ್ಧಿ ವಿಚಾರವನ್ನು ಕೈಕೊಂಡರೂ ಅದನ್ನು ವಕ್ರದೃಷ್ಟಿಯಿಂದಲೇ ನೋಡಿ ಟೀಕಿಸುತ್ತಿದ್ದರು. ಹೀಗೆ ಎಲ್ಲಾ ಭಾಗಗಳಿಂದಲೂ, ನಿರುತ್ಸಾಹಕರವಾದ ಪರಿಸ್ಥಿತಿಯೇ ಕಂಡುಬರುತ್ತಿದ್ದಾಗಲೂ, ಧೀರರೂ ಪ್ರಜ್ಞಾಯುತರೂ ಆದ ರಂಗಾಚಾರ್ಲುಯವರು ಈ ಕಷ್ಟಗಳಿಗೆಲ್ಲಕ್ಕೂ ಹಿಮ್ಮೆಟ್ಟದಂತೆ ಎದೆಗೊಟ್ಟು ಬಹು ಜವಾಬುದಾರಿಯ ದಿವಾನಪದವಿಯನ್ನು ವಹಿಸಿಕೊಂಡರು. ಆದರೆ ಹೀಗೆ ಎಲ್ಲವೂ ನಿರುತ್ಸಾಹಕರವಾಗಿಯೇ ಇದ್ದರೂ, ಒಂದು ಸಂಗತಿ ಮಾತ್ರ ಅವರಿಗೆ ಅನುಕೂಲವಾಗಿತ್ತು. ಅದು ಶ್ರೀಮನ್ಮಹಾರಾಜರವರ ಬೆಂಬಲ. ಶ್ರೀ ಚಾಮರಾಜೇಂದ್ರ ಒಡೆಯರು, ಚಿಕ್ಕವಯಸ್ಸಿನವರಾಗಿ ಅನನುಭವಿಗಳಾಗಿದ್ದರೂ, ರಂಗಾಚಾರ್ಲುಯವರ ಕಾರ್ಯನಿಷ್ಠೆ, ಸ್ವಾಮಿಭಕ್ತಿ, ನಿಸ್ಪೃಹತ್ವ ಮುಂತಾದುವುಗಳಲ್ಲಿ ವಿಶ್ವಾಸವಿಟ್ಟು ಅವರ ಸಲಹೆಗಳನ್ನು ಆದರವಿಟ್ಟು ಕೇಳಿ ಸಾವಧಾನವಾಗಿ ವಿಮರ್ಶಿಸಿ, ಯುಕ್ತಾಯುಕ್ತ ಪರಿಜ್ಞಾನವುಳ್ಳವರಾಗಿ ಅವರ ಕಾರ್ಯಗಳಿಗೆ ಪ್ರೋತ್ಸಾಹ ಕೊಡುತ್ತಾ ಬಂದರು.

ರಾಜ್ಯಸೂತ್ರಗಳನ್ನು ವಹಿಸಿದೊಡನೆಯೇ ಅವರ ಮೊದಲನೆಯ ಕೆಲಸವು ಸಂಸ್ಥಾನದ ಬೊಕ್ಕಸದ ವಿಚಾರವನ್ನು ಗಮನಿಸುವುದಾಗಿತ್ತು. ಹೊಸದಾಗಿ ಕಂದಾಯವನ್ನು ಹಾಕಿ ಆದಾಯವನ್ನು ಹೆಚ್ಚಿಸುವುದು ಸಾಧ್ಯವಿಲ್ಲವೆಂದು ತೋರಿದ ಆ ಸಂದರ್ಭದಲ್ಲಿ ಅನಾವಶ್ಯಕವಾಗಿದ್ದ ಹೆಚ್ಚು ವೆಚ್ಚಗಳನ್ನಾದರೂ ತಗ್ಗಿಸತಕ್ಕುದೇ ಸರ್ವೋತ್ತಮ ಉಪಾಯವೆಂದು ಆ ಮಾರ್ಗವನ್ನು ಹಿಡಿದು ಕೆಲಸಮಾಡತೊಡಗಿದರು. ಸಿವಿಲ್ ಮತ್ತು ಕ್ರಿಮಿನಲ್

ಇಲಾಖಾ ಕಾರ್ಯಗಳು ಸಂಬಂಧಪಟ್ಟಷ್ಟರ ಮಟ್ಟಿಗೆ, ಹಾಸನ ಮತ್ತು ಚಿತ್ರದುರ್ಗ ಡಿಸ್ಟ್ರಿಕ್ಟುಗಳನ್ನು ಪ್ರತ್ಯೇಕ ಡಿಸ್ಟ್ರಿಕ್ಟುಗಳೆಂದು ಭಾವಿಸದೆ, ಎಡಬಲದ ಜಿಲ್ಲಾಧಿಕಾರಿಗಳಿಗೇ ಆ ಕಾರ್ಯಗಳು ವಹಿಸಲ್ಪಟ್ಟುವು. ೯ ತಾಲ್ಲೂಕುಗಳನ್ನು ಸಬ್ ತಾಲ್ಲೂಕುಗಳನ್ನಾಗಿಸಿ ಡೆಪ್ಯೂಟಿ ಅಮಲ್ದಾರರೆಂಬ ಕಮ್ಮಿ ಸಂಬಳದ ಅಧಿಕಾರಿಗಳ ವಶಕ್ಕೆ ವಹಿಸಿದರು. ನಾಲ್ಕು ಮುನ್ಸಿಫ್ ಕೋರ್ಟುಗಳನ್ನೂ ಮೂರು ಸಬ್‌ಕೋರ್ಟುಗಳನ್ನೂ ಪೂರ್ತಿಯಾಗಿ ವಜಾಮಾಡಿದರು. ಎಂಟು ಡಿಸ್ಟ್ರಿಕ್ಟು ಜೈಲುಗಳಲ್ಲಿ ಐದನ್ನು ವಜಾಮಾಡಿ ಆ ಸಂಬಂಧ ಖರ್ಚುವೆಚ್ಚಗಳನ್ನು ತಗ್ಗಿಸಿದರು. ಅಲ್ಲದೆ ಹಲವು ಟ್ರಾವಲರ್ಸ್ ಬಂಗಲೆ ಮತ್ತು ಮುಸಾಫರ್‌ಖಾನೆಗಳ ಸಿಬ್ಬಂದಿಯನ್ನು ವಜಾಮಾಡಿಬಿಟ್ಟರು. ಈ ಬಾಬುಗಳಿಂದ ಸಂಸ್ಥಾನಕ್ಕೆ ವರ್ಷಕ್ಕೆ ಎರಡು ಲಕ್ಷರೂಪಾಯಿಗಳ ಉಳಿತಾಯವು ಕಂಡುಬರುವಂತಾಯಿತು. ಫಾರೆಸ್ಟ್ ಎಂದರೆ ಅಡವಿಯ ಇಲಾಖೆಯ ಆಡಳಿತವೂ ಎಷ್ಟೋಮಟ್ಟಿಗೆ ಕೆಟ್ಟುಹೋಗಿ ಆ ಮೂಲಕ ಎಷ್ಟುದ್ರವ್ಯ ಉತ್ಪತ್ತಿಯಾಗಬೇಕೋ ಅಷ್ಟಾಗುತ್ತಿರಲಿಲ್ಲ. ಮೈಸೂರುದೇಶದ ಕಾಡುಗಳಲ್ಲಿ ವಿಸ್ತಾರವಾಗಿ ಬೆಳೆವ ಶ್ರೀಗಂಧದ ವೃಕ್ಷಗಳನ್ನು ಮಾರಬಾರದೆಂಬೊಂದು ಪೂರ್ವಾಚಾರದಿಂದ ಬಹುಬೆಲೆಯ ಗಂಧದಮರವೆಲ್ಲವೂ ಅರಮನೆಯುಉಪಯೋಗಕ್ಕೇ ಸರಿಹೋಗುತ್ತಿದ್ದಿತು. ರಂಗಾಚಾರ್ಲುರವರು ಈ ಪದ್ಧತಿಯನ್ನು ತಪ್ಪಿಸಿ ಅಡವಿಯ ಇಲಾಖೆಯಿಂದಲೂ ವಿಶೇಷದ್ರವ್ಯವು ಉತ್ಪತ್ತಿಯಾಗುವಂತೆ, ಅನೇಕ ಮಾರ್ಗಾಂತರಗಳನ್ನು ಕಲ್ಪಿಸಿದರು. ಹೀಗೆ ಕೂಡಿಟ್ಟ ಹನ್ನೊಂದು ಲಕ್ಷ ದ್ರವ್ಯದಿಂದ ಬಹುದಿನಗಳಿಂದ ಹಲುಬಿಕೊಳ್ಳುತ್ತಿದ್ದ ಮೈಸೂರು ರೈಲ್ವೆ ಕಾಮಗಾರಿಯನ್ನು ಪೂರ್ತಿಗೊಳಿಸಿದರು. ಬ್ರಿಟಿಷ್ ಹಿಂದೂಸ್ಥಾನದಿಂದ ಈ ಸಂಸ್ಥಾನದೊಳಕ್ಕೆ ಪ್ರಯಾಣಮಾಡುವುದಕ್ಕೂ, ಸಂಸ್ಥಾನದಲ್ಲೇ ನಾನಾ ಭಾಗಗಳಲ್ಲಿ ಸಂಚರಿಸುವುದಕ್ಕೂ ತಕ್ಕಷ್ಟು ಪ್ರಯಾಣ ಸೌಕರ್ಯವು ರೈಲ್ವೆಯ ಮೂಲಕ ಏರ್ಪಡದಿದ್ದರೆ ದೇಶದ ವ್ಯಾಪಾರ ಮತ್ತು ಕೈಗಾರಿಕೆಗಳ ಅಭಿವೃದ್ಧಿಕಾರ್ಯವು ಸಾಗಲಾರದೆಂಬುದು ಅವರ ನಿಶ್ಚಯಭಾವನೆಯಾಗಿತ್ತು. ಮೈಸೂರು ದೇಶದಲ್ಲಿ ಬೇಕಾದಷ್ಟು ಸೀರಾಪದೆಯಿದ್ದು, ಫಲವತ್ತಾದ ಭೂಸಂಪತ್ತಿದ್ದೂ, ಅದನ್ನು ತಕ್ಕಂತೆ ಹೊಂದಿಸಿಕೊಂಡು ವ್ಯವ

ಸಾಯುವನ್ನು ಈಗಿನಗಿಂತಲೂ ಹತ್ತುಪಾಲಷ್ಟು ಹೆಚ್ಚಿಸಿಕೊಳ್ಳಲು ಜನಗಳಲ್ಲಿ ಸುಧಾರಣಾವಿಚಾರದ ತಿಳಿವಳಿಕೆಯಿಲ್ಲವಲ್ಲಾ ಎಂದು ಅವರು ಮರುಗುತ್ತಿದ್ದರು. ಕ್ಷಾಮಬಾಧೆಯಿಂದ ರೈತಾಪಿಜನಗಳೂ ದನಕರುಗಳೂ ವಿಶೇಷ ನಷ್ಟವಾಗಿದ್ದುದರಿಂದ ಆ ಕೆಲಸವನ್ನು ಒಡನೆ ಪ್ರಾರಂಭಿಸಿ, ಅಭಿವೃದ್ಧಿಸ್ಥಿತಿಗೆ ತರಲು ಸಾಧ್ಯವಿರಲಿಲ್ಲ. ಪ್ರಜೆಗಳಲ್ಲಿ ಅಭಿವೃದ್ಧಿಯ ಆಶಯುವೂ ನವನವೀನಭಾವಗಳೂ ಉದಯಿಸಿದಲ್ಲದೆ ಸುಧಾರಣಾಮಾರ್ಗದಲ್ಲಿ ಇಚ್ಛೆಯು ಉದಯಿಸದು; ಒಂದು ಪ್ರಾಂತ್ಯದವರು ಮತ್ತೊಂದು ಪ್ರಾಂತಕ್ಕೆ ಪ್ರಯಾಣಮಾಡಿ ಅಲ್ಲಿಯವರೊಂದಿಗೆ ಧಾರಾಳವಾಗಿ ಬಳಕೆಗೊಂಡರಲ್ಲದೆ, ಭಾವನಾವಿನಿಮಯಕ್ಕೆ ಅವಕಾಶವಿರದು; ರೈಲ್ವೆಯ ಮೂಲಕ ಪ್ರಯಾಣಸೌಕರ್ಯವು ಏರ್ಪಟ್ಟರಲ್ಲದೆ, ಈ ಯಾವಕಾರ್ಯವೂ ಸುಗಮವಾಗಿ ನಡೆಯದು, ಎಂಬುದನ್ನು ದೀರ್ಘವಾಗಿ ಯೋಚಿಸಿದ ರಂಗಾಚಾರ್ಲುಯವರು, ಹಲವು ಬಗೆಯ ಉಪಾಯಗಳಿಂದ ಹಣವನ್ನು ಮಿಗಿಸಿ ಅದರಿಂದ ರೈಲುಮಾರ್ಗವನ್ನು ಹೆಚ್ಚಿಸುವ ಉದ್ಯೋಗಮಾಡಿದರು. ಮತ್ತು ಮುಂದೆ ಪ್ರತಿವರ್ಷವೂ ಸಂಸ್ಥಾನದ ಆದಾಯದಿಂದ ಐದು ಲಕ್ಷರೂಪಾಯಿಗಳನ್ನು ರೈಲ್ವೆ ಕಾಮಗಾರಿಗಾಗಿ ವಿನಿಯೋಗಿಸಲಾಗುತ್ತದೆಂದು ಪ್ರಜಾಪ್ರತಿನಿಧಿ ಸಭೆಗೂ ತಿಳಿಸಿದ್ದರು.

ಇದಾದ ತರುವಾಯ ಅವರ ಗಮನವನ್ನು ಆಕರ್ಷಿಸಿದ ವಿಚಾರವೆಂದರೆ, ಬ್ರಿಟಿಷ್ ಸರ್ಕಾರಕ್ಕೆ ಕೊಡಬೇಕಾಗಿದ್ದ ೮೦ ಲಕ್ಷರೂಪಾಯಿಗಳ ಸಾಲದಹೊರೆಯನ್ನು ಕುರಿತುದು. ಆ ಮೊತ್ತವನ್ನು ಒಂದೇ ಗಂಟಿನಲ್ಲಿ ಕೊಡಬೇಕೆಂದರೆ, ಅದು ಎಂದಿಗೂ ಆಗದ ಪ್ರಶ್ನೆಯೆಂಬುದನ್ನು ಆಚಾರ್ಲುಯವರು ಗ್ರಹಿಸಿ, ದೇಶಸ್ಥಿತಿಯನ್ನೂ, ಕ್ಷಾಮನಿವಾರಣೆಗೆಂದು ಕಮಿಾಷನರ ಕಾಲದಲ್ಲಿದ್ದ ಅಧಿಕಾರಿಗಳು ದುಂದುವೆಚ್ಚಮಾಡಿ ಬಹು ಹಣವನ್ನು ಅನ್ಯಾಕ್ರಾಂತಮಾಡಿಬಿಟ್ಟರೆಂಬ ವಿಚಾರವನ್ನೂ ಕುರಿತು ಬ್ರಿಟಿಷ್ ಸರ್ಕಾರದೊಂದಿಗೆ ಪತ್ರವ್ಯವಹಾರ ನಡೆಸಿ, ತನ್ಮೂಲಕ ಬಡ್ಡಿಯನ್ನು ಶೇಕಡಾ ೫ ರಂತಲ್ಲದೆ, ೪ ರಂತೆ ತೆಗೆದುಕೊಳ್ಳಬೇಕೆಂದೂ, ಅಸಲು ಸಾಲವನ್ನೂ ೪೧ ಕಂತುಗಳಲ್ಲಿ ತೆಗೆದುಕೊಳ್ಳಬೇಕೆಂದೂ ಏರ್ಪಾಡು ಮಾಡಿಕೊಂಡರು.

ಈ ಋಣಭಾರದ ಚಿಂತೆಯೊಂದು ಸದ್ಯಕ್ಕೆ ತಪ್ಪಿದಂತಾದುದು, ಅವರು ಇತರ ವಿಚಾರಗಳನ್ನು ಕುರಿತು ಯೋಚಿಸಲು ಅವಕಾಶವನ್ನುಂಟುಮಾಡಿತು. ಒಡನೆ ಅವರು ಬ್ರಿಟಿಷ್ ಸರ್ಕಾರಕ್ಕೆ ಬರೆದು, ಅವರಿಂದ ಇಪ್ಪತ್ತು ಲಕ್ಷ ರೂಪಾಯಿಗಳ ಸಾಲವನ್ನು ಪಡೆದು, ಬೆಂಗಳೂರು ತಿಪಟೂರು ರೈಲು ರಸ್ತೆಯ ಕಾಮಗಾರಿಯನ್ನು ಪ್ರಾರಂಭಮಾಡಿದರು. ಆ ಸಂವತ್ಸರದಲ್ಲಿ ನೆರೆದ ಪ್ರಜಾಪ್ರತಿನಿಧಿ ಸಭೆಗೆ ಅವರು ದೇಶದ ಕೈಗಾರಿಕೆ ವ್ಯಾಪಾರ, ವ್ಯವಸಾಯ ಮುಂತಾದವುಗಳನ್ನು ಅಭಿವೃದ್ಧಿಗೊಳಿಸುವ ವಿಚಾರದಲ್ಲಿ ಶ್ರೀಮನ್ಮಹಾರಾಜಾ ಸರ್ಕಾರದವರ ಯೋಚನೆಯಲ್ಲಿದ್ದ ಹಲವು ಸಂಗತಿಗಳನ್ನೂ, ರೈಲ್ವೆಯನ್ನು ಸಂಸ್ಥಾನದ ಸಕಲ ಭಾಗಗಳಲ್ಲೂ ವಿಸ್ತರಿಸಿ ತನ್ಮೂಲಕ ಪ್ರಯಾಣ ಸೌಕರ್ಯವನ್ನೂ, ವ್ಯಾಪಾರಾಭಿವೃದ್ಧಿಯನ್ನೂ ಉಂಟುಮಾಡಬೇಕಾದುದರ ಆವಶ್ಯಕತೆಯನ್ನೂ ವಿವರಿಸಿ ಹೇಳಿದರು.

ಶ್ರೀ ಚಾಮರಾಜೇಂದ್ರ, ಒಡೆಯರು ರಾಜ್ಯಾಧಿಪತ್ಯವನ್ನು ವಹಿಸಿಕೊಂಡ ಒಡನೆಯೇ, ರಂಗಾಚಾರ್ಲುಯವರನ್ನು ದಿವಾನರನ್ನಾಗಿ ನಿಯಮಿಸಿದಂತೆಯೇ ರಾಜ್ಯಾಡಳಿತದಲ್ಲಿ ತಮಗೆ ಸಲಹೆ ಕೊಡುವುದಕ್ಕಾಗಿ ಒಂದು ಮಂತ್ರಾಲೋಚನಾ ಸಭೆಯನ್ನೂ ನಿಯಾಮಕಮಾಡಿದರು. ಈ ಸಭೆಯಲ್ಲಿ, (೧) ಶೆಟ್ಟಿಪುಣ್ಯಂ ವೀರವಳ್ಳಿ ರಂಗಾಚಾರ್ಲುಯವರು ಅಧ್ಯಕ್ಷರಾಗಿಯೂ, (೨) ಟಿ. ಆರ್. ಆರೋಗ್ಯಸ್ವಾಮಿ ತಂಬೂಚೆಟ್ಟಿಯವರು, (೩) ಪೂರ್ಣಕೃಷ್ಣರಾವ್, (೪) . . ರತ್ನಸಭಾಪತಿ ಮೊದಲಿಯಾರ್ ಎಂಬೀ ಮೂವರು ಸಭಿಕರಾಗಿಯೂ ಇರಬೇಕೆಂದು ಮಹಾರಾಜರವರು ಆಜ್ಞೆಮಾಡಿದರು. ಈ ಮಂತ್ರಾಲೋಚನಾ ಸಭೆಯವರು, ದೇಶದಲ್ಲಿ ಹೊಸಕಾನೂನು ಮಾಡುವ, ಮತ್ತು ಹೊಸದಾಗಿ ಕಂದಾಯಕೌಳಿಗೆಗಳನ್ನು ಹಾಕುವ ವಿಷಯದಲ್ಲೂ, ಸಂಸ್ಥಾನದಲ್ಲಿ ಉತ್ತಮರಾಜ್ಯಭಾರವನ್ನು ಉಂಟುಮಾಡಿ, ಪ್ರಜೆಗಳ ಯೋಗಕ್ಷೇಮಕ್ಕೆ ಸಂಬಂಧಿಸಿದ ವಿವಿಧ ನೂತನ ಸುಧಾರಣೆಗಳನ್ನು ತರುವ ವಿಚಾರದಲ್ಲೂ, ಸಲಹೆಗಳನ್ನು, ಶ್ರೀಮನ್ಮಹಾರಾಜರವರ ಪರ್ಯಾಲೋಚನೆಗೆ ತರತಕ್ಕುದೆಂದು ನಿರ್ಣಯಿಸಲ್ಪಟ್ಟಿತು.

ಶ್ರೀ ವಾನ್ ರಂಗಾಚಾರ್ಲುಯವರು, ಈ ದೇಶಕ್ಷೇಮಕ್ಕಾಗಿ ಏರ್ಪಾಟು ಮಾಡಿದ ಹಲವು ಮಹತ್ಕಾರ್ಯಗಳಲ್ಲಿ ಪ್ರಜಾಪ್ರತಿನಿಧಿ

ಸಭೆಯ ಸ್ಥಾಪನೆಯೇ ಸರ್ವಶ್ರೇಷ್ಠವಾದುದು. ಜನಗಳಲ್ಲಿ ಪ್ರೌಢವಿದ್ಯಾಭ್ಯಾಸವೂ, ಸ್ವಾತಂತ್ರ್ಯಾಭಿಲಾಷೆಯೂ ಹುಟ್ಟಿಹಬ್ಬಿದಂತೆಲ್ಲ, ರಾಜ್ಯಾಡಳಿತವು ಪ್ರಜಾಭಿಪ್ರಾಯವನ್ನು ಅನುಸರಿಸಿಯೇ ನಡೆಯತಕ್ಕದು ದೇಶಕ್ಷೇಮಕ್ಕೆ ಸಹಕಾರಿಯೆಂಬ ಭಾವನೆಯು ಶ್ರೀಮಾನ್ ರಂಗಾಚಾರ್ಲುಯವರ ವಿಶಾಲಮತಿಗೆ ಬೋಧವಾಯಿತು. ಅವರು ಇಂಗ್ಲೆಂಡು, ಫ್ರಾನ್ಸ್, ಅಮೇರಿಕಾ ಮುಂತಾದ ಪಾಶ್ಚಾತ್ಯದೇಶಗಳ ಚರಿತ್ರೆಯನ್ನೂ, ಅಲ್ಲಿ ಪ್ರಜಾಭಿಪ್ರಾಯಾನುಗುಣವಾಗಿಯೇ ನಡೆಯುತ್ತಿರುವ ರಾಜ್ಯಾಡಳಿತ ಪದ್ಧತಿಗಳನ್ನೂ ಓದಿ ತಿಳಿದವರಾದುದರಿಂದಲೇ, ಪ್ರಜೆಗಳಿಂದ ಪ್ರಾರ್ಥನೀಯರಾಗುವವರೆಗೂ ಕಾದಿರದೆ, ಅವರ ಅಭಿವೃದ್ಧಿಗೆ ಅವಶ್ಯಕವಾದುದು ಏನೆಂಬ ವಿಚಾರವನ್ನು ತಾವೇ ಗ್ರಹಿಸಿ, ತಮ್ಮೊಂದಿಗಿದ್ದ ಮಂತ್ರಾಲೋಚನಾ ಸಭೆಯ ಸದಸ್ಯರಲ್ಲಿ ವಿಮರ್ಶಿಸಿ, ಆ ಸಲಹೆಯನ್ನು ಶ್ರೀಮನ್ಮಹಾರಾಜರವರ ಗಮನಕ್ಕೆ ತಂದರು. ಅವರಾದರೂ, ವಿಶಾಲಮತಿಗಳೂ ಉದಾರಹೃದಯರೂ ಯುಕ್ತಾಯುಕ್ತ ವಿಚಾರಶೀಲರೂ ಆದುದರಿಂದ ಮಂತ್ರಾಲೋಚನಾ ಸಭೆಯವರಿಂದ ಸೂಚಿಸಲ್ಪಟ್ಟ ಆ ಸಲಹೆಯನ್ನು ಅಂಗೀಕರಿಸಿದರು. ಶ್ರೀಮನ್ಮಹಾರಾಜರವರ ಈ ಅಂಗೀಕಾರವನ್ನು ಅನುಸರಿಸಿ, ೧೮೮೧ನೆಯ ಸಂವತ್ಸರದ ಆಗಸ್ಟ್ ೨೫ನೆಯ ದಿನ ಆ ಸಭಾಸ್ಥಾಪನೆಯ ವಿಚಾರ ಪ್ರಸಿದ್ಧ ಪತ್ರಿಕೆಯು ಪ್ರಕಟಿಸಲ್ಪಟ್ಟಿತು. ಅದರಲ್ಲಿ—

*'ಸಂಸ್ಥಾನದ ರಾಜ್ಯಭಾರ ವಿಚಾರದಲ್ಲಿ ನಡೆಯಿಸಲ್ಪಡುವ ಏರ್ಪಾಡುಗಳ ವಿಷಯವಾಗಿ ಸರಕಾರಕ್ಕಿರುವ ಅಭಿಪ್ರಾಯಗಳೂ ಉದ್ದೇಶಗಳೂ, ಯಾರ ಪ್ರಯೋಜನಕ್ಕಾಗಿ ಆ ಏರ್ಪಾಟುಗಳು ನಡೆಯುವುವೋ ಆ ಪ್ರಜೆಗಳಿಗೆ ಈಗಿರುವುದಕ್ಕಿಂತಲೂ ಚೆನ್ನಾಗಿ ತಿಳಿದು, ಅವರಿಗೆ ತೃಪ್ತಿಯುಂಟಾಗಬೇಕೆಂಬುದು ಶ್ರೀಮನ್ಮಹಾರಾಜರವರ ಕುತೂಹಲ. ದೇಶದ ಎಲ್ಲಾ ಭಾಗಗಳ ಪ್ರಮುಖರಾದ ಜಮೀನ್ದಾರರೂ, ವರ್ತಕರೂ, ವರ್ಷಕ್ಕೊಂದಾವರ್ತಿ ಸಭೆಸೇರಿ, ಆ ಸಭೆಗೆ ದಿವಾನರವರು ಹಿಂದಿನ ವರ್ಷದ ಆಡಳಿತದ ಫಲಿತಾಂಶವನ್ನೂ, ಮುಂದಿನ ವರ್ಷದಲ್ಲಿ ಮಾಡಬೇಕೆಂದಿರುವ ಕಾರ್ಯ

---

* ಶ್ರೀ. ಡಿ. ವಿ. ಗುಂಡಪ್ಪನವರ 'ದಿವಾನ್ ಸಿ. ರಂಗಾಚಾರ್ಲು' ಪುಟ ೬೪.

ಕಲಾಪಗಳನ್ನೂ ಸೂಚಿಸುವುದರ ಮೂಲಕ ಆ ಕುತೂಹಲವು ನೆರವೇರಲು ಪ್ರಾರಂಭವಾಗಬಹುದೆಂದು ಶ್ರೀಮನ್ಮಹಾರಾಜರವರು ತಾತ್ಪರ್ಯಪಟ್ಟಿರುವರು.

'ಈ ಸಭೆಯು ಏರ್ಪಡು ಪ್ರಜೆಗಳನ್ನು ಸರಕಾರದೊಂದಿಗೆ ಸೇರಿಸುವುದರಿಂದ, ಇದು ಅವರ ಮನಸ್ಸಿನಲ್ಲಿ ಸರಕಾರದ ಆಶಯ ಕಾರ್ಯಕ್ರಮಗಳ ವಿಷಯವಾಗಿ ಇರಬಹುದಾದ ದುರಭಿಪ್ರಾಯಗಳನ್ನು ಹೋಗಲಾಡಿಸಿ, ತಮ್ಮ ಪ್ರಯೋಜನವೇ ಸರ್ಕಾರದ ಪ್ರಯೋಜನವೆಂಬ ಅಂಶವನ್ನು ಅವರ ಚಿತ್ತದಲ್ಲಿ ನಾಟಿಸುವುದು.'

ಎಂದು ಇದರ ಉದ್ದೇಶವು ಪ್ರಕಟಗೊಳಿಸಲ್ಪಟ್ಟಿತು.

ಪ್ರಜಾಪ್ರತಿನಿಧಿ ಸಭೆಯ ಮೂಲಕ ರಾಜ್ಯಾಡಳಿತದಲ್ಲಿ ಕಾಲಕಾಲಕ್ಕೆ ಮಾಡಲ್ಪಡುವ ವ್ಯತ್ಯಾಸಗಳಿಂದಲೂ, ಇಗಾಗ್ಗೆ ಕಲ್ಪಿಸಲ್ಪಡುವ ನೂತನ ಕಾಯಿದೆಗಳಿಂದಲೂ, ಹೊಸದಾಗಿ ಹಾಕಲ್ಪಡುವ ಕಂದಾಯ ಮುಂತಾದುವುಗಳಿಂದಲೂ ಜನಗಳ ಮನಸ್ಸಿನಲ್ಲಿ ಯಾವ ಉದ್ವೇಗವೂ ಉಂಟಾಗದೆ, ಪ್ರತಿಯೊಂದು ಕಾರ್ಯವೂ ಪ್ರಜಾಸಮ್ಮತಿಯನ್ನು ಪಡೆದೇ ನಡೆಯಬೇಕೆಂಬಂತೆ ಇರಲೆಂಬ ಮಹೋನ್ನತ ಧ್ಯೇಯವನ್ನಿಟ್ಟುಕೊಂಡು ರಂಗಾಚಾರ್ಲುಯವರು ಈ ಮಹಾಸಭೆಯನ್ನು ಪ್ರಾರಂಭಿಸಿದರಾದರೂ, ಆ ವಿಷಯದಲ್ಲೂ ಅವರಿಗೆ ದೂಷಣೆ, ಅಪನಿಂದೆಗಳು ಬಾರದಿರಲಿಲ್ಲ. ಅವರು ಮದರಾಸು ಪ್ರಾಂತ್ಯದವರಾದುದರಿಂದ ಮೈಸೂರಿನವರ ಪ್ರೀತಿವಿಶ್ವಾಸಗಳನ್ನು ಸಂಪಾದಿಸುವುದಕ್ಕಾಗಿ ಹೀಗೆಲ್ಲ ಮಾಡುತ್ತಿರುವರೆಂದು ಕೆಲವರೂ, ಅರಮನೆಯ ಒಡವೆಗಳನ್ನು ಅಪಹರಿಸಿದುದರಿಂದ ಬಂದ ಅಪವಾದವನ್ನು ಮುಚ್ಚಿಕೊಳ್ಳುವುದಕ್ಕಾಗಿ, ಹೀಗೆ ದೊಡ್ಡ ರಾಜತಂತ್ರಜ್ಞರೋ ಎಂಬಂತೆ ಪ್ರಜಾಸ್ವಾತಂತ್ರ್ಯ ಕೊಡುವಿಕೆ ಮುಂತಾದ ದೊಡ್ಡದೊಡ್ಡ ಮಾತುಗಳಿಂದ ಜನಗಳನ್ನು ಮೋಹಗೊಳಿಸುತ್ತಿದ್ದಾರೆಂದು ಕೆಲವರೂ, ಹೀಗೆ ದುರ್ಜನರು ಮನಬಂದಂತೆ ಅವರನ್ನು ನಿಂದಿಸತೊಡಗಿದ್ದರು. ಆದರೆ, ರಂಗಾಚಾರ್ಲುಯವರು ಮಾತ್ರ ಈ ದೂಷಣೆಭೂಷಣೆಗಳ ಕಡೆಗೆ ಲಕ್ಷ್ಯವಿಡದೆ ತಮ್ಮ ಧ್ಯೇಯವನ್ನನುಸರಿಸಿ ಧೈರ್ಯದಿಂದ ಮುಂದರಿಸಿದ್ದರು. ಅವರು ಪ್ರಜೆಗಳ ಅನುಗ್ರಹ ಸಂಪಾದನೆಗಾಗಿ ಕೆಲಸ

ಮಾಡಬೇಕಾದ ಆವಶ್ಯಕತೆಯೇನೂ ಇರಲಿಲ್ಲ. ಪ್ರಪಂಚದಲ್ಲಿ ರಾಜಕೀಯ ವಾತಾವರಣವು ಯಾವ ದೆಸೆಯನ್ನನುಸರಿಸಿ ಚಲಿಸುತ್ತಿದೆಯೆಂಬುದನ್ನು ತಮ್ಮ ಸೂಕ್ಷ್ಮಮತಿಯಿಂದ ತಿಳಿದ ಅವರು ತಮ್ಮ ಈ ದೇಶವೂ ಇತರ ದೇಶಗಳಂತೆಯೇ ಉನ್ನತಸ್ಥಿತಿಗೆ ಬರಲೆಂದು, ದೇಶಾಭಿಮಾನಪೂರಿತರಾಗಿ ಮೊದಲಿನಿಂದಲೂ ಲೇಖನ ಮತ್ತು ಪುಸ್ತಕಾದಿಗಳ ಮೂಲಕ ತಮ್ಮ ಅಭಿಪ್ರಾಯವನ್ನು ತಿಳಿಸುತ್ತಾ ಬಂದಂತೆಯೇ, ಈಗ ಸ್ವತಃ ಪ್ರಚರಿಸಿ, ತಮ್ಮ ಉದ್ದೇಶವನ್ನು ಪ್ರಜಾಪ್ರತಿನಿಧಿ ಸಭಾರೂಪದಿಂದ ವ್ಯಕ್ತಗೊಳಿಸಿದರಲ್ಲದೆ, ಅದರಲ್ಲಿ ಅವರ ಸ್ವಾರ್ಥೋದ್ದೇಶ ಸಾಧನೆಯೇನೂ ಇರಲಿಲ್ಲ. ಮಾತ್ರವಲ್ಲ - ಆ ಮಹನೀಯರು ಮಕ್ಕಳಿಗೆ ಬಾಲಪಾಠವನ್ನು ಹೇಳಿಕೊಡುವಂತೆ, ತಮ್ಮ ಅಧಿಕಾರಸ್ಥಾನದಿಂದಲೇ, ಪ್ರಜೆಗಳು ಸ್ವಾತಂತ್ರ್ಯಪ್ರಾಪ್ತಿಗಾಗಿ ತಮ್ಮತಮ್ಮಲ್ಲೇ ಸಭೆಗಳನ್ನು ನಡೆಸಿಕೊಂಡು ತಮ್ಮ ಶ್ರೇಯಸ್ಸಿಗೆ ಸಂಬಂಧಪಟ್ಟ ವಿಷಯಗಳನ್ನು ಚರ್ಚಿಸಿ ತೀರ್ಮಾನಿಸಿಕೊಳ್ಳಬೇಕು. ಅಲ್ಲದೆ ಜನಸಾಮಾನ್ಯರ ತಿಳಿವಳಿಕೆಗಾಗಿ, ವರ್ತಮಾನ ಪತ್ರಗಳನ್ನು ಹೊರಡಿಸಿಯೂ ಗ್ರಂಥರಚನೆ ಮಾಡಿಯೂ, ಈ ಭಾವನೆಯು ಜನಮನದಲ್ಲಿ ಅಭಿವೃದ್ಧಿಯಾಗುವಂತೆ ಪ್ರಯತ್ನಿಸಬೇಕು ಎಂದು ಸಲಹೆಗಳನ್ನು ಕೊಡುತ್ತಿದ್ದರು. ಪ್ರಜಾಪ್ರತಿನಿಧಿ ಸಭೆಯಲ್ಲಿ ದೇಶದಲ್ಲಿದ್ದ, ಜಮೀನುದಾರರೂ, ವಿದ್ಯಾವಂತರೂ, ಸಾಹುಕಾರರೂ ಶ್ರದ್ಧೆವಹಿಸಿ ಹೆಚ್ಚು ಹೆಚ್ಚು ಭಾಗ ತೆಗೆದುಕೊಂಡು ಹೀಗೆ ಸರ್ಕಾರದವರು ನಡೆಯಿಸುವ ಕಾರ್ಯಕಲಾಪಗಳೊಂದಿಗೆ ಸಂಬಂಧಪಡುವುದರಿಂದ, ಸರ್ಕಾರದವರು, ರಾಜ್ಯಾಧಿಕಾರದ ವಿಚಾರದಲ್ಲಿ ಕಾಲಕಾಲಕ್ಕೆ ಮಾಡುವ ಸುಧಾರಣೆ ಮುಂತಾದುವುಗಳ ವಿಷಯದಲ್ಲಿ ಜನಮನವು ದುರಭಿಪ್ರಾಯಪಡಲು ಅವಕಾಶವು ತಪ್ಪಿ-ರಾಜಪ್ರಜೆಗಳಲ್ಲಿ ಸಹಾನುಭೂತಿಯು ಹಬ್ಬಲು ಅವಕಾಶವಾಗಬೇಕೆಂಬುದೇ ಅವರ ಮುಖ್ಯಾಶಯವಾಗಿದ್ದಿತು. ಅದನ್ನು ಅವರು ತಮ್ಮಿಂದ ಸಾಧ್ಯವಿದ್ದ ಮಟ್ಟಿಗೂ ಕಾರ್ಯರೂಪಕ್ಕೆ ತರಲು ಪ್ರಯತ್ನಿಸುತ್ತಿದ್ದರು.

ಬ್ರಿಟಿಷ್ ಇಂಡಿಯಾದಲ್ಲಿ ನೌಕರಿಯಲ್ಲಿದ್ದಾಗಲೇ ಅವರು ಸರ್ಕಾರಿ ನೌಕರರು ಲಂಚ ತೆಗೆದುಕೊಳ್ಳುವ ವಿಚಾರವನ್ನು ದ್ವೇಷಿಸುತ್ತಿದ್ದರೆಂಬ ಸಂಗತಿಯು ಈವರೆಗೇ ತಿಳಿದಿದೆಯಷ್ಟೆ? ಈಗ ಸಂಸ್ಥಾನದ ಸರ್ವಾಧಿಕಾರ

ಷ್ಠೂ ಕೈಗೆ ಸಿಕ್ಕಿದ್ದ ಸಂದರ್ಭದಲ್ಲಿ ಅದನ್ನು ಕಾರ್ಯರೂಪಕ್ಕೆ ತರುವ ವಿಷಯದಲ್ಲಿ ಆಚಾರ್ಲುರವರು ಕೃತಸಂಕಲ್ಪರಾದರು. ತಮ್ಮ ಕೈಕೆಳಗಿನ ತಾಲ್ಲೂಕು ಅಥವ ಡಿಸ್ಟ್ರಿಕ್ಟ್ ಅಧಿಕಾರಿಯು ಯಾವನಾಗಲೀ ಲಂಚ ತೆಗೆಯುವ ದುಷ್ಟಸ್ವಭಾವದವನೆಂದು ತಿಳಿದರೆ, ಅವನನ್ನು ನಿರ್ದಾಕ್ಷಿಣ್ಯವಾಗಿ ಕರೆಸಿ ವಿಚಾರ ನಡೆಸಿ, ನಿಂದಿಸಿ, ಅಪಮಾನಗೊಳಿಸಿ ದೂರ ಸ್ಥಳಕ್ಕೆ ವರ್ಗಾಯಿಸಿಯೂ, ಸಂಬಳ ಕಡಮೆ ಮಾಡುವ-ಅಥವ 'ಸಸ್ಪೆಂಡು' ಮಾಡುವ ಮುಂತಾದ ಭಯಗಳನ್ನು ಹುಟ್ಟಿಸಿಯೂ, ಆ ದುರಾಚಾರವನ್ನು ನಿರ್ಮೂಲಿಸಲು ರಾತ್ರಿಹಗಲೆನ್ನದೆ ಜಾಗ್ರತರಾಗಿರುತ್ತಿದ್ದರು. ರಂಗಾಚಾರ್ಲುರವರೆಂದರೆ ಕೀಳು ಸ್ವಭಾವದ ನೌಕರರಿಗೆ ಸಿಂಹಸ್ವಪ್ನದಂತಿದ್ದು, ಸರ್ಕಾರದ ಆಡಳಿತವು ಬಹು ಬಿಗಿಯಿಂದ ನಡೆಯುತ್ತಿದ್ದಿತು. ಜಮಾಬಂದಿಗೆಂದು ಹೋದಾಗ್ಗೆ ಅಮಲ್ದಾರರು ಮತ್ತು ಶೆಪ್ಯೂಟಿ ಕಮಿಷನರುಗಳೂ ಬಿಟ್ಟೀ ಸರಬರಾಯಿ ಮಾಡಿಸಿಕೊಳ್ಳುವ ವಿಚಾರವೂ ಅವರ ಗಮನಕ್ಕೆ ಬಂದು ಅದನ್ನೂ ಖಂಡಿಸುತ್ತಿದ್ದರು. ಇಷ್ಟು ಖಂಡಿತ ಪ್ರಕೃತಿಯವರಾಗಿದ್ದರೂ, ನ್ಯಾಯಮಾರ್ಗತಪ್ಪಿ ನಡೆಯದೆ, ಶ್ರದ್ಧಾವಂತನಾಗಿ ಚಟುವಟಿಕೆಯಿಂದ ಕೆಲಸ ಮಾಡುವ ದೇಶೀಯನಿಗೆ ತಮ್ಮಿಂದ ಸಾಧ್ಯವಿದ್ದ ಸಹಾಯಗಳನ್ನೆಲ್ಲಾ ಕಲ್ಪಿಸಿಕೊಡುತ್ತಿದ್ದರು. ಅವರು ನ್ಯಾಯಶೀಲರಾಗಿದ್ದುದರಿಂದ ಬ್ರಿಟಿಷ್ ಅಧಿಕಾರಿಗಳಿಗಾಗಲೀ-ಐರೋಪ್ಯಜನರಿಗಾಗಲೀ, ಉದ್ಯೋಗ ಅಥವ ವ್ಯಾಪಾರ ಮುಂತಾದ ಸಂಗತಿಗಳಲ್ಲಿ ದಾಕ್ಷಿಣ್ಯಕ್ಕೆ ಬಿದ್ದು ಸ್ವದೇಶೀಯರಿಗೆ ಅನ್ಯಾಯವಾಗದಂತೆ, ಧೈರ್ಯದಿಂದ ನ್ಯಾಯರೀತಿಯಲ್ಲಿ ನಡೆದುಕೊಳ್ಳುತ್ತಿದ್ದರು. ಅಧಿಕಾರಿಗಳ ಅಥವ ನೌಕರರ ಚುನಾವಣೆಯಲ್ಲಿ ಯೋಗ್ಯರಾದ ದೇಶೀಯರು ಸಿಕ್ಕುತ್ತಿದ್ದ ಸಂದರ್ಭಗಳಲ್ಲಿ ಪರದೇಶೀಯರಿಗೆ ಎಂದಿಗೂ ಪುರಸ್ಕಾರ ಕೊಡುತ್ತಿರಲಿಲ್ಲ.

ಜನಸಾಮಾನ್ಯದಲ್ಲಿ ವಿದ್ಯಾಪ್ರಚಾರಮಾಡುವ ವಿಷಯದಲ್ಲಂತೂ ಅವರಿಗಿದ್ದ ಉತ್ಸಾಹವು ಅಷ್ಟಿಷ್ಟಲ್ಲ. ಎಲ್ಲಾ ತರಗತಿಯ ಜನರೂ ಬಾಲ್ಯ ಮತ್ತು ಪ್ರೌಢವಿದ್ಯಾಭ್ಯಾಸಗಳನ್ನು ಉದ್ದೇಶಪೂರ್ವಕವಾಗಿ ಕಲಿತು, ದೇಶಾಭಿವೃದ್ಧಿಕಾರ್ಯದಲ್ಲಿ ಸಹಾಯಕರಾಗಬೇಕೆಂದು ಇವರು ಜನಗಳಿಗೆ ಮೇಲಿಂದಮೇಲೆ ಪ್ರೋತ್ಸಾಹ ಕೊಡುತ್ತಿದ್ದರು. ವಿದ್ಯಾವಂತರಾದವರು ತಮ್ಮ ಸುತ್ತುಮುತ್ತಿನವರ ಅಭಿವೃದ್ಧಿಯನ್ನೇ ಗಮನಿಸಿ, ತಮ್ಮಿಂದಾದ ಸಾಧ್ಯ

ವಿದ್ಯ ಸಹಾಯಗಳನ್ನೆಲ್ಲಾ ಮಾಡಬೇಕಲ್ಲದೆ, ಸರ್ಕಾರದಲ್ಲಿ ಉದ್ಯೋಗ ಸಂಪಾದನೆ ಮಾಡುವುದೇ ತಾವು ಕಲಿತ ವಿದ್ಯೆಗೆ ಪ್ರಯೋಜನವೆಂಬ ಅಭಿಪ್ರಾಯವನ್ನು ತಮ್ಮ ಮನಸ್ಸಿನಿಂದ ದೂರಮಾಡಿ, ವ್ಯಾಪಾರ ಉದ್ಯೋಗ ವ್ಯವಸಾಯ ಕೈಗಾರಿಕೆ ಮುಂತಾದುವುಗಳಲ್ಲೂ ಅನುಭವ ಪಡೆದು, ಹೀಗೆ ವಿವಿಧ ಮಾರ್ಗಗಳಿಂದ ದೇಶಾಭಿವೃದ್ಧಿಯನ್ನುಂಟು ಮಾಡಬೇಕೆಂದು ಹೇಳುತ್ತಿದ್ದರು. ಸ್ತ್ರೀ ವಿದ್ಯಾಭ್ಯಾಸದ ವಿಷಯದಲ್ಲೂ ಅವರಿಗಿದ್ದ ಅಭಿಮಾನವು ಕಡಮೆಯಾದುದಲ್ಲ. ಸ್ತ್ರೀಯರ ಸೌಶೀಲ್ಯ, ಪಾರಿಶುದ್ಧ್ಯ, ಮಾನ ಮರ್ಯಾದೆಗಳ ರಕ್ಷಣೆಗೆ ಅವರ ವಿದ್ಯಾಭ್ಯಾಸವು ಸಹಕಾರಿಯಾಗಿರಬೇಕು. ಸ್ತ್ರೀಯರಿಗೆ ಭಕ್ತಿಭಾವ ಧರ್ಮಾಸಕ್ತಿಗಳು ಅವರು ಪಾಠಶಾಲೆಗಳಲ್ಲಿ ಹೊಂದುವ ವಿದ್ಯಾಭ್ಯಾಸದಿಂದ ಲಭ್ಯವಾಗಬೇಕು ಎಂಬುದು ಅವರ ಅಪೇಕ್ಷೆಯಾಗಿದ್ದಿತು.

ಕನ್ನಡದೇಶದಲ್ಲಿ ಉದ್ಯೋಗವನ್ನು ಪಡೆದು ಬಂದ ತರುವಾಯ ಅಲ್ಲಿಯ ದೇಶಭಾಷೆಯನ್ನು ಕಲಿತು, ದೇಶೀಯರೊಂದಿಗೆ ಆ ಭಾಷೆಯಲ್ಲೇ ಸಂಭಾಷಿಸಿ ವ್ಯವಹಾರ ನಡೆಸಬೇಕಾದುದು ತಮ್ಮ ಕರ್ತವ್ಯವೆಂದು ತಿಳಿದು ಆ ಮಹನೀಯರು ಕರ್ಣಾಟಕ ಭಾಷೆಯನ್ನು ಕಲಿಯಲಾರಂಭಿಸಿದ್ದರೆಂದು ತಿಳಿದುಬರುತ್ತದೆ.

ತಮ್ಮ ಮಂತ್ರಿತ್ವದಲ್ಲಿ, ಈ ದೇಶದ ಸಂಪದಭಿವೃದ್ಧಿ, ವ್ಯವಸಾಯ, ಕೈಗಾರಿಕೆ ಮುಂತಾದುವುಗಳ ಅಭಿವೃದ್ಧಿಗಾಗಿ ಆಗಿನ ರಾಜ್ಯದ ಆಡಳಿತ ವಿದ್ಯ ಸ್ಥಿತಿಯಲ್ಲಿ ಏನು ಸಾಧ್ಯವೋ ಆ ಮಾರ್ಗಗಳಿಂದಲೆಲ್ಲ ಸಹಾಯವನ್ನು ಕಲ್ಪಿಸಿಕೊಡುತ್ತಿದ್ದರು. ರಂಗಾಚಾರ್ಲುರವರಿಗೆ ರಾಜ್ಯದ ಪ್ರತಿಯೊಂದು ಪಂಗಡದವರೂ ವಿದ್ಯಾವಂತರಾಗಿ ಅವರವರ ಪಂಗಡದ ಅಭಿವೃದ್ಧಿಯನ್ನು ಕುರಿತು ಅವರವರೇ ಪರಿಶ್ರಮಮಾಡಬೇಕೆಂಬ ಅಭಿಪ್ರಾಯವಿತ್ತು. ಸ್ತ್ರೀವರ್ಗದ ಅಭಿವೃದ್ಧಿ ಕಾರ್ಯವು ಸ್ತ್ರೀಯರಿಂದಲೇ ನಡೆಯಬೇಕಲ್ಲದೆ ಸ್ತ್ರೀಯರಿಗೆ ಆವಶ್ಯಕವಾದ ಅನುಕೂಲತೆಗಳನ್ನು ಪುರುಷರು ಯೋಚಿಸಿ, ಅವರ ಸ್ಥಿತಿಯನ್ನು ಉತ್ತಮಗೊಳಿಸಬೇಕೆಂದು ಪ್ರಯತ್ನಿಸುವುದು ಅಸ್ವಾಭಾವಿಕ-ಅಸಾಧ್ಯ ಎಂದು ಯೋಚಿಸಿದ್ದರು. ಅವರಿಗೆ, ತಮ್ಮ ಪಾಲನೆಗೊಳಪಟ್ಟ ಸಕಲವರ್ಣದವರಲ್ಲೂ ಸಮಾನವಾದ ಪ್ರೀತಿವಿಶ್ವಾಸಗಳಿದ್ದವು. ಐರೋಪ್ಯರ ಸಂಪರ್ಕದಿಂದ ಈ ದೇಶದಲ್ಲಿ

ಹುಟ್ಟಿದ ಯೂರೋಪಿಯನ್ ಅಥವ ಆಂಗ್ಲೋ ಇಂಡಿಯನ್ ಎಂಬ ಒಂದು ಸಂಗಡದವರು ಅತ್ತ ಐರೋಪ್ಯರೂ ಅಲ್ಲದ, ಇತ್ತ ದೇಶೀಯರೂ ಅಲ್ಲದೆ ಉಭಯ ಭ್ರಷ್ಟರಾಗಿ ನಿಲ್ಲಲು ಎಡೆಯಿಲ್ಲದೆ ಅಲೆದಾಡುತ್ತಾ ಕಷ್ಟಪಡು ತ್ತಿದ್ದುದನ್ನು ಗಮನಿಸಿ ಈ ಮಹನೀಯರು, ಬೆಂಗಳೂರಿನ ಒಳಿ 'ವೈಟ್ ಫೀಲ್ಡ್' ಎಂಬ ಸ್ಥಳದಲ್ಲಿ ಅವರಿಗೆ ವಸತಿಯನ್ನು ಕಲ್ಪಿಸಿಕೊಟ್ಟು ಕಾಪಾಡಿ ದರೆಂದು ಹೇಳಲ್ಪಟ್ಟಿದೆ. ಇದಕ್ಕಾಗಿ ಈ ಸಂಗಡದವರು ಅವರಿಗೆ ವಿಶೇಷ ಕೃತಜ್ಞರಾಗಿದ್ದರು.

ಶ್ರೀ ವಾನ್ ರಂಗಾಚಾರ್ಲುಯವರು ೧೮೮೧ನೆಯ ಮಾರ್ಚಿ ತಿಂಗ ಳಲ್ಲಿ ದಿವಾನ್ ಪದವಿಯನ್ನು ವಹಿಸಿ, ರಾತ್ರಿಹಗಲುಗಳೆನ್ನದೆ ಶ್ರಮಪಟ್ಟು, ಈ ದೇಶದ ಅಭಿವೃದ್ಧಿಕಾರ್ಯವನ್ನು ಸಾಧಿಸಿದರು. ಅವರ ಮನಸ್ಸಿನಲ್ಲಿ ದೇಶಾಭಿವೃದ್ಧಿಗಾಗಿ ಮಾಡಬೇಕಾದ ಕಾರ್ಯಗಳು ಇನ್ನೂ ಏನೇನು ಇದ್ದುವೋ, ಯಾವ ಘನವಾದ ಉದ್ದೇಶ ಸಾಧನೆಯು ಅವರ ಚಿಂತನೆಗೆ ವಿಷಯವಾಗಿದ್ದಿತೋ ಅದನ್ನು ಹೇಳಲು ಸಾಧ್ಯವಿಲ್ಲ. ಆದರೆ ಅಷ್ಟರಲ್ಲೇ ಎಂದರೆ ೧೮೮೩ನೆಯ ಇಸ್ವಿಯ ಕೊನೆಯ ಭಾಗದಲ್ಲಿ ಅವರು, ರೋಗಗ್ರಸ್ತ ರಾಗಿ ಮಲಗಿದರು. ಆ ಕಾಹಿಲೆಯಲ್ಲೇ ಅವರು ಕೆಲವು ತಿಂಗಳುಗಳು ನರ ಳಿದಮೇಲೆ ಹವಾಬದಲಾವಣೆಗೆಂದು ಮದರಾಸಿಗೆ ಕರೆದೊಯ್ಯಲ್ಪಟ್ಟರು. ಅಲ್ಲೂ ಅವರಿಗೆ ಯಾವ ಬಗೆಯಿಂದಲೂ ಗುಣತೋರದೆ, ದಿನದಿನಕ್ಕೆ ಕ್ಷೀ ಣಿಸಿ, ಆ ಮಹನೀಯರು, ತಮ್ಮ ಪ್ರಜೋಪಕಾರಿಯಾಗಿದ್ದ ಜೀವನಯಾತ್ರೆ ಯನ್ನು ಮುಗಿಸಿ, ೧೮೮೩ನೆಯ ಜನವರಿ ೨೦ನೆಯ ದಿನ ದಿವಂಗತರಾದರು. ಅವರ ಆತ್ಮವು ಚಿರಶಾಂತತೆಯನ್ನು ಹೊಂದಲಿ!

## ಉ ಪ ಸಂ ಹಾ ರ.

'ಭಾರತೀಯರು ಆಡಳಿತ ಸಾಮರ್ಥ್ಯವನ್ನು ಗಳಿಸಿದವರಲ್ಲ. ತಮ್ಮ ದೇಶವನ್ನು ಸುರಕ್ಷಿತವಾಗಿ ಆಳಿಕೊಳ್ಳಲು ಅವರಿಂದ ಸಾಧ್ಯವಿಲ್ಲ' ಎಂ ಬೊಂದು ಭಾವನೆಯು, ದುರಭಿಮಾನಿಗಳಾದ ಕೆಲಮಂದಿ ಆಂಗ್ಲೇಯರಿಗೆ ಉಂಟಲ್ಲವೆ? ನಮ್ಮ ಕಥಾನಾಯಕರಂತಹ ಮಹನೀಯರ ಜೀವಿತ ಕಾರ್ಯ ಗಳು, ಅವರ ಆ ಭಾವನೆಯನ್ನು ಸುಳ್ಳೆನ್ನಿಸುತ್ತವೆ. ಇಂಥವರು ಭಾರ ತೀಯ ಜನಸಮುದಾಯದಲ್ಲಿ ಬಹು ವಿರಳರಾಗಿದ್ದಾರೆಂಬುದು ಸುಳ್ಳಲ್ಲ. ಆದರೆ ಯಾವ ದೇಶದಲ್ಲೂ ಜನಸಾಮಾನ್ಯವೆಲ್ಲವೂ ರಾಜನೀತಿ ವಿಚಾರದ

ರಿಂದ ತುಂಬಿಲ್ಲ. ಮಾನವಾಗ್ರಣಿಗಳಾಗಿ ಹುಟ್ಟಿದ ಇಂತಹ ಕೆಲವರೇ ತಮ್ಮ ಬುದ್ಧಿವೈಭವದಿಂದಲೂ, ಕಾರ್ಯಚಾತುರ್ಯದಿಂದಲೂ, ಏಕನಿಷ್ಠೆಯಿಂದಲೂ ಮಿಕ್ಕವರಿಗೆ ಮಾರ್ಗದರ್ಶಕರಾಗುವರು. ಈ ಪ್ರಕೃತಿ ಧರ್ಮವು ಇತರ ದೇಶಗಳಂತೆಯೇ ಈ ದೇಶದಲ್ಲೂ ತಕ್ಕಷ್ಟು ಪ್ರಮಾಣದಲ್ಲಿ ಇದ್ದೇ ಇದೆ.

ಶ್ರೀಮಾನ್ ರಂಗಾಚಾರ್ಲುರವರು ತಮ್ಮ ಬುದ್ಧಿವೈಭವ, ಕಾರ್ಯವಿಚಕ್ಷಣೆ ಮುಂತಾದುವುಗಳಿಂದ ಕೇವಲ ಮೈಸೂರಿನ ಕ್ಷೇಮವನ್ನು ಮಾತ್ರ ಕೋರಿದ್ದರೆಂದು ಭಾವಿಸಬಾರದು. ಅಖಿಲಭಾರತದ ಅಭಿವೃದ್ಧಿ ಕಾರ್ಯಕ್ಕಾಗಿ, ಅಗಾಧ ಸೇವಾಕಾರ್ಯಗಳನ್ನು ವಹಿಸಿದ್ದ ದಾಧಾಭಾಯಿ ನೌರೋಜಿ, ಮಹಾದೇವ ಗೋವಿಂದರಾನಡೆ, ರಾಜೇಂದ್ರಲಾಲ ಮಿತ್ರ, ಈಶ್ವರಚಂದ್ರವಿದ್ಯಾಸಾಗರ, ಸರ್. ಟಿ ಮಾಧವರಾವ್, ಸರ್. ಸಾಲಾರ್ ಜಂಗ್ ಮುಂತಾದ ಅವರ ಸಮಕಾಲೀನ ಮಹನೀಯರಂತೆ ಅವರ ಕಾರ್ಯಗಳೂ ಅಖಿಲಭಾರತದಲ್ಲಿ ಯಾವ ಮಾರ್ಗಗಳನ್ನು ಅನುಸರಿಸಿ ಅಭಿವೃದ್ಧಿ ಪ್ರಯತ್ನವು ನಡೆಯುತ್ತಿದ್ದಿತೋ, ಮೈಸೂರು ದೇಶದಲ್ಲೂ, ಅದೇ ಮಾರ್ಗವನ್ನೇ ಅನುಸರಿಸಿ ಸಾಗುತ್ತಿದ್ದುವು. ಪ್ರಜಾಸ್ವಾತಂತ್ರ್ಯಸಾಧನೆಗಾಗಿ ಬ್ರಿಟಿಷ್ ಇಂಡಿಯಾದಲ್ಲಿ ಪ್ರಯತ್ನವ ಆರಂಭಿಸಿ ರಾಷ್ಟ್ರೀಯ ಮಹಾಸಭೆಯು (Indian National Congress) ಪ್ರಾರಂಭವಾಗುವ ವೇಳೆಗೆ (೧೮೮೧) ನಮ್ಮ ಮೈಸೂರು ದೇಶದಲ್ಲಿ, ಪ್ರಜಾಪ್ರತಿನಿಧಿ ಸಭೆಯು ಆಗಲೇ ಪ್ರಾರಂಭವಾಗಿ ಕೆಲಸಮಾಡಲು ಆರಂಭಿಸಿದ್ದಿತು.

ಅವರ ಅಕಾಲಮೃತ್ಯುವಿಗಾಗಿ ಮೈಸೂರು ಶ್ರೀಮಾನ್ ಮಹಾರಾಜರೂ ಮತ್ತು ಪ್ರಜೆಗಳೂ ಮಾತ್ರವಲ್ಲ, ಅವರಲ್ಲಿ ವಿಶೇಷ ಅಭಿಮಾನವನ್ನಿಟ್ಟಿದ್ದ ಮಿ|| ಬೌರಿಂಗ್ ಸಾಹೇಬರು, ಮಿ|| ಟೈಲರ್ ಸಾಹೇಬರು ಅವರ ವಿದ್ಯಾಗುರುಗಳಾಗಿದ್ದ ಮಿ|| ಪೊವೆಲ್ ಸಾಹೇಬರು ಮುಂತಾದ ಆಂಗ್ಲೇಯರೂ ತಮ್ಮ ಅನುತಾಪವನ್ನು ವ್ಯಕ್ತಪಡಿಸಿದರು. ಹೀಗೆ ತಮ್ಮ ವಿದ್ಯೆ, ನಿಸ್ಪೃಹತೆ, ಸರಲಸಿಕೆ, ರಾಜಕಾರ್ಯ ವಿಚಕ್ಷಣೆ ಮುಂತಾದುವುಗಳಿಂದ ದೇಶವಿದೇಶದ ಮಹಾಜನಗಳ ಪ್ರೀತಿವಿಶ್ವಾಸಗಳನ್ನು ಸಂಪಾದಿಸಿಕೊಂಡಿದ್ದ ಶ್ರೀಮಾನ್ ರಂಗಾಚಾರ್ಲುರವರ ಜೀವಿತವು ಸಕಲ ಭಾರತೀಯ ಯುವಕರಿಗೂ ಆದರ್ಶವಾಗಿರಲಿ. ಸರ್ವೇಶ್ವರನು ನಮ್ಮ ತರುಣರಲ್ಲೂ ಅಂತಹ ಶ್ರೇಷ್ಠಗುಣಗಳು ನೆಲೆಗೊಂಡು. ಭಾರತದೇಶಾಭಿವೃದ್ಧಿಗಾಗಿ ಶ್ರಮಿಸುವಂತೆ ಸಾಹಸಸಾಮರ್ಥ್ಯಗಳನ್ನು ಪ್ರಸಾದಿಸಲಿ. **ತಥಾಸ್ತು.**

ಶ್ರೀರಾಮ ಸಹಾಯಂ

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸ ಪುಸ್ತಕಾವಳಿ)

---

**ಮುನ್ನುಡಿ:—**

ಶ್ರೀರಾಮಚಂದ್ರಸ್ವಾಮಿಯ ಪರಿಪೂರ್ಣಾನುಗ್ರಹದಿಂದ '**ಸುಬೋಧ ಕುಸುಮಾಂಜಲಿ ಗ್ರಂಥಮಾಲೆ**'ಯು, ಈವರೆಗೆ ೧೦೭ ಗ್ರಂಥ ಕುಸುಮಗಳಿಂದ, ಕರ್ಣಾಟಕಮಾತೆಯ ಕಂಠಪ್ರದೇಶದಲ್ಲಿ ಸಮರ್ಪಿಸಲು ಯೋಗ್ಯವಾದ ಒಂದು ಪುಷ್ಪಹಾರವನ್ನು ನಿರ್ಮಿಸಿ, ಅದಕ್ಕೆ ಪದಕಸ್ವರೂಪವಾಗಿ ಇಂದು, ಶ್ರೀರಾಮಚಂದ್ರನ ದಿವ್ಯಕಥಾ ನಿರೂಪಣೆಮಾಡಲು ಉದ್ದೇಶಿಸಿದೆ. ಶ್ರೀರಾಮ ಚಾರಿತ್ರವು ಪರಮಪಾವನವಾದುದು. ಶ್ರೀರಾಮ ನಾಮವು ಪಾಪಪರಿಹಾರಕವಾದುದು. ಕಲಿಯುಗದಲ್ಲಿ ಶ್ರೀರಾಮಧ್ಯಾನಕ್ಕಿಂತಲೂ ಸುಲಭವೂ ಶೀಘ್ರಫಲದಾಯಕವೂ ಆದ ಮುಕ್ತಿಸಾಧನವು ಮತ್ತೊಂದಿಲ್ಲ. ವೇದಶಾಸ್ತ್ರಾಭ್ಯಾಸಮಾಡಿ ಘನವಿದ್ವಾಂಸರೆನಿಸಿಕೊಂಡವರಾದರೂ ಪರಬ್ರಹ್ಮ ಸ್ವರೂಪಿಯಾದ ಆ ಶ್ರೀರಾಮನ ಅಡಿದಾವರೆಗಳಲ್ಲಿ ಭಕ್ತಿಭಾಗ್ಯವನ್ನು ಗಳಿಸದಿದ್ದರೆ, ಆ ವಿದ್ಯಾವೈಭವವೆಲ್ಲವೂ ಅರಣ್ಯದಲ್ಲಿನ ಬೆಳದಿಂಗಳಂತೆ ನಿರರ್ಥಕವಾಗುವುದು. ನಿರಕ್ಷರಕುಕ್ಷಿಯಾಗಿದ್ದರೂ ಯಾವನ ಹೃದಯದಲ್ಲಿ ಶ್ರೀರಾಮಸ್ವಾಮಿಯ ಪವಿತ್ರಪಾದಯುಗ್ಮವು ನೆಲೆಗೊಂಡಿರುವುದೋ ಅವನು ಉಜ್ವಲ ಯಶಃಕಾಂತಿಯಿಂದ ಬೆಳಗಿ ಸಕಲ ಲೋಕಾನಂದಕರನಾಗಿರುವನು. ಶ್ರೀರಾಮನಾಮ ಮಂತ್ರಜಪದ ಬಲದಿಂದಲೇ ಮಹಾಪಾಪಿಯಾಗಿದ್ದ ವ್ಯಾಧನು, ತನ್ನ ಸಕಲ ಪಾಪಗಳನ್ನೂ ನಿವೃತ್ತಿಸಿಕೊಂಡು, ಮಹರ್ಷಿಗಳಲ್ಲಿ ಗಣ್ಯನಾಗಿ ಆದಿಕಾವ್ಯವನ್ನು ರಚಿಸಿ, ತನ್ಮೂಲಕ ಜಗತ್ತನ್ನೇ ಪಾವನಗೊಳಿಸಲು ಶಕ್ತನಾದನು. ರಾಮನಾಮದ ಸಾಮರ್ಥ್ಯವು ಅನಿರ್ವಚನೀಯವಾದುದು. ರಾಮನಾಮದ ಶಕ್ತಿಯಿಂದಲೇ ಸೇತುಬಂಧನ ಕಾಲದಲ್ಲಿ ಕಲ್ಲು ಕಡಲಿನಲ್ಲಿ ತೇಲಿತು. ರಾಮ

ನಾಮದ ಸಾಮರ್ಥ್ಯದಿಂದಲೇ ಕರಡಿಕಪಿಗಳು, ದೇವತೆಗಳಿಂದಲೂ ಅಸಾಧ್ಯವೆಂಬಂತಹ ಕಾರ್ಯಗಳನ್ನು ಸಾಧಿಸಿ ದಾನವರ ಕುಲವನ್ನು ಧ್ವಂಸಗೊಳಿಸಲು ಶಕ್ತರಾದರು.

**ವಾ. ಷ.** ರಾಮಚಾರಿತ್ರ ಪಠನಾಭ್ಯಾಸಯೋಗದಿಂ
ಕ್ಷೇಮಂ ಸುಪುಷ್ಟಿ ನಿಶ್ಚಲಮತಿ ನಿರಾಲಸ್ಯ
ಮಾಮಹಾಸ್ಥೈರ್ಯಮಂ ಗೆಲ್ವಧಟು ತಮಗಾದುದು........!

ಎಂದು ರಾಮಸೂನು ಕುಶಕುಮಾರನು ರಾಮನಾಮದ ಸಾಮರ್ಥ್ಯವನ್ನು ನಿರೂಪಿಸಿರುವನು. ರಾಮ ಎಂಬ ಎರಡು ಅಕ್ಷರಗಳಲ್ಲಿ ಅದ್ವಿತೀಯ ಶಕ್ತಿಯು ಅಡಗಿದೆ. ಭಕ್ತಿಪೂರ್ವಕ ರಾಮನಾಮ ಧ್ಯಾನಮಾಡುವ ಮಾನವನಿಗೆ ಅಸಾಧ್ಯವಾದ ಕಾರ್ಯವು ಲೋಕದಲ್ಲಿ ಯಾವುದೂ ಇರಲಾರದೆಂದರೆ ಅದರಲ್ಲಿ ಅತಿಶಯೋಕ್ತಿಯಿಲ್ಲ. ತಿಳಿದಾಗಲೀ, ನಾಮಮಹಿಮೆಯ ಅದ್ಭುತ ಸಾಮರ್ಥ್ಯವಿಂಥದೆಂದು, ತಿಳಿಯದೆಯಾಗಲೀ ಯಾವನು, ಆ ಪವಿತ್ರ ರಾಮನಾಮ ಧ್ಯಾನದಲ್ಲಿ ನಿರತನಾಗಿರುವನೋ ಅವನು, ಅರಳೆಯ ರಾಶಿಯಲ್ಲಿ ಮುಚ್ಚಿಟ್ಟ ಬೆಂಕಿಯ ಕಿಡಿಯಂತೆ, ಶ್ರೀರಾಮನಾಮ ಪ್ರಭಾವದಿಂದ ಕಾಲಾನುಕಾಲದಲ್ಲಿ ತನ್ನ ಸಕಲ ಪಾಪಗಳನ್ನೂ ನೀಗಿಕೊಂಡು ಮಹರ್ಷಿ ಸಮಾನನಾಗುವನು. ಇದಕ್ಕೆ 'ರಾಮ' ಎಂಬ ನಾಮವನ್ನು ಸಹ ನಾಲಿಗೆಯಿಂದ ಉಚ್ಚರಿಸಲಾರದಷ್ಟು ಮಂದನಾಗಿದ್ದ ಬೇಡನು— 'ಮರಾ-ಮರಾ-ಮರಾ-ಮರಾ' ಎಂದು ರಾಮನಾಮದ ಆಭಾಸರೂಪವನ್ನೇ ಉಚ್ಚರಿಸುತ್ತಾ, ತನ್ಮೂಲಕವಾಗಿ ವಾಲ್ಮೀಕಿ ಮಹರ್ಷಿಯಾದುದಕ್ಕಿಂತಲೂ ಅದ್ಭುತವಾದ ಉದಾಹರಣೆಯೇತಕ್ಕೆ? ಹೀಗೆ ಶ್ರೀರಾಮನಾಮವು ಲೋಕರಕ್ಷಕವಾದುದಾಗಿ ವಿರಾಜಿಸುತ್ತಿರುವುದು.

ಶ್ರೀರಾಮನು, ಲೋಕಶಿಕ್ಷೆಗೆಂದು ಅವತಾರಮಾಡಿದ ಶ್ರೀಮನ್ಮಹಾವಿಷ್ಣುವು. ಲೋಕಜೀವಿತವು ಮಹಾಕ್ಲೇಶಕರವಾದುದು. ಇಂತಹ ಕ್ಲೇಶಕರವಾದ ಸಂಸಾರದಲ್ಲಿ ಹೇಗೆ ವಾಸಿಸಬೇಕು, ಇಂತಹ ಮಹಾಶರಧಿಯಲ್ಲಿ ಈಜಿಕೊಂಡು ಹೇಗೆ ಸುರಕ್ಷಿತವಾಗಿ ಪಾರಾಗಬೇಕು, ಎಂಬ ವಿಚಾರದಲ್ಲಿ ಮಾನವನಿಗೆ ಒಂದು ಅನುಕರಣೀಯ ಪಾಠವನ್ನು ಬೋಧಿಸ

ಲೋಕಸುಗವ್ರೋ ಎಂಬಂತೆ ಶ್ರೀಮನ್ಮಹಾವಿಷ್ಣುವು ಸುಪ್ರಸಿದ್ಧವಾದ ಸೂರ್ಯವಂಶದಲ್ಲಿ ದಶರಥ ರಾಜೇಂದ್ರನ ಜ್ಯೇಷ್ಠಪುತ್ರನಾಗಿ ಅವತಾರ ಮಾಡಿದನು. ರಾಮನು, ತನ್ನ ಲೌಕಿಕ ಆಚರಣೆಗಳಿಂದ ಮಾನವನು ಸಂಸಾರದಲ್ಲಿ ಹೇಗೆ ನಡೆಯಬೇಕು ಎಂಬುದರ ಅತ್ಯುತ್ತಮ ಪಾಠವನ್ನು ತೋರಿಸಿ ಕೊಟ್ಟಿದ್ದಾನೆ. ಪುತ್ರ, ಸೋದರ, ಸ್ನೇಹಿತ, ಶಿಷ್ಯ, ಪತಿ, ಪಿತ, ಶತ್ರು ಮುಂತಾದ ಸ್ಥಾನಗಳಲ್ಲಿ ಮನುಷ್ಯನ ಆಚರಣೆಯು ಹೇಗಿರಬೇಕು ಎಂಬುದಕ್ಕೆ ಶ್ರೀರಾಮ ಚಾರಿತ್ರಕ್ಕಿಂತಲೂ ಉತ್ಕೃಷ್ಟವಾದೊಂದು ಉದಾಹರಣೆಯು ಮತ್ತಾವ ಚರಿತ್ರೆಯಿಂದಲೂ ದೊರೆಯಲು ಸಾಧ್ಯವಿಲ್ಲ. ಹೀಗೆ ಶ್ರೀರಾಮನ ದಿವ್ಯಾವತಾರವು ಪಾಮರರಿಂದ ಜೀವನ್ಮುಕ್ತರವರೆ ಸಾಧುಶ್ರೇಷ್ಠರವರೆಗೂ ಸಕಲರಿಗೂ ಅನುಕರಣೀಯವಾದ ಉತ್ತಮಾದರ್ಶಗಳನ್ನು ತೋರಿಸುತ್ತಾ ಲೋಕೋದ್ಧಾರಕವಾಗಿರುವುದು.

ಅತ್ಯಲ್ಪವಾಗಿ ಪ್ರಾರಂಭವಾದ 'ಸುಬೋಧ ಕುಸುಮಾಂಜಲಿ ಗ್ರಂಥಮಾಲಾ' ಪ್ರಕಟನ ಕಾರ್ಯವು, ಸಿದ್ಧಾರ್ಥಕವಾಗಿ ಇಷ್ಟುದೂರ ನಡೆದು ಬರಲು, ನಮ್ಮ ಪ್ರಕೃತ ಕಥಾನಾಯಕನಾದ ಶ್ರೀರಾಮಚಂದ್ರಸ್ವಾಮಿಯ ಕೃಪಾಕಟಾಕ್ಷವೇ ಕಾರಣವು. ಕೇವಲ ಅಪ್ರಬುದ್ಧನೂ, ಅಜ್ಞನೂ, ಅಶಕ್ತನೂ ಆದ ಈ ದೀನನಿಂದ ಇಷ್ಟುಮಟ್ಟಿನ ಸಾಹಿತ್ಯಸೇವಾಕಾರ್ಯವನ್ನು ನಡೆಯಿಸಿದ ಶ್ರೀರಾಮಚಂದ್ರಮೂರ್ತಿಯ ಕಾರುಣ್ಯಾತಿಶಯವನ್ನು ಏನೆಂದು-ಎಷ್ಟೆಂದು ಹೊಗಳಲಾದೀತು? ಸುಹೃದಯರಾದ ಕರ್ಣಾಟಕ ದೇಶಬಾಂಧವರು, ಗ್ರಂಥಮಾಲೆಯ ವಿಷಯದಲ್ಲಿ ತಮಗಿರುವ ಸ್ವಾಭಾವಿಕ ಪ್ರೇಮದಿಂದಲೇ, ಇದನ್ನೂ ಆದರದಿಂದ ಸ್ವೀಕರಿಸಿ ಪ್ರೋತ್ಸಾಹಿಸಬೇಕೆಂದು ಪ್ರಾರ್ಥಿಸುತ್ತೇನೆ.

ಬೆಂಗಳೂರು ನಗರ
ತಾ|| ೨೬-೧೧-೧೯೩೦

ಇತಿ ಸುಜನ ವಿಧೇಯ,
ಯಂ. ರಾಮರಾವ್.

ಸುಬೋಧ ಮುದ್ರಣಾಲಯ, ಬೆಂಗಳೂರು ನಗರ.—೧೯೩೦

## ಶ್ರೀರಾಮಚಂದ್ರ ಪ್ರಸನ್ನ.

**ಶ್ಲೋಕ:**—ಇಕ್ಷ್ವಾಕುವಂಶ ಪ್ರಭವೋ ರಾಮೋನಾಮ ಜನೈಶ್ರುತಃ
ನಿಯತಾತ್ಮಾ ಮಹಾವೀರ್ಯೋ ದ್ಯುತಿಮಾನ್ ಧೃತಿಮಾನ್ವಶೀ ೧
ಬುದ್ಧಿಮಾನ್ನೀತಿಮಾನ್ ವಾಗ್ಮೀ ಶ್ರೀಮಾಞ್ಛತ್ರುನಿಬರ್ಹಣಃ
ವಿಪುಲಾಂಸೋ ಮಹಾಬಾಹುಃ ಕಮ್ಬುಗ್ರೀವೋ ಮಹಾಹನುಃ ೨
ಮಹೋರಸ್ಕೋ ಮಹೇಷ್ವಾಸೋ ಗೂಢಜತ್ರುರರಿನ್ದಮಃ
ಆಜಾನುಬಾಹು ಸ್ಸುಶಿರಾ ಸ್ಸುಲಲಾಟ ಸ್ಸುವಿಕ್ರಮಃ ೩
ಸಮಸ್ಸಮ ವಿಭಕ್ತಾಙ್ಗಸ್ಸ್ನಿಗ್ಧವರ್ಣಃ ಪ್ರತಾಪವಾನ್
ಪೀನವಕ್ಷಾ ವಿಶಾಲಾಕ್ಷೋ ಲಕ್ಷ್ಮೀವಾನ್ ಶುಭಲಕ್ಷಣಃ ೪
ಧರ್ಮಜ್ಞಸ್ಸತ್ಯಸನ್ಧಶ್ಚ ಪ್ರಜಾನಾಂಚ ಹಿತೇರತಃ
ಯಶಸ್ವೀ ಜ್ಞಾನಸಂಪನ್ನ ಶ್ಶುಚಿರ್ವಶ್ಯಸ್ಸಮಾಧಿಮಾನ್ ೫
ಪ್ರಜಾಪತಿಸಮಶ್ರೀಮಾನ್ ಧಾತಾರಿಪುನಿಷೂದನಃ
ರಕ್ಷಿತಾಜೀವಲೋಕಸ್ಯ ಧರ್ಮಸ್ಯ ಪರಿರಕ್ಷಿತಾ ೬
ರಕ್ಷಿತಾಸ್ವಸ್ಯಧರ್ಮಸ್ಯ ಸ್ವಜನಸ್ಯಚ ರಕ್ಷಿತಾ
ವೇದವೇದಾಙ್ಗತತ್ವಜ್ಞೋ ಧನುರ್ವೇದೇಚ ನಿಷ್ಠಿತಃ ೭
ಸರ್ವಶಾಸ್ತ್ರಾರ್ಥತತ್ವಜ್ಞ ಸ್ಸ್ಮೃತಿಮಾನ್ ಪ್ರತಿಭಾನವಾನ್
ಸರ್ವಲೋಕ ಪ್ರಿಯಸ್ಸಾಧು ರದೀನಾತ್ಮಾ ವಿಚಕ್ಷಣಃ ೮
ಸರ್ವದಾಭಿಗತಸ್ಸದ್ಭಿ ಸ್ಸಮುದ್ರ ಇವಸಿನ್ಧುಭಿಃ
ಆರ್ಯಸ್ಸರ್ವಸಮಶ್ಚೈವ ಸದೈಕಪ್ರಿಯದರ್ಶನಃ ೯
ಸ ಚ ಸರ್ವಗುಣೋಪೇತಃ ಕೌಸಲ್ಯಾನಂದವರ್ಧನಃ
ಸಮುದ್ರ ಇವಗಾಮ್ಭೀರ್ಯೇ ಧೈರ್ಯೇಣ ಹಿಮವಾನಿವ ೧೦
ವಿಷ್ಣುನಾಸದೃಶೋ ವೀರ್ಯೇ ಸೋಮವತ್ಪ್ರಿಯದರ್ಶನಃ
ಕಾಲಾಗ್ನಿಸದೃಶಃ ಕ್ರೋಧೇ ಕ್ಷಮಯಾಪೃಥಿವೀಸಮಃ ೧೧
ಧನದೇನ ಸಮಸ್ತ್ಯಾಗೇ ಸತ್ಯೇಧರ್ಮ ಇವಾಪರಃ
ತಮೇವಂ ಗುಣಸಂಪನ್ನಂ ರಾಮಂಸತ್ಯಪರಾಕ್ರಮಮ್ ೧೨
ಜ್ಯೇಷ್ಠಂ ಶ್ರೇಷ್ಠಗುಣೈರ್ಯುಕ್ತಂ ಪ್ರಿಯಂ ದಶರಥಸ್ಸುತಮ್
ಪ್ರಕೃತೀನಾಂ ಹಿತೈರ್ಯುಕ್ತಂ ಪ್ರಕೃತಿಪ್ರಿಯಕಾಮ್ಯಯಾ ೧೩

ಶ್ರೀ ನಾರದಮಹರ್ಷಿಪ್ರೋಕ್ತ 'ಬಾಲರಾಮಾಯಣಮ್'



ಸೂರ್ಯವಂಶ ಪ್ರದೀಪ ಶ್ರೀ ರಾಮಚಂದ್ರ

ಶ್ರೀರಾಮಸಹಾಯಂ

ಸೂರ್ಯವಂಶ ಪ್ರದೀಪ

# ಶ್ರೀ ರಾ ಮ ಚಂ ದ್ರ



## ಅಧ್ಯಾಯ ೧. ‘ಪುತ್ರಕಾಮೇಷ್ಟಿ—ಸಂತಾನಪ್ರಾಪ್ತಿ.’

ನಮ್ಮ ಮಾತೃಭೂಮಿಯಾದ ಈ ಭಾರತದೇಶವನ್ನು ಪಾಲಿಸಿದ ರಾಜವಂಶಗಳಲ್ಲಿ ಪುರಾಣಕಾಲದಿಂದಲೂ ಸುಪ್ರಸಿದ್ಧವಾದ ರಾಜವಂಶಗಳೆರಡು, ಅವೇ ಸೂರ್ಯ-ಚಂದ್ರವಂಶಗಳೆಂಬುವು. ಅವುಗಳಲ್ಲಿ ಸೂರ್ಯವಂಶವು ಮಹಾವಿಷ್ಣುವಿನ ಅಂಶಸಂಭೂತನಾದ ನಮ್ಮ ಕಥಾನಾಯಕನ ಜನನದಿಂದ ಪರಮಪಾವನವೆನಿಸಿದುದು. ಆ ವಂಶವಿಸ್ತಾರವು ಶ್ರೀ ವಾಲ್ಮೀಕಿ ರಾಮಾಯಣದಲ್ಲಿ ಹೀಗೆ ವರ್ಣಿತವಾಗಿರುವುದು. ಅವ್ಯಕ್ತಸ್ವರೂಪನಾದ ಮಹಾವಿಷ್ಣುವಿನ ನಾಭೀಕಮಲದಿಂದ ಬ್ರಹ್ಮನು ಉದ್ಭವಿಸಿದನು. ಬ್ರಹ್ಮನಿಂದ ಮರೀಚಿಯೂ, ಆತನಿಂದ ಕಾಶ್ಯಪನೂ ಹುಟ್ಟಿದರು. ಕಾಶ್ಯಪ ಪ್ರಜಾಪತಿಯಿಂದ ಲೋಕಚಕ್ಷುವಾದ ಸೂರ್ಯನ ಜನನವಾಯಿತು. ಆ ಸೂರ್ಯನಿಂದಲೇ ಈ ವಂಶಕ್ಕೆ ಸೂರ್ಯವಂಶವೆಂಬ ಹೆಸರು ಸಾರ್ಥಕನಾಮವಾಯಿತು. ಸೂರ್ಯನಿಂದ ಮನುವೂ, ಮನುವಿನಿಂದ ಇಕ್ಷ್ವಾಕುವೆಂಬ ಧರಾರಮಣನೂ ಜನಿಸಿದರು. ಇಕ್ಷ್ವಾಕುವಿನ ಸಂಬಂಧದಿಂದ ಈ ವಂಶಕ್ಕೆ ಇಕ್ಷ್ವಾಕುವಂಶವೆಂಬ ಹೆಸರೂ ಪ್ರಾಪ್ತವಾಯಿತು. ಈ ಇಕ್ಷ್ವಾಕುವಿನಿಂದ ಕುಕ್ಷಿಯೆಂಬಾತನೂ, ಕುಕ್ಷಿಯಿಂದ ಬಾಣನೂ, ಅವನಿಂದ ಅನರಣ್ಯನೂ, ಅವನಿಂದ ಪೃಥುವೂ ಜನಿಸಿದರು. ಪೃಥುವಿಗೆ ತ್ರಿ

ಶಂಕುವೂ, ಆತನಿಗೆ ದುಂಧುಮಾರನೆಂಬುವನೂ ಮಕ್ಕಳಾದರು. ಈ ದುಂಧುಮಾರ ಅಥವ ಯುವನಾಶ್ವನ ಉದರದಲ್ಲಿ ಮಾಂಧಾತೃ ಚಕ್ರವರ್ತಿಯು ಜನಿಸಿದನು. ಈ ಮಾಂಧಾತೃವಿಗೆ ಸುಸಂಧಿಯೂ, ಅವನಿಗೆ ಧ್ರುವಸಂಧಿಯೆಂಬುವನೂ, ಅವನ ಉದರದಲ್ಲಿ ಭರತನೆಂಬ ಪುತ್ರನೂ ಜನಿಸಿದರು. ಈ ಭರತನ ಮಗನು ಅಸಿತನು, ಈ ಅಸಿತನ ಮಗನೇ ಮಹಾ ಪ್ರಸಿದ್ಧನಾದ ಸಗರ ಚಕ್ರವರ್ತಿಯು. ಈ ಸಗರ ಚಕ್ರವರ್ತಿಗೆ ಅಸಮಂಜನೂ, ಆತನಿಗೆ ಅಂಶುಮಂತನೂ, ಆತನ ಉದರದಲ್ಲಿ ದಿಲೀಪನೂ, ದಿಲೀಪನಿಗೆ ಭಗೀರಥನೂ ಮಕ್ಕಳಾಗಿ ಜನಿಸಿದರು. ಭಗೀರಥನ ಮಗನು ಕಾಕುಸ್ಥನು, ಆತನ ಮಗನು ರಘುವು. ರಘುವಿನ ಪುತ್ರನು ಪ್ರವೃದ್ಧನು, ಗುರುಶಾಪದಿಂದ ಕಲ್ಮಾಷಪಾದನೆಂದು ವಿಖ್ಯಾತನಾದ ಈತನ ಉದರದಲ್ಲಿ ಶಂಖಣನೂ, ಆತನಿಂದ ಸುದರ್ಶನನೂ, ಸುದರ್ಶನನಿಂದ ಅಗ್ನಿವರ್ಣನೂ, ಅಗ್ನಿವರ್ಣನ ಉದರದಲ್ಲಿ ಶೀಘ್ರನೂ, ಶೀಘ್ರನಿಂದ ಮರುವೂ, ಆತನಿಂದ ಪ್ರಶುಶ್ರುಕನೂ, ಅವನಿಂದ ಅಂಬರೀಷನೂ ಜನಿಸಿದರು. ಅಂಬರೀಷನಿಗೆ ನಹುಷನು ಮಗನಾದನು. ಈ ನಹುಷನ ಮಗನು ಯಯಾತಿಯು. ಯಯಾತಿಯ ಉದರದಲ್ಲಿ ನಾಭಾಗನೂ. ಅವನಲ್ಲಿ ಅಜನೂ ಜನಿಸಿದರು. ಈ ಅಜಮಹಾರಾಜನ ಮಗನೇ ನಮ್ಮ ಕಥಾನಾಯಕನ ಪಿತನಾದ ದಶರಥ ಸಾರ್ವಭೌಮನು. ಸರ್ವಲೋಕ ಸೃಷ್ಟಿಕರ್ತನಾದ ಪಿತಾಮಹ-ಬ್ರಹ್ಮನೇ ಆದಿಯಾಗಿ ದಶರಥ ರಾಜನವರೆಗೆ ನಡೆದುಬಂದ ಪರಮ ಧಾರ್ಮಿಕವೂ, ಮಹಾ ಪರಿಶುದ್ಧವೂ, ಶುದ್ಧ ಸಾತ್ವಿಕ ತೇಜಸ್ಸಂಪನ್ನವೂ ಆದ ಸೂರ್ಯವಂಶವೆಂಬ ಈ ವಂಶವೃಕ್ಷದಲ್ಲೇ, ಶುದ್ಧ ಸತ್ವಮಯನಾದ ಶ್ರೀಮಹಾವಿಷ್ಣುವು ಲೋಕೋದ್ಧಾರಕ್ಕಾಗಿ-ರಾಮರೂಪ ಫಲವಾಗಿ ಪುತ್ರತ್ವೇನ ಅವತಾರಮಾಡಿದನು.

ದಶರಥ ಸಾರ್ವಭೌಮನು, ತನ್ನ ವಂಶಪಾರಂಪರ್ಯವಾಗಿ ಪ್ರಾಪ್ತವಾದ ರಾಜ್ಯವನ್ನು ಧರ್ಮದಿಂದ ಪರಿಪಾಲಿಸುತ್ತಾ, ಅಯೋಧ್ಯಾ ರಾಜಧಾನಿಯಲ್ಲಿ ವಾಸಿಸಿದ್ದನು. ಈತನಿಗೆ ಕೌಸಲ್ಯಾದೇವಿ, ಸುಮಿತ್ರಾದೇವಿ, ಕೈಕೇಯೀದೇವಿ ಎಂಬ ಮೂವರು ಮಹಿಷಿಯರಾದರು. ರಾಜನು ಪಟ್ಟಮಹಿಷಿಯಾದ ಕೌಸಲ್ಯಾದೇವಿಯಲ್ಲೂ, ಮೋಹದ ಭಾರ್ಯೆಯಾದ ಸು

ಮಿತ್ರೆ-ಕೈಕೇಯಿಯರಲ್ಲೂ ಸಮಾನವಾದ ಪ್ರೇಮವನ್ನಿಟ್ಟುಕೊಂಡು ಬಹು ಕಾಲ ಲೌಕಿಕ ಭೋಗಭಾಗ್ಯಗಳನ್ನನುಭವಿಸಿದನು.

ದಶರಥನೆಂಬ ಹೆಸರು ಆತನಿಗೆ ಅನ್ವರ್ಥನಾಮವಾಗಿದ್ದಿತು. ದಶ ರಥನೆಂದರೆ, ಹತ್ತುರಥಗಳುಳ್ಳವನೆಂದು ಅರ್ಥವಲ್ಲ. ಹತ್ತುದಿಕ್ಕುಗಳ ಲ್ಲೂ ಆತನು ತನ್ನ ರಥವನ್ನು ನಡೆಯಿಸಲು ಶಕ್ತನಾಗಿದ್ದನು. ಭೂಮಿಯು ಇಂದ್ರ ಅಗ್ನಿ ಮುಂತಾದ ಅಷ್ಟದಿಕ್ಕುಗಳಲ್ಲೂ ಆಕಾಶ ಪಾತಾಳಗಳೆಂಬ ಮತ್ತೆರಡು ದಿಕ್ಕುಗಳಲ್ಲೂ ಆತನ ರಥವು ತಡೆಬಡೆಯಿಲ್ಲದೆ ಸಂಚರಿಸು ತ್ತಿದ್ದಿತು. ಈ ಹತ್ತುದಿಕ್ಕುಗಳಲ್ಲಿ ಇದ್ದ ರಾಜರೂ ಆತನಿಂದ ಜಯಿ ಸಲ್ಪಟ್ಟು ಆತನಿಗೆ ಆಶ್ರಿತರಾಗಿ ಕಪ್ಪಕಾಣಿಕೆಗಳನ್ನೊಪ್ಪಿಸಿ ಓಲಗಿಸು ತ್ತಿದ್ದರು. ದಶರಥ ರಾಜೇಂದ್ರನು, ಹೀಗೆ ಏಕಚ್ಛತ್ರಾಧಿಪತಿಯಾಗಿ ಸಾರ್ವಭೌಮನೆನ್ನಿಸಿಕೊಂಡು, ದಿವ್ಯಸಿಂಹಾಸನಾಸೀನನಾಗಿ ಧರ್ಮದಿಂದ ರಾಜ್ಯಭಾರ ಮಾಡುತ್ತಾ ತನಗೆ ಸಮಾನನಾದ ಪೃಥ್ವೀಪತಿಯು ಭೂ ಲೋಕದಲ್ಲಿ ಯಾರೂ ಇಲ್ಲವೆಂದು ಹೊಗಳಿಸಿಕೊಂಡಿದ್ದನು. ಆತನ ರಾಜ್ಯಭಾರದಲ್ಲಿ ಕಾಲಕಾಲಕ್ಕೆ ಇಂದ್ರನು ಮಳೆಯನ್ನು ಸುರಿಸುವನು. ಭೂಮಿಯಲ್ಲಿ ಪೈರುಪಚ್ಚೆಗಳು ಸಮೃದ್ಧವಾಗಿ ಬೆಳೆಯುವುವು. ಜನರೂ ಪಶುಪಕ್ಷಿಗಳೂ, ನಿರಾತಂಕವಾಗಿ ಜೀವಿಸಿಕೊಂಡಿದ್ದರು. ಹೀಗೆ ಆತನ ರಾಜ್ಯಪಾಲನೆಯು ಬಹುಕಾಲ ನಡೆಯಿತು.

ಬಿಲ್ಲುವಿದ್ಯೆಯಲ್ಲಿ ದಶರಥರಾಜನಿಗೆ ಅತಿಶಯ ಪ್ರೌಢಿಮೆಯಿದ್ದಿತು. ಕಣ್ಣಿಂದ ನೋಡಿ, ಗುರಿಯಿಟ್ಟು ಬಾಣಪ್ರಯೋಗ ಮಾಡುವುದು ಮಾತ್ರ ವಲ್ಲ - ದಶರಥನು, ಕಿವಿಯಿಂದ ಒಂದು ಶಬ್ದವನ್ನು ಕೇಳಿ, ಶಬ್ದಬಂದ ದಿಕ್ಕಿನಲ್ಲಿ ಇರುವ ಒಂದು ವಸ್ತುವಿಗೆ ಗುರಿಯಿಟ್ಟು ಬಾಣಹೊಡೆದು ಅದನ್ನು ನಿಗ್ರಹಿಸಲೂ ಶಕ್ತನಾಗಿದ್ದನು. ಈ ಶಬ್ದಭೇದೀ ಎಂಬ ವಿದ್ಯೆಯ ಸಾಮರ್ಥ್ಯದಿಂದ ಆತನ ಧನುರ್ವಿದ್ಯಾ ಪ್ರೌಢಿಮೆಯು ಅದ್ವಿತೀಯವಾದು ದೆನ್ನಿಸಿತು. ಆತನ ಸಹಾಯವನ್ನು ದೇವತೆಗಳೂ ಅಪೇಕ್ಷಿಸುವಂತಾ ಯಿತು. ಒಂದಾನೊಂದು ಸಂದರ್ಭದಲ್ಲಿ ಆ ರಾಜೇಂದ್ರನು ದೇವ ರಾಜನಿಂದಲೇ ಪ್ರಾರ್ಥಿತನಾಗಿ ದಾನವರಮೇಲೆ ಯುದ್ಧಕ್ಕೆ ಹೋಗಿ

ಜಯಶೀಲನಾಗಿ ಬಂದಿದ್ದನು. ಇಂತಹ ಪ್ರೌಢಪ್ರತಾಪಿಯಾದ ದಶರಥನು ಮೃಗಯಾ ವಿಹಾರಾರ್ಥವಾಗಿ ಹೊರಡಲಿಚ್ಛಿಸಿ ಒಂದು ದಿನ ಧನುರ್ಬಾಣಗಳನ್ನು ಧರಿಸಿ, ದಿವ್ಯಾಶ್ವವನ್ನೇರಿ, ವನಾಭಿಮುಖವಾಗಿ ಹೊರಟನು. ಕಾಡಿನಲ್ಲಿ ಹುಲಿ, ಸಿಂಹ ಮುಂತಾದ ದುಷ್ಟಮೃಗಗಳನ್ನು ತನ್ನ ಧನುರ್ಬಾಣಗಳಿಗೆ ಆಹುತಿಕೊಡುತ್ತಾ, ವನವನ್ನು ಸಾಧುಪ್ರಾಣಿಗಳಿಗೂ, ಋಷಿಮುನಿಗಳಿಗೂ ಸಂಚಾರಯೋಗ್ಯವನ್ನಾಗಿ ಮಾಡುತ್ತಾ ಬಹುದೂರ ಸಂಚರಿಸಿಕೊಂಡು ಹೋದನು. ಹೀಗಿರುವಲ್ಲಿ ಬೇಟೆಯನ್ನು ಮುಗಿಸಿಕೊಂಡು ರಾಜಧಾನಿಗೆ ಅಭಿಮುಖವಾಗಿ ಹೊರಟುಬರುತ್ತಾ ನಿರ್ಜನಾರಣ್ಯದ ಮಧ್ಯಪ್ರದೇಶದಲ್ಲಿ ಪ್ರಯಾಣಮಾಡುತ್ತಿದ್ದಾಗ, ಪಕ್ಕದಲ್ಲೊಂದು ಪೊದೆಯ ಬಳಿ ಗುಳು ಗುಳು ಗುಳು ವೆಂಬಂತೆ ಆದ ಒಂದು ಶಬ್ದವು ರಾಜನ ಕಿವಿಗೆ ಕೇಳಿಸಿತು. ಆನೆಯು ನೀರು ಕುಡಿಯುತ್ತಿದ್ದರೆ ಆಗುವ ಶಬ್ದ ವಿಂಥದೆಂದು ಊಹಿಸಿ, ದಶರಥರಾಜನು ತನ್ನ ಶಬ್ದಭೇದೀ ವಿದ್ಯಾಸಾಮರ್ಥ್ಯದಿಂದ ಆ ಆನೆಯನ್ನು ವಧಿಸಬೇಕೆಂದು ಬಾಣವನ್ನು ಧನುಸ್ಸಿನಲ್ಲಿ ಹೂಡಿದನು. ರಾತ್ರಿಯ ಅಂಧಕಾರವು ಸುತ್ತಲೂ ವ್ಯಾಪಿಸಿದೆ! ಎದುರಿಗೆ ಏನಿದೆ ಎಂಬುದೂ ತಿಳಿಯದಷ್ಟು ಕತ್ತಲು. ದಶರಥನು, ಕೊಳದಲ್ಲಿ ನೀರು ಕುಡಿಯುತ್ತಿರುವ ಪ್ರಾಣಿಯು ಇರುವ ಸ್ಥಳವನ್ನು ನಿರ್ಧರವಾಗಿ ತಿಳಿಯಲು ಮತ್ತೂ ಸ್ವಲ್ಪಹೊತ್ತು ಕಿವಿಗೊಟ್ಟು ಆ ಶಬ್ದವನ್ನು ಆಲಿಸಿದನು. ಪುನಃ 'ಗುಳು ಗುಳು ಗುಳು' ವೆಂಬಂತೆ ಆ ಶಬ್ದವು ಕೇಳಿಸಿತು. ಒಡನೆ ಬಾಣಪ್ರಯೋಗ ಮಾಡಿಯೇ ಬಿಟ್ಟನು. ಆತನ ಲಕ್ಷ್ಯಭೇದನ ಸಾಮರ್ಥ್ಯವೆಂಥಾದ್ದೋ! ಆ ನಿಶಿತವಾದ ಬಾಣವು, ಒಡನೆ ಸುಯ್ಯೆಂದು ಹೊರಟು, ಕೊಳದಲ್ಲಿ ನೀರು ತುಂಬುತ್ತಿದ್ದ ದುರ್ದೈವಿ ಪ್ರಾಣಿಯನ್ನು ಘಾತಿಸಿತು. ರಾಜನು ತನ್ನ ಬಾಣಪ್ರಯೋಗದಿಂದ ಉಂಟಾದ ಪರಿಣಾಮವನ್ನು ತಿಳಿವ ಉದ್ದೇಶದಿಂದ ಹಾಗೆಯೇ ಕಿವಿಗೊಟ್ಟು ಆಲಿಸುತ್ತಾ ನಿಂತಿರಲು—'ಹಾ ಸತ್ತೆ, ಸತ್ತೆ, ವಿಧಿಯೇ, ನನಗೇಕೀ ದುರ್ಗತಿಯೊದಗಿತು ?' ಎಂದು ಅರಚಿಕೊಂಡ ಒಬ್ಬ ಮನುಷ್ಯಪ್ರಾಣಿಯ ಕಂಠಧ್ವನಿಯು ಕೇಳಿಸಿತು. ಆ ಮಾತುಗಳನ್ನು ಕೇಳಿ ರಾಜನು ಬಹು ಗಾಬರಿಯಾದನು. ಒಡನೆ, ಕುದುರೆಯಿಂದಿಳಿದು, ಕಲ್ಲುಮುಳ್ಳುಗಳ ಲಕ್ಷ್ಯ

ವಿಷದೆ ಆ ಸ್ಥಳಕ್ಕೆ ಹೋಗಿನೋಡಲು ಅಲ್ಲೊಬ್ಬ ಋಷಿಕುಮಾರನು ಮೈ ಯೆಲ್ಲವೂ ರಕ್ತಮಯವಾಗಿ, ಪ್ರಾಣೋತ್ಕ್ರಮಣಾವಸ್ಥೆಯಲ್ಲಿ ನರಳುತ್ತಾ, ತನ್ನ ದುರ್ವಿಧಿಯನ್ನು ನಿಂದಿಸಿಕೊಳ್ಳುತ್ತಾ, ಆ ನಿರ್ಜನಾರಣ್ಯದಲ್ಲಿ ನಿಸ್ಸ ಹಾಯಕರಾಗಿ ದೂರದಲ್ಲಿದ್ದ ಅಂಧರಾದ ತನ್ನ ವೃದ್ಧಮಾತಾಪಿತೃಗಳನ್ನು ಕುರಿತು ಹಂಬಲಿಸುತ್ತಾ, ಬಿದ್ದಿದ್ದುದನ್ನು ದಶರಥನು ಕಂಡನು. ತಾನು ಮಾಡಿದುದು ಎಂತಹ ಭಯಂಕರ ಕಾರ್ಯವೆಂಬುದು ಆಗ ಆತನ ಗಮನಕ್ಕೆ ಬಂದಿತು. ಮರಣೋನ್ಮುಖನಾಗಿದ್ದ ಆತನಿಂದ-ಅಲ್ಲಿಗೆ ಸಮೀಪ ದಲ್ಲೇ ಆತನ ವೃದ್ಧಮಾತಾ ಪಿತೃಗಳು ಇರುವರೆಂಬ ವೃತ್ತಾಂತವು ತಿಳಿ ಯಿತು. ಒಡನೆ ಆ ಮೃತನ ಶರೀರವನ್ನೂ ಹೊತ್ತು ಕೊಂಡೊಯ್ದು ಅವರ ಬಳಿಯಲ್ಲಿಟ್ಟು, ತನ್ನಿಂದ ಅಚಾತುರ್ಯವಾಗಿ ನಡೆದುಹೋದ ಮಹಾ ಪರಾಧಕ್ಕೆ ಪ್ರಾಯಶ್ಚಿತ್ತವಾಗಿ ಶಾಪಪ್ರದಾನ ಮಾಡಿರೆಂದೂ, ಅನು ಗ್ರಹಮಾಡಿದರೆ ತಾನು ಪುತ್ರಸ್ಥಾನೀಯನಾಗಿದ್ದು ಪೋಷಿಸುವೆನೆಂದೂ ಅವರನ್ನು ಬೇಡಿಕೊಂಡನು. ಆಗಲಾ ವೃದ್ಧ ವೈಶ್ಯದಂಪತಿಗಳು— 'ರಾಜೇಂದ್ರಾ, ಮಹಾ ಪಿತೃಭಕ್ತನಾದ ನಮ್ಮ ಕುಮಾರನನ್ನು ಕಳೆದು ಕೊಂಡು, ನಾವಿನ್ನು ಜೀವಿಸಲರಿಯೆವು. ನಮಗೆ ಮರಣಕಾಲದಲ್ಲಿ ಪ್ರಾ ಪ್ತವಾದ ಈ ಪುತ್ರಶೋಕವೇ ನಿನಗೂ ಪ್ರಾಪ್ತಿಸಲಿ. ನೀನೂ ಪುತ್ರ ಶೋಕಗ್ರಸ್ತನಾಗಿಯೇ ಮೃತನಾಗುವೆ. ಇಂದು ನೀನು ನಮಗಾಗಿ ಚಿತೆ ಯನ್ನು ಮಾತ್ರ ಏರ್ಪಡಿಸಿಕೊಡು. ಅಷ್ಟೇ ನಿನ್ನಿಂದ ಆಗಲಿರುವ ಉಪ ಕಾರವು. ನಾವು ಅಗ್ನಿಪ್ರವೇಶಮಾಡಿ ದೇಹತ್ಯಾಗಮಾಡುವೆವು' ಎಂದರು. ದಶರಥನು ಸಾವಕಾಶಮಾಡದೆ ಚಿತೆಯನ್ನೇರ್ಪಡಿಸಿ ಕೊಟ್ಟನು. ಆ ವೈಶ್ಯ ದಂಪತಿಗಳಿಬ್ಬರೂ ಹರಿಸ್ಮರಣ ಪೂರ್ವಕ ಆ ಚಿತೆಯನ್ನು ಪ್ರವೇಶಿಸಿ ಭಸ್ಮೀಭೂತರಾದರು. ದಶರಥನು, ಹೀಗೆ ಶಾಪಗ್ರಸ್ತನಾದರೂ, ಮರಣ ಕಾಲದಲ್ಲಿ ತನಗೆ ಪುತ್ರಶೋಕವು ಪ್ರಾಪ್ತವಾಗುವುದೆಂಬ ಶಂಕೆಯು ಮನ ಸ್ಸಿಗೆ ಶಲ್ಯರೂಪವಾಗಿ ಸಂಕಟವನ್ನುಂಟು ಮಾಡುತ್ತಿದ್ದರೂ, ಎಂತೂ ಪುತ್ರವಂತನಾಗುವ ಯೋಗವಿದೆಯಲ್ಲ ಎಂಬಷ್ಟು ಮಟ್ಟಿನ ಸಮಾಧಾನ ವನ್ನು ಹೊಂದಿ ಪ್ರಯಾಣಮಾಡುತ್ತಾ ರಾಜಧಾನಿಯನ್ನು ಸೇರಿದನು.

ಹೀಗೆ ಶಾಪಗ್ರಸ್ತನಾದ ದಶರಥರಾಜನು, ಅರುವತ್ತು ಸಹಸ್ರ ವರ್ಷಕಾಲ ರಾಜ್ಯಭಾರ ಮಾಡಿಕೊಂಡಿದ್ದನಾದರೂ ಆತನಿಗೆ ಸಂತಾನ ಸೌಭಾಗ್ಯವುಂಟಾಗಲಿಲ್ಲ. ಮುಂದೆ ಒಂದಾನೊಂದುದಿನ ಅಂತಃಪುರದಲ್ಲಿ ಕುಳಿತಿದ್ದ ದಶರಥನು ತನಗೆ ವೃದ್ಧಾಪ್ಯವು ಒದಗಿ ಬಂದುದನ್ನೂ, ಸೂರ್ಯವಂಶಾಭಿವೃದ್ಧಿಗಾಗಿ ತನ್ನಲ್ಲಿ ಸಂತಾನೋದಯವಾಗದಿದ್ದುದನ್ನೂ ತಿಳಿದು ಮಹದಾತಂಕಯುಕ್ತನಾಗಿ, ಕುಲಗುರುಗಳಾದ ವಸಿಷ್ಠಮಹರ್ಷಿಗಳನ್ನೂ ವಾಮದೇವ, ಕಾಶ್ಯಪ, ಜಾಬಾಲಿ ಮುಂತಾದ ಮಹರ್ಷಿಗಳನ್ನೂ ಪ್ರಾರ್ಥಿಸಿ ಉಪಾಯವನ್ನು ತಿಳಿಸಬೇಕೆಂದು ಕೇಳಿಕೊಳ್ಳಲು, ಅವರು ಹಯಮೇಧಯಾಗವಾಡೆಂದು ಸೂಚಿಸಿದರು. ಅಂತೆಯೇ ಆತನು ಆ ಮಹಾಯಜ್ಞವನ್ನು ನೆರವೇರಿಸಲು ಕೃತಸಂಕಲ್ಪನಾದನು. ಆ ವೇಳೆಗೆ ಆತನ ಮಂತ್ರಿಶೇಖರನಾದ ಸುಮಂತ್ರನು, ವಿಭಾಂಡಕಾಶ್ರಮದಲ್ಲಿದ್ದ ಮಹಾಮಹಿಮನಾದ ಋಷ್ಯಶೃಂಗ ಮಹರ್ಷಿಯ ಚರಿತ್ರೆಯನ್ನು ವರ್ಣಿಸಿಹೇಳಿ, ಆತನನ್ನು ಕರೆಯಿಸಿಕೊಂಡು ಯಜ್ಞಮಾಡುವೆಯಾದರೆ, ನಿನ್ನಾಯಜ್ಞವು ನಿರ್ವಿಘ್ನವಾಗಿ ನಡೆಯುವುದು ಮಾತ್ರವಲ್ಲದೆ ನಿನ್ನ ಅಭೀಷ್ಟಸಿದ್ಧಿಯೂ ಆಗುವುದು ಎಂದು ಹೇಳಿದನು. ದಶರಥನು ಪರಮಸಂತೋಷದಿಂದ, ತಾನೇ ಹೋಗಿ, ತನ್ನ ಮಿತ್ರನಾದ ರೋಮಪಾದರಾಜನ ರಾಜಧಾನಿಯಲ್ಲಿದ್ದ ಆತನ ಅಳಿಯನಾದ ಋಷ್ಯಶೃಂಗ ಮಹಾಮುನಿಯನ್ನು ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ, ಬಹು ಮರ್ಯಾದೆಯಿಂದ ತನ್ನ ರಾಜಧಾನಿಗೆ ಕರೆತಂದನು. ಋಷ್ಯಶೃಂಗನು ಪೌರೋಹಿತ್ಯವನ್ನು ವಹಿಸಲು ಒಪ್ಪಿದುದರಿಂದ ಇನ್ನು ತನ್ನ ಯಜ್ಞಕಾರ್ಯವು ಸರ್ವವಿಧಗಳಿಂದಲೂ ಸಫಲವಾಯಿತೆಂದೇ ನಂಬಿಕೊಂಡು, ಸಕಲ ಯಜ್ಞಸಮಾರಂಭಗಳನ್ನೂ ಶೇಖರಿಸಿ ಸಿದ್ಧನಾದನು. ತರುವಾಯ ಋಷ್ಯಶೃಂಗ ವಸಿಷ್ಠ ವಾಮದೇವಾದಿ ಮಹರ್ಷಿಗಳು ವೇದೋಕ್ತಪದ್ಧತಿಗೆ ಲೇಶಮಾತ್ರವೂ ವಿರೋಧವುಂಟಾಗದಂತೆ, ದಶರಥ ಸಾರ್ವಭೌಮನನ್ನು ಯಜ್ಞದೀಕ್ಷಿತನನ್ನಾಗಿಸಿ, ಬಹು ದಕ್ಷಿಣೆದಾನಗಳಿಂದ ಕೂಡಿದ ಅಶ್ವಮೇಧ ಮಹಾಯಾಗವನ್ನು ಸಾಂಗವಾಗಿ ನೆರವೇರಿಸಿ, ಇಂದ್ರಾದಿ ದೇವತೆಗಳಿಗೆ ಹವಿರ್ಭಾಗಗಳನ್ನು ಕೊಡಿಸಿದರು.

ಇದಾದ ತರುವಾಯ ಋಷ್ಯಶೃಂಗ ಮುನೀಶ್ವರನು ಸಂತಾನೋದಯಕ್ಕಾಗಿ ದಶರಥ ಚಕ್ರವರ್ತಿಯಿಂದ ಪುತ್ರಕಾಮೇಷ್ಟಿಯೆಂಬ ಮತೊಂದು ಯಾಗವನ್ನು ಮಾಡಿಸಲು ಕೃತಸಂಕಲ್ಪನಾದನು. ಇತ್ತ ಹೀಗಿರಲು, ಅತ್ತ ಲೋಕದಲ್ಲಿ ರಾವಣನೆಂಬ ದುಷ್ಟರಾಕ್ಷಸನು ಬ್ರಹ್ಮನ ವರಬಲದಿಂದ ಕೊಬ್ಬಿ ದೇವತೆಗಳನ್ನೂ, ಋಷಿಮುನಿಗಳನ್ನೂ, ಪತಿವ್ರತೆಯರಾದ ಸ್ತ್ರೀಜನಗಳನ್ನೂ ಪೀಡಿಸುತ್ತಾ, ಯಜ್ಞ ಹೋಮ ತಪಸ್ಸು ಮುಂತಾದ ಸತ್ಕಾರ್ಯಗಳಿಗೆ ವಿಘ್ನಕಾರಿಯಾಗಿ ಬಹು ಹಾವಳಿ ಮಾಡುತ್ತಿದ್ದನು. ಅವನ ಬಾಧೆಯಿಂದ ಲೋಕದಲ್ಲಿ ಸಜ್ಜನರ ಬಾಳ್ವೆಯೇ ಅಸಾಧ್ಯವೆನ್ನುವಂತಾಯಿತು. ಆಗ ದೇವತೆಗಳೂ ಸಕಲ ಋಷಿಮುನಿಗಳೂ ಸರ್ವಲೋಕ ಪಿತಾಮಹನಾದ ಬ್ರಹ್ಮದೇವನ ಬಳಿಗೆ ಹೋಗಿ ದೂರಿಕೊಂಡರು. ಬ್ರಹ್ಮದೇವನು ಅವರೆಲ್ಲರೊಂದಿಗೆ ಶ್ರೀಮನ್ಮಹಾವಿಷ್ಣುಮೂರ್ತಿಯ ಸಮೀಪವನ್ನು ಸೇರಿ, ಲೋಕವನ್ನು ಉದ್ಧರಿಸೆಂದು ಬೇಡಿಕೊಂಡನು. ಆಗ ಲೋಕರಕ್ಷಾನಿಪುಣನಾದ ಶ್ರೀಮನ್ನಾರಾಯಣನು—'ಎಲೈ ದೇವತೆಗಳಿರಾ, ನಿಮ್ಮ ಪ್ರಾರ್ಥನೆಯು ಅರಿಕೆಯಾಯಿತು. ಮದೋನ್ಮತ್ತನಾದ ರಾವಣನು, ಬ್ರಹ್ಮದೇವನಿಂದ ವರಗಳನ್ನು ಪಡೆಯುವಾಗ ಮನುಷ್ಯರೂ, ಕಾಡುಕಪಿಗಳೂ ಕ್ಷುದ್ರಪ್ರಾಣಿಗಳೆಂದು ಬಗೆದು ಅವರಿಂದ ತನಗೆ ಮರಣವಾಗಬಾರದೆಂಬುದನ್ನು - ಅಲಕ್ಷ್ಯದಿಂದ ಕೇಳಿಕೊಳ್ಳದೆ ಇರುವನು. ಆದುದರಿಂದ ಈಗ ನಾನು, ಮಹಾಧಾರ್ಮಿಕನೂ, ಸೂರ್ಯವಂಶಶ್ರೇಷ್ಠನೂ ಆದ ದಶರಥರಾಜೇಂದ್ರನ ಗರ್ಭದಲ್ಲೇ ಪುತ್ರತ್ವೇನ ಅವತಾರಮಾಡಿ ಅವನನ್ನು ಸಂಹರಿಸಿ ಲೋಕಕ್ಕೆ ಪ್ರಾಪ್ತವಾಗಿರುವ ತಾಪವನ್ನು ಶಾಂತಗೊಳಿಸುವೆನು. ನಮ್ಮೀ ಕಾರ್ಯಕ್ಕೆ, ದೇವತೆಗಳೆಲ್ಲರೂ ವಾನರ ಭಲ್ಲೂಕಾದಿರೂಪಗಳಿಂದ ಭೂಮಿಯಲ್ಲಿ ಅವತಾರಮಾಡಿ ಸಹಾಯ ಮಾಡಿರಿ. ನಿಮಗಿನ್ನು ಕ್ಷೇಮವಾಗುವುದು. ಚಿಂತಿಸಬೇಡಿರಿ' ಎಂದು ಅಭಯಪ್ರದಾನಮಾಡಿದನು ವಿಷ್ಣುಮೂರ್ತಿಯ ಈ ವಾಕ್ಯವು ಸಕಲರಿಗೂ ಸಂತೋಷಸನ್ನಂಟು ಮಾಡಿತು. ಎಲ್ಲರೂ ತಮ್ಮ ತಮ್ಮ ಸ್ಥಳಗಳಿಗೆ ಹೊರಟು ನಡೆದು, ಮುಂದೆ ತಾವು ಮಾಡಬೇಕಾದ ಕಾರ್ಯಗಳನ್ನು ಕುರಿತು ಸಿದ್ಧರಾಗತೊಡಗಿದರು.

ಅಯೋಧ್ಯೆಯಲ್ಲಿ ದಶರಥ ಮಹಾರಾಜನು ಪುತ್ರಕಾಮೇಷ್ಟಿಯಜ್ಞ ವನ್ನು ಆರಂಭಿಸಿದನು. ಮಹಾ ತಪಸ್ವಿಯಾದ ಋಷ್ಯಶೃಂಗ ಮುನೀಶ್ವರ ನು ವಿಧ್ಯುಕ್ತವಾದ ಆ ಯಜ್ಞವನ್ನು ಸಾಂಗವಾಗಿ ಆಚರಿಸುತ್ತಾ, ಯಜ್ಞ ಕುಂಡದಲ್ಲಿ ಜಾಜ್ವಲ್ಯಮಾನವಾಗಿ ಉರಿಯುತ್ತಿದ್ದ ಹೋಮಾಗ್ನಿಯಲ್ಲಿ ಚರು ಘೃತ ಮುಂತಾದ ಆಹುತಿಗಳನ್ನು ಸಮಂತ್ರಕವಾಗಿ ಸಮರ್ಪಿಸು ತ್ತಿದ್ದನು. ಸಕಲ ಮಹರ್ಷಿಗಳೂ ಋತ್ವಿಕ್ಕುಗಳೂ ಭೂಸುರರೂ ನೆರೆದು ವೇದಘೋಷ ಮಾಡುತ್ತಲೂ, ಜಯಧ್ವಾನ ಮಾಡುತ್ತಲೂ ಯಾಗಮಂಟ ಪವನ್ನು ಶೋಭಾಯಮಾನ ಗೊಳಿಸುತ್ತಿದ್ದರು. ದಶರಥನು ತನ್ನ ಮೂರು ಮಂದಿ ಪತ್ನಿಯರಿಂದಲೂ ಕೂಡಿ, ನಿಶ್ಚಲಮನೋಭಾವದಿಂದಲೂ ಶ್ರದ್ಧಾ ಭಕ್ತಿ ಪೂರ್ವಕವಾಗಿಯೂ ಪೂರ್ಣಾಹುತಿಯನ್ನು ಸಮರ್ಪಿಸಿ, ಅನುಗ್ರಹ ವಾಗಬೇಕೆಂದು ಅಂಜಲಿ ಬದ್ಧನಾಗಿ ಬೇಡಿಕೊಳ್ಳುತ್ತಿದ್ದನು. ಆ ವೇಳೆಗೆ ಸರಿಯಾಗಿ, ಹೋಮಕುಂಡದಲ್ಲಿನ ಅಗ್ನಿಯು, ಒಂದು ವೇಳೆ ಮಹಾ ಜಾ ಜ್ವಲ್ಯಮಾನವಾಗಿ ಪ್ರಕಾಶಿಸಿತು. ಒಡನೆಯೇ ಅಲೌಕಿಕ ತೇಜಸ್ಸಂಪನ್ನನಾದ ಮಹಾಪುರುಷನೊಬ್ಬನು ಕೈಯಲ್ಲೊಂದು ಪಾತ್ರೆಯನ್ನು ಹಿಡಿದುಕೊಂಡು, ಆ ಯಜ್ಞಕುಂಡದಿಂದ ಉದ್ಭವಿಸಿದನು. ದಶರಥನು ಪರಮಾದರದಿಂದ ಆತನನ್ನು ಕಂಡು ಸತ್ಕರಿಸಲು, ಆ ದಿವ್ಯಪುರುಷನು-'ಎಲೈ ಸಾರ್ವಭೌ ಮನೇ, ನಿನ್ನೀ ಯಾಗದಿಂದ ಸಂತುಷ್ಟರಾದ ದೇವತೆಗಳು ನಿನಗೆ ಮಂತ್ರ ಪೂರಿತವಾದ ಈ ಪಾಯಸವನ್ನು ಕಳುಹಿಸಿರುವರು. ನೀನು ಇದನ್ನು ನಿನ್ನ ಧರ್ಮಪತ್ನಿಯರಲ್ಲಿ ಹಂಚಿಕೊಡು. ಇದು ಸಂತಾನಪ್ರದವಾದುದು. ಇದರ ಸೇವನೆಯಿಂದ ನಿನ್ನಪತ್ನಿಯರ ಉದರದಲ್ಲಿ ವಂಶೋದ್ಧಾರಕರಾದ ಪುತ್ರರು ಉದಯಿಸುವರು' ಎಂದು ನುಡಿದು ಅಂತರ್ಧಾನನಾದನು.

ದಶರಥ ರಾಜೇಂದ್ರನು, ದೇವದತ್ತವಾದ ಆ ಪರಮಾನ್ನವನ್ನು ಪಡೆ ದು, ಅದನ್ನು ಶುಚಿರ್ಭೂತರಾದ ತನ್ನ ಪತ್ನಿಯರಲ್ಲಿ ಹಂಚಿಕೊಡಲು ಇಚ್ಛೈ ಸಿದನು. ಪಟ್ಟಮಹಿಷಿಯಾದ ಕೌಸಲ್ಯಾದೇವಿಗೆ ಅದರಲ್ಲಿ ಸಮ ಅರ್ಧ ಭಾಗವನ್ನು ಕೊಟ್ಟನು. ಮಿಕ್ಕುದರಲ್ಲಿ ಸುಮಿತ್ರಾದೇವಿಗೆ ಅರ್ಧಭಾಗ ವನ್ನು ಕೊಟ್ಟನು. ಮಿಕ್ಕ ಪಾದಾಂಶವನ್ನು ಪುನಃ ಸಮಭಾಗಮಾಡಿ ಅದ ರಲ್ಲಿ ಅರ್ಧವನ್ನು ಕೈಕೇಯೀ ದೇವಿಗೂ; ಮಿಕ್ಕುದನ್ನು ಪುನಃ ಸುಮಿತ್ರಾ

ದೇವಿಗೂ ಹಂಚಿಕೊಟ್ಟುಬಿಟ್ಟನು. ಕೇವಲ ದೈವಪ್ರೇರಿತನಾಗಿಯೋ ಎಂಬಂತೆ, ಹೀಗೆ ವಿಭಾಗಮಾಡಿಕೊಟ್ಟ ಆ ಪಾಯಸದ ಭಾಗವನ್ನು ಅನುಸರಿಸಿಯೇ ಶ್ರೀಮನ್ಮಹಾವಿಷ್ಣುವೂ ಆ ರಾಜಪತ್ನಿಯರ ಗರ್ಭಗಳಲ್ಲಿ ಪುತ್ರರೂಪದಿಂದ ಅಭಿವೃದ್ಧಿಯಾಗುತ್ತಿದ್ದನು. ದಶರಥರಾಜನು ದಿನದಿನಕ್ಕೆ ಶುಕ್ಲಪಕ್ಷದ ಚಂದ್ರಕಳೆಯಂತೆ ವೃದ್ಧಿಯಾಗುತ್ತಿದ್ದ ತನ್ನ ಪತ್ನಿಯರ ಪುಣ್ಯಗರ್ಭಗಳನ್ನು ಕಂಡು ಪರಮಾನಂದಪಡುತ್ತಾ, ಯುಕ್ತಕಾಲಗಳಲ್ಲಿ ಪುಂಸವನ ಸೀಮಂತಾದಿ ಮಹೋತ್ಸವಗಳನ್ನು ನೆರವೇರಿಸಿ ಪುತ್ರೋದಯಕಾಲವನ್ನೇ ನಿರೀಕ್ಷಿಸಿಕೊಂಡಿದ್ದನು.

ಋತುಗಳಲ್ಲಿ ಶ್ರೇಷ್ಠವೆನ್ನಿಸಿಕೊಂಡ ವಸಂತಋತುವು ಪ್ರಾಪ್ತವಾಯಿತು. ಪ್ರಕೃತಿಯು ಆನಂದಮಯವಾಯಿತು. ಎಲ್ಲೆಲ್ಲೂ ವೃಕ್ಷಾದಿಗಳಲ್ಲಿ ನವನವೀನ ಎಳೆದಳಿರುಗಳು ಪ್ರಕಾಶಿಸತೊಡಗಿದುವು. ಹವೆಯು ಸುಖೋಷ್ಣವಾಗಿ ಜನಮನಕ್ಕೆ ಆಹ್ಲಾದಕರವಾಗಿದ್ದಿತು. ಆ ವೇಳೆಗೆ ರಾಜಪತ್ನಿಯರಿಗೆ ದಿನ ತುಂಬಿ ಬಂದು ಪ್ರಸವವೇದನೆಯು ಕಾಣಿಸಿಕೊಂಡಿತು. ಚೈತ್ರಮಾಸದ ನವಮೀ ತಿಥಿಯಲ್ಲಿ ಪುನರ್ವಸು ಶುಭ ನಕ್ಷತ್ರದಲ್ಲಿ ಸಕಲ ಶುಭ ಗ್ರಹಗಳೂ ತಮ್ಮ ತಮ್ಮ ಉಚ್ಛಸ್ಥಾನದಲ್ಲಿದ್ದು ಶುಭಪ್ರದರಾಗಿದ್ದ ಸುಮುಹೂರ್ತದಲ್ಲಿ ಸಕಲ ಜಗನ್ನಾಯಕನಾದ, ಸರ್ವಲೋಕ ವಂದ್ಯನಾದ ಇಕ್ಷ್ವಾಕುವಂಶವರ್ಧನನಾದ, ಭಕ್ತಾಭೀಷ್ಟಪ್ರದಾಯಕನಾದ ಶ್ರೀರಾಮಚಂದ್ರನು ಪುತ್ರತ್ವೇನ ಶ್ರೀಮನ್ಮಹಾವಿಷ್ಣುವಿನ ಅರ್ಧಾಂಶದಿಂದ ಕೌಸಲ್ಯಾದೇವಿಯ ಪುಣ್ಯಗರ್ಭದಲ್ಲಿ ಜನಿಸಿದನು. ಮಹಾತೇಜಸ್ವಿಯಾದ ಆ ಶಿಶುಸಾರ್ವಭೌಮನಿಂದ ಕೂಡಿದ ಕೌಸಲ್ಯಾದೇವಿಯು ದೇವೇಂದ್ರನನ್ನು ಎತ್ತಿಕೊಂಡಿದ್ದ ಅದಿತಿದೇವಿಯಂತೆ ಪ್ರಕಾಶಿಸಿದಳು. ತರುವಾಯ, ಕೈಕೇಯೀದೇವಿಯ ಉದರದಲ್ಲಿ ಸರ್ವಲಕ್ಷಣ ಸಂಪನ್ನನಾದ ಒಬ್ಬ ಪುತ್ರನೂ, ಸುಮಿತ್ರಾದೇವಿಯ ಉದರದಲ್ಲಿ ಶುಭಾಂಗಗಳಿಂದ ಮನೋಹರಾಕಾರರಾದ ಅವಳಿಮಕ್ಕಳೂ ಜನಿಸಿದರು. ಚಂದ್ರನನ್ನು ಕಂಡ ಚಕೋರ ಪಕ್ಷಿಗಳಂತೆ, ತೇಜಸ್ವಿಗಳಾದ ಆ ಸುಕುಮಾರರನ್ನು ನೋಡಿದ ದಶರಥರಾಜನ ಕಣ್ಮನಗಳು ಆನಂದಿಸಿದುವು. ಬಹುಕಾಲದಿಂದಲೂ ಪುತ್ರಾಕಾಂಕ್ಷಿಯಾಗಿದ್ದ ಆ ರಾಜೇಂದ್ರನು ತನ್ನ ಮನ[illegible]ತಿತಗಳನ್ನು [illegible]ಷ್ಟ

ನೋಡಿದರೂ ದಣಿಯದೆ, ಆನಂದಬಾಷ್ಪವು ಕಾಲುವೆಯಾಗಿ ಸುರಿದುಹೋ ಗುತ್ತಿರಲು, ತನ್ನನ್ನು ತಾನೇ ಪರಮಧನ್ಯನೆಂದುಕೊಂಡು ಆನಂದಸಾಗರ ದಲ್ಲಿ ಓಲಾಡುತ್ತಿದ್ದನು. ಪುತ್ರೋತ್ಸವವಾದುದಕ್ಕಾಗಿ ರಾಜಾಜ್ಞೆ ಯಿಂದ ದೇಶದಲ್ಲೆಲ್ಲಾ ಮಹೋತ್ಸವಗಳು ನಡೆದುವು. ಸೆರೆಮನೆಯಲ್ಲಿದ್ದ ಅಪರಾಧಿಗಳೆಲ್ಲರಿಗೂ ಬಿಡುಗಡೆಯಾಯಿತು. ಬಂಡಿಬಂಡಿಗಳಲ್ಲಿ ಸಕ್ಕರೆ ಯನ್ನು ಬೀರಿದರು. ರಾಜನಂತೆಯೇ, ಲೋಕೋದ್ಧಾರಕನಾದ ರಾಮ ಚಂದ್ರನ ಉದಯದಿಂದ, ಪ್ರಕೃತಿಯಾದರೂ ಪರಮಾನಂದಗೊಂಡಿತು. ಪರಿಮಳಯುಕ್ತವಾದ ಮಂದಮಾರುತವು ಬೀಸಿತು. ತಿಳಿಗೊಳೋದಕವು ಉಕ್ಕಿಹರಿಯಿತು. ದಿಕ್ಕುಗಳು ಪ್ರಸನ್ನವಾದುವು. ಪುಷ್ಪಲತೆಗಳು, ಯಥೇ ಚ್ಛವಾಗಿ ಪುಷ್ಪಗಳನ್ನು ಸುರಿಸಿದುವು. ಹೋಮಾಗ್ನಿಯು ಅತಿಶಯವಾಗಿ ಪ್ರಜ್ವಲಿಸಿತು. ಪ್ರಕೃತಿಯೇ ಆನಂದಮಯವಾಯಿತು. ದೇವತೆಗಳೂ ದುಂದುಭಿಗಳನ್ನು ಮೊಳಗಿಸಿ ಪುಷ್ಪವೃಷ್ಟಿಯನ್ನು ಸುರಿಸಿದರು.



## ಅಧ್ಯಾಯ ೨. "ಸೀತಾಕಲ್ಯಾಣ"

ದಶರಥ ಸಾರ್ವಭೌಮನು ವಿಧ್ಯುಕ್ತವಾಗಿ ಜಾತಕರ್ಮ ಸಂಸ್ಕಾರ ವನ್ನು ನಡೆಸಿ, ಭೂಸುರರಿಗೂ ಋತ್ವಿಕ್ಕುಗಳಿಗೂ, ಅನೇಕ ಗೋ ಭೂ ಹಿರಣ್ಯಾದಿ ದಾನಗಳನ್ನೂ ಬಹು ಧನಯುಕ್ತವಾದ ದಕ್ಷಿಣೆಗಳನ್ನೂ ಕೊಟ್ಟು ತನ್ನ ಸಂತಾನೋದಯದ ಆನಂದವನ್ನು ಪ್ರಕಟಿಸಿದನು. ತರುವಾಯ ಮಂಗಳಸ್ನಾನವಾದ ನಂತರದಲ್ಲಿ ನಾಮಕರಣ ಮಹೋತ್ಸವವನ್ನು ನೆರೆ ವೇರಿಸಿ, ಕೌಸಲ್ಯಾಗರ್ಭಸಂಭೂತನಾದ ಜ್ಯೇಷ್ಠಪುತ್ರನಿಗೆ ರಾಮನೆಂದೂ, ಕೈಕೇಯಿಯ ಗರ್ಭಸಂಭೂತನಾದ ಶಿಶುವಿಗೆ ಭರತನೆಂದೂ, ಸುಮಿತ್ರಾ ಗರ್ಭಸಂಭೂತರಾದ ಆ ಅವಳಿಮಕ್ಕಳಿಗೆ ಲಕ್ಷ್ಮಣ ಶತ್ರುಘ್ನರೆಂದೂ ಹೆಸ ರಿಟ್ಟು ಕರೆದನು. ರಾಮ ಭರತ ಲಕ್ಷ್ಮಣ ಶತ್ರುಘ್ನರು, ತಮ್ಮ ಶಿಶುಸಹಜ ವಾದ ಆಟಗಳಿಂದಲೂ, ನಿಷ್ಕಲ್ಮಷ ಮನೋಭಾವದಿಂದ ಕೂಡಿದ ವಿಶುದ್ಧ

ನೋಟದಿಂದಲೂ ಅರಳಿದ ಕೆಂದಾವರೆಯಂತಿದ್ದ ಹಸನ್ಮುಖದಿಂದಲೂ, ತಮ್ಮನ್ನು ನೋಡುವವರ ಮನಸ್ಸಿನಲ್ಲಿದ್ದ ದುಃಖ ಸಂಶಯ ವಿಕಲ್ಪಾದಿಗಳನ್ನೆಲ್ಲ ದೂರೀಕರಿಸಿ, ಉತ್ಸಾಹವಂತರನ್ನಾಗಿ ಮಾಡುತ್ತಿದ್ದನು. ದಶರಥನು ಶರತ್ಕಾಲದ ಚಂದ್ರಮಂಡಲದಂತೆ ನಿಷ್ಕಳಂಕವಾಗಿದ್ದ ಆ ಬಾಲಕರ ಮನೋಹರ ಮುಖವನ್ನು ನೋಡಿ, ಅಮೃತವು ಸ್ರವಿಸುವಂತಿದ್ದ ಅವರ ಪುಟ್ಟಪುಟ್ಟ ಬಾಯಿಗಳನ್ನೂ, ತುಂಬುಗಲ್ಲಗಳನ್ನೂ ಮುದ್ದಿಟ್ಟುಕೊಂಡು, ಆ ಸುಕುಮಾರ ಶರೀರಗಳನ್ನು ಬಿಗಪ್ಪಿಕೊಂಡು, 'ಸ್ವರ್ಗದಲ್ಲಾದರೂ ಇಂತಹ ಸುಖವುಂಟೆ?' ಎಂದುಕೊಳ್ಳುವನು. ಆ ನಾಲ್ವರಲ್ಲೂ, ರಾಮನಮೇಲೆ ದಿನದಿನಕ್ಕೆ ಆತನ ಪ್ರೇಮವು ಹೆಚ್ಚುಹೆಚ್ಚಾಗಿ ಕೂರಸಾಗಿತು. ಶ್ರೀರಾಮನ ಮುಖವೂ, ಮೋಹನಾಕಾರವೂ ಆತನ ಮನಸ್ಸನ್ನೂ ಅಂತಃಕರಣವನ್ನೂ ಸಂಪೂರ್ಣವಾಗಿ ಆಕರ್ಷಿಸಿಕೊಂಡುವು. ಆ ತನ್ನ ತನುಜಾತನನ್ನು ನೋಡದೆ ಕ್ಷಣಮಾತ್ರವಾದರೂ ಹೇಗೆ ಕಾಲಯಾಪನೆ ಮಾಡಲಿ, ಎಂಬಂತಾಯಿತು. ಹೀಗೆ ದಶರಥರಾಜನು ತನ್ನ ಮಕ್ಕಳ ಬಾಲಲೀಲೆಗಳನ್ನು ನೋಡುತ್ತಾ, ದಿನಗಳನ್ನು ಕ್ಷಣಗಳಂತೆಯೂ, ಸಂತ್ಸರಗಳನ್ನು ದಿನಗಳಂತೆಯೂ ಭಾವಿಸಿ ಕಳೆಯುತ್ತಾ ಇದ್ದನು.

ಶ್ರೀರಾಮಾದಿಗಳು ಸಕಲವಿಧ ಲೀಲೆಗಳಿಂದಲೂ ಮಾತಾಪಿತೃಗಳ ಕಣ್ಮನಗಳಿಗೆ ಪರಮಾನಂದವನ್ನುಂಟುಮಾಡಿ ಶೈಶವಾವಸ್ಥೆ-ಬಾಲ್ಯಾವಸ್ಥೆಗಳನ್ನು ಕಳೆದರು. ಕೌಸಲ್ಯಾದಿಗಳು ತಮ್ಮ ಮಕ್ಕಳಿಗೆ ನವರತ್ನಖಚಿತಗಳಾದ ಸಕಲವಿಧ ಬಾಲದೊಡಿಗೆಯ ವಸ್ತ್ರ ಒಡವೆಗಳನ್ನೂ ಇಟ್ಟು ಸಿಂಗರಿಸಿ, ಅಂತಃಪುರದ ಚಂದ್ರಶಾಲೆಗಳಲ್ಲಿ ಆ ಮಕ್ಕಳನ್ನು ಬೆರಳುಹಿಡಿದು ದಟ್ಟಡಿಗಳನ್ನಿಡಿಸಿ, ಅವರಿಂದ ಮುದ್ದುಮಾತುಗಳನ್ನಾಡಿಸಿ, ಬಾಲ್ಯಸಹಜವಾದ ಅವರ ಆಟಪಾಟಗಳಿಗೆ ಹಿಗ್ಗಿ ಆನಂದಿಸಿ, ನಿದ್ರಾಹಾರಗಳ ಗಮನವೂ ಇಲ್ಲದೆ, ಹೀಗೆ ಅವರ ಸೇವೆಯಲ್ಲೇ ಮಗ್ನರಾಗಿರುತ್ತಿದ್ದರು. ಹೀಗಿರಲು, ಬಾಲಕರಿಗೆ ವಿದ್ಯಾಭ್ಯಾಸದ ಕಾಲವು ಪ್ರಾಪ್ತವಾಯಿತೆಂದು ದಶರಥನು, ವಸಿಷ್ಠಾದಿ ಗುರುವರ್ಯರನ್ನು ಬರಮಾಡಿ, ಅವರ ಅನುಜ್ಞೆಯಿಂದ ಮಹೋತ್ಸವಗಳನ್ನು ನಡೆಯಿಸಿ ರಾಮಾದಿಗಳಿಗೆ ಅಕ್ಷರಾಭ್ಯಾಸ ಕರ್ಮವನ್ನು ನೆರವೇರಿಸಿ, ನೆರೆದ ಸಕಲರನ್ನೂ, ಬಗೆಬಗೆಯಿಂದ ಆದರಿಸಿದನು. ತರುವಾಯ

ಮಿಕ್ಕ ತಮ್ಮಂದರೆಲ್ಲರೂ ಜ್ಯೇಷ್ಠನಾದ ಶ್ರೀರಾಮನನ್ನು ಅನುಸರಿಸಿ, ನಿತ್ಯವೂ ಸಾಮಾನ್ಯಬಾಲಕರಂತೆ, ಹಲಗೆಬಳಪಗಳನ್ನು ತೆಗೆದುಕೊಂಡು, ಪಾದಚಾರಿಗಳಾಗಿ ಗುರುಗಳ ಮನೆಗೆ ನಡೆದುಕೊಂಡು ಹೋಗಿ, ಅಲ್ಲಿ ವಿನಯ ವಿಧೇಯತೆಗಳಿಂದ ಸಕಲರಿಗೂ ಮೆಚ್ಚಿನವರಾಗಿದ್ದು, ವಿದ್ಯಾಭ್ಯಾಸ ಮಾಡುತ್ತಿದ್ದರು. ತಾವು ರಾಜಪುತ್ರರೆಂಬ ಹೆಮ್ಮೆಯಿಂದ ಮಿಕ್ಕಬಾಲಕರನ್ನು ಕೀಳುಭಾವನೆಯಿಂದ ಕಾಣುವಂತಹ ಕ್ಷುದ್ರಭಾವವು ಆ ಬಾಲಕರಲ್ಲಿ ಎಾದೂ ಸುಳಿದುದೇ ಇಲ್ಲ. ಅವರಲ್ಲೂ ಶ್ರೀರಾಮನಾದರೋ, ಮಹಾ ದಯಾರ್ದ್ರ ಸ್ವಭಾವದವನು, ತನ್ನಜೊತೆಯ ಬಾಲಕರಿಗೆ ಯಾವ ಕಾಲದಲ್ಲಿ ಏನು ಸಹಾಯ ಬೇಕಾಗಿದ್ದರೂ, ಹಿಂದೆಮುಂದೆ ನೋಡದೆ ಸಿದ್ಧನಾಗಿ ನೆರವೇರಿಸಿ, ಅವರನ್ನು ಸುಖಿಗಳನ್ನಾಗಿ ಮಾಡುವನು. ಶ್ರೀರಾಮನ ಜೊತೆಯಲ್ಲಿದ್ದಷ್ಟು ಕಾಲವನ್ನು-ಅವನ ಜೊತೆಯವರಾಗಲಿ, ತಂದೆ ತಾಯಿಗಳಾಗಲಿ, ಅಥವ ಗುರುಗಳೇ ಆಗಲಿ, ಸ್ವರ್ಗದಲ್ಲಿದ್ದು ಕಳೆದೆವೆಂದು ಕೊಳ್ಳುವರು. ಅಂತಹ ಮಹಿಮೆಯು ಬಾಲ್ಯದಿಂದಲೂ, ನಮ್ಮ ಕಥಾ ನಾಯಕನಲ್ಲಿದ್ದುದು!

ಲೋಕಗುರುವಾದ ಶ್ರೀಮನ್ಮಹಾವಿಷ್ಣುವೇ ಲೋಕಶಿಕ್ಷೆಗಾಗಿ ಅವತಾರ ಮಾಡಿರುವಾಗ್ಗೆ, ಆತನು ಮಾನವ ಗುರುಗಳನ್ನಾಶ್ರಯಿಸಿ ಸಂಗ್ರಹಿಸಬೇಕಾದ ವಿದ್ಯವೇನಿರಬಹುದು! ಆದರೂ ಲೀಲಾಮಾನುಷ ವಿಗ್ರಹನಾದ ಆತನು, ತನ್ನ ತಮ್ಮಂದಿರೊಡಗೂಡಿ ಶಿಷ್ಯವೃತ್ತಿಯನ್ನುಮಾಡಿ, ಬಹು ಸ್ವಲ್ಪಕಾಲದಲ್ಲೇ ಸಕಲ ವೇದಶಾಸ್ತ್ರಾದಿಗಳನ್ನೂ ಓದಿ ಧನುರ್ವಿದ್ಯೆಯನ್ನೂ ಅಭ್ಯಸಿಸಿದರು. ಅವರ ಸೂಕ್ಷ್ಮಮತಿಗೆ, ಪ್ರತಿಯೊಂದು ವಿಷಯವನ್ನೂ ಓದಿ, ಕಂಠಪಾಠಮಾಡಿ ತಿಳಿದುಕೊಳ್ಳಬೇಕೆಂಬ ಆವಶ್ಯಕವಿರಲಿಲ್ಲ. ಒಂದು ಬಾರಿ ಯಾವುದಾದರೊಂದು ವಿಷಯವನ್ನುಅಥವ ಶಾಸ್ತ್ರವಿಚಾರವನ್ನು ಗುರುಮುಖದಿಂದ ಶ್ರವಣಮಾಡಿದರೆ ಸಾಕು. ಒಡನೆ ಅದು ಶಿಲಾಲೇಖದಂತೆ. ಅವರ ಮನಃಫಲಕದಲ್ಲಿ ಮುದ್ರಿತವಾಗಿ ಹೋಗುವುದು, ಮಾತ್ರವಲ್ಲ ಪುನಃ ಎಂದಿಗೂ ಮರೆಯದಂತೆ ಸ್ಥಿರವಾಗಿ ನಿಂತುಹೋಗುವುದು. ಹೀಗೆ ವಿದ್ಯಾಭ್ಯಾಸವು ನಡೆಯುತ್ತಿರುವಲ್ಲಿ, ಬಾಲಕರು ಪರಸ್ಪರರ ಗುಣನಡತೆಗಳಿಂದ ಆಕರ್ಷಿತರಾಗಿ, ಸದಾ ಒಂದಿಗಿದ್ದು, ಪರಮಪ್ರೇಮದಿಂದ ಒಬ್ಬರನ್ನೊ

ಬ್ಬರು ಅಗಲದಂತೆ ಇಡಿಕೊಳ್ಳುತ್ತಿದ್ದರು. ರಾಮನೊಂದಿಗೆ ಲಕ್ಷ್ಮಣನಿಗೂ, ಭರತನೊಂದಿಗೆ ಶತ್ರುಘ್ನನಿಗೂ ನಿಕಟ ಸ್ನೇಹವೇರ್ಪಟ್ಟಿತು. ಆ ಇಬ್ಬರಿಬ್ಬರು ಊಟ-ಉಡಿಗೆ ತಿಂಡಿತೀರ್ಥ-ಆಟನೋಟಗಳಲ್ಲಿ ಒಂದಿಗೇ ಇದ್ದು ಕಾಲಕಳೆಯುತ್ತಿದ್ದರು. ದಶರಥರಾಜನು, ಮಹಾಗುಣಾಢ್ಯರೂ ತೇಜಸ್ವಿಗಳೂ ಕೀರ್ತಿಶಾಲಿಗಳೂ ವಿದ್ಯಾವಂತರೂ ಆಗಿದ್ದ ತನ್ನಾ ಮಕ್ಕಳನ್ನು ಕಂಡು ಬ್ರಹ್ಮಲೋಕಾಧಿಪತ್ಯವೇ ದೊರೆತಷ್ಟು ಮಟ್ಟಿಗೆ ಸಂತೋಷವೆಂಬ ಕಡಲಿನಲ್ಲಿ ಓಲಾಡುತ್ತಿದ್ದನು.

ಹೀಗಿರುವಲ್ಲಿ ಒಂದಾನೊಂದು ದಿನ ಬ್ರಹ್ಮರ್ಷಿಗಳಲ್ಲಿ ಶ್ರೇಷ್ಠರಾದ ವಿಶ್ವಾಮಿತ್ರರು ದಶರಥರಾಜನ ಆಸ್ಥಾನಕ್ಕೆ ಬಂದರು. ಶ್ರದ್ಧಾವಂತನಾದ ರಾಜನು ಅವರನ್ನು ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿ—'ಪೂಜ್ಯರೇ ತಮ್ಮಾಗಮನದಿಂದ ನನ್ನರಾಜ್ಯವೂ ವಂಶವೂ ಪಾವನವಾದುವು. ಲೋಕಕ್ಷೇಮಕ್ಕಾಗಿ ಆಚರಿಸುತ್ತಿರುವ ತಮ್ಮ ತಪಸ್ಸು ನಿರ್ವಿಘ್ನವಾಗಿ ನಡೆಯುತ್ತಿರುವುದೇ! ನನ್ನಲ್ಲಿ ಅನುಗ್ರಹವಿಟ್ಟು ಇಷ್ಟು ದೂರ ಬಿಜಯಮಾಡಿಸಿದ ತಾತ್ಪರ್ಯವೇನು? ಆಜ್ಞಾಪಿಸಬೇಕು! ಅದು ಎಂತಹ ಕಾರ್ಯವಾದರೂ ಹಿಂಜರಿಯದೆ ಅದನ್ನು ನೆರವೇರಿಸಿ ತಮ್ಮನ್ನು ಸುಪ್ರೀತರನ್ನಾಗಿ ಮಾಡುವೆನು' ಎಂದು ನುಡಿದನು. ದಶರಥನಿಂದ ಈ ಬಗೆಯ ವಾಗ್ದಾನವು ದೊರೆತ ಮೇಲೆ ವಿಶ್ವಾಮಿತ್ರರು—'ರಾಜೇಂದ್ರಾ, ನೀನು ಸತ್ಯಸಂಧನು. ಆಡಿದ ಮಾತಿಗೆ ತಪ್ಪಿ ನಡೆಯತಕ್ಕವನಲ್ಲ. ಕೇಳು. ನಾನೊಂದು ಯಾಗಕ್ಕಾಗಿ ದೀಕ್ಷಿತನಾಗಿರುವೆನು. ಅದಕ್ಕೆ ಕಾಮರೂಪಿಗಳಾದ ದೈತ್ಯರು ಒಂದು ವಿಘ್ನಗೊಳಿಸುತ್ತಿರುವರು. ಅವರನ್ನು ಕೋಪತಾಪಗಳನ್ನು ಪ್ರಕಟಿಸಿ ಶಾಪದಿಂದ ನಿಗ್ರಹಿಸಲು, ನಾನು ಯಜ್ಞದೀಕ್ಷಿತನಾಗಿರುವ ಈ ವೇಳೆಯು ತಕ್ಕುದಲ್ಲ. ಆದುದರಿಂದ ಮಹಾತೇಜಸ್ವಿಯೂ, ಧನುರ್ವಿದ್ಯಾಗ್ರೇಸರನೂ, ಸತ್ಯಸಂಧನೂ, ಶೂರನೂ ಆದ ನಿನ್ನಮಗ ಶ್ರೀರಾಮನನ್ನು ನನ್ನೊಂದಿಗೆ ಕಳುಹಿಸು. ಯಜ್ಞ ಸಮಾಪ್ತಿಯಾದೊಡನೆಯೇ ಸುರಕ್ಷಿತನಾಗಿ ಕರೆತಂದು ಬಿಡುವೆನು' ಎಂದು ನುಡಿದನು.

ವಿಶ್ವಾಮಿತ್ರರು, ತನ್ನ ಪಂಚಪ್ರಾಣ ಸದೃಶನಾದ ಶ್ರೀರಾಮನನ್ನೇ ಯಾಚಿಸುತ್ತಾರೆಂದು ದಶರಥನು ಕನಸುಮನಸುಗಳಲ್ಲೂ ಎಣಿಸಿರಲಿಲ್ಲ.

ವಿಶ್ವಾಮಿತ್ರರ ಈ ಯಾಚನೆಯು ಆತನನ್ನು ಮಹಾ ಧರ್ಮಸಂಕಟಕ್ಕೆ ಈಡು ಮಾಡಿತು. ಕ್ಷತ್ರಿಯ ಶ್ರೇಷ್ಠನಾದ ತಾನು ಆಡಿದ ಮಾತಿಗೆ ತಪ್ಪಿ ನಡೆಯು ವುದೆಂತು-ಹಾಗಲ್ಲದಿದ್ದರೆ, ಸುಕುಮಾರನೂ, ಪ್ರೇಮಪಾತ್ರನೂ ಆದ ಜ್ಯೇಷ್ಠಪುತ್ರ ಶ್ರೀರಾಮನನ್ನು ಕಳುಹಿಸುವುದೆಂತು ? ದಶರಥನು, ಏನು ಮಾಡಲಿಕ್ಕೂ ತೋರದೆ ಪಂಜರದಲ್ಲಿ ಸಿಕ್ಕಿ ಬಿದ್ದ ಮಹಾಗಜದಂತೆ ಆತಂಕ ಯುಕ್ತನಾಗಿ ತಪಿಸತೊಡಗಿದನು.—'ಮಹಾಮುನೇ, ಕ್ಷಮಿಸು. ಶ್ರೀ ರಾಮನು ನನ್ನ ಬಹಿಃಪ್ರಾಣ ಸ್ವರೂಪನು. ಅವನನ್ನು ಕಳುಹಿಸಿಕೊಟ್ಟು ನಾನು ಬದುಕಲೆಂತು! ಅಲ್ಲದೆ, ಇನ್ನೂ ಹದಿನಾರು ವರ್ಷಗಳೂ ತುಂಬದ ಶ್ರೀರಾಮನು-ಸುಕುಮಾರಾಂಗನಾದ ನನ್ನೀ ಮುದ್ದುಕುವರನು, ಪ್ರಚಂಡ ರಾಕ್ಷಸರನ್ನು ಎದುರಿಸಿ ಬದುಕಬಲ್ಲನೆ? ಮುನೀಶ್ವರಾ, ರಾಮನನ್ನು ಮಾತ್ರ ಅಪೇಕ್ಷಿಸದಿರು. ಇಗೋ, ನಾನು ನನ್ನ ಅನೇಕ ಅಕ್ಷೋಹಿಣೀ ಮೂಲ ಬಲದೊಂದಿಗೆ ಬಂದು ಆ ದೈತ್ಯರನ್ನು ನಿರ್ಮೂಲಗೊಳಿಸಿ ನಿನ್ನ ಯಾಗ ಸಂರಕ್ಷಣೆಮಾಡಿ ಬರುವೆನು. ನಡ ಇಷ್ಟುಮಾತ್ರ ಕರುಣೆಯಿಡು.' ಎಂದು ಅತಿದೀನನಾಗಿ ಪ್ರಾರ್ಥಿಸಿದನು. ಶೀಘ್ರಕೋಪಿಯಾದ ವಿಶ್ವಾಮಿತ್ರರು ದಶರಥನ ಆ ಮಾತುಗಳನ್ನು ಕೇಳಿ ಕೋಪೋದ್ದೀಪಿತರಾಗಿ—'ಛೀ ಛೀ, ಸೂರ್ಯವಂಶೋದ್ಭವನಾದ ನೀನು, ವಚನಬದ್ಧನಾಗಿ ಆಡಿದ ಮಾತಿಗೆ ತಪ್ಪಿ, ಹೀಗೆ ಹೇಡಿಯಂತೆ ಆಚರಿಸಬಹುದೆ?' ಎಂದು ಧಿಕ್ಕರಿಸಿ, ಒಡನೆ ರಾಜಾಸ್ಥಾನದಿಂದ ಹೊರಟರು. ಅಷ್ಟರಲ್ಲಿ ವಸಿಷ್ಠರು, ರಾಜನನ್ನು ಸಂ ತೈಸಿ—'ರಾಜೇಂದ್ರಾ, ಶ್ರೀರಾಮನನ್ನು ಯಾರೆಂದು ತಿಳಿದೆ?-ಇವನು ನನ್ನ ಮಗನು, ಬಾಲಕನು, ದುರ್ಬಲನು-ಎಂಬೀ ಭಾವನೆಗಳನ್ನುಬಿಡು. ಸಾಕ್ಷಾ ನ್ಮಹಾ ವಿಷ್ಣುವೇ ದುಷ್ಟರಾಕ್ಷಸರ ನಿರ್ಮೂಲನಕ್ಕಾಗಿ, ಮಾನವರೂಪ ದಿಂದ ಹುಟ್ಟಿ ಬಂದಿರುವನಲ್ಲದೆ, ಈತನು ದುರ್ಬಲನಾದ ಮನುಷ್ಯಮಾತ್ರ ನೆಂದು ತಿಳಿಯಬೇಡ. ಅಲ್ಲದೆ, ವಿಶ್ವಾಮಿತ್ರರೇನು ಸಾಮಾನ್ಯರಲ್ಲ. ಅವರು ಮಹಾತಪೋಧನರು. ಬ್ರಹ್ಮಸೃಷ್ಟಿಗೆ ಪ್ರತಿಸೃಷ್ಟಿಯನ್ನು ನಿರ್ಮಿ ಸಿದ ಮಹಾಮಹಿಮರು. ಅವರ ರಕ್ಷಣೆಯಲ್ಲಿರುವವರೆಗೆ, ಶ್ರೀರಾಮನಿಗೆ ಯಾವ ಅಪದವೂ ಉಂಟಾಗದು ಚಿಂತಿಸಬೇಡ, ಕಳುಹಿಸು. ಇದರಿಂದ ನಿನ್ನ ಮಕ್ಕಳಿಗೆ ಸಕಲವಿಧ ಶ್ರೇಯಸ್ಸೂ ಉಂಟಾಗುವುದಲ್ಲದೆ, ಅವರ ಕೀರ್ತಿಯೂ ಲೋಕದಲ್ಲಿ ಬೆಳೆಯುವುದು' ಎಂದು ಸಲಹೆಕೊಟ್ಟರು.

ತನ್ನ ಆಪ್ತರೂ ಶ್ರೇಯಶ್ಚಿಂತಕರೂ ಕುಲಗುರುಗಳೂ ಆದ ವಸಿಷ್ಠರ ಮಾತಿನಲ್ಲಿ ವಿಶ್ವಾಸವಿಟ್ಟು, ದಶರಥನು ವಿಶ್ವಾಮಿತ್ರರನ್ನು ಪುನಃ ಬರಮಾಡಿಕೊಂಡು, ಉಚಿತವಾಕ್ಯಗಳಿಂದ ಆದರಿಸಿ, ಶ್ರೀರಾಮನನ್ನು ಅವರೊಂದಿಗೆ ಕಳುಹಲು ಸಮ್ಮತಿಸಿದನು. ರಾಮನನ್ನು ಕ್ಷಣಮಾತ್ರವೂ ಬಿಡದೆ ನೆಳಲೋ ಎಂಬಂತೆ ಅನುವರ್ತಿಸಿಕೊಂಡಿರುತ್ತಿದ್ದ ಲಕ್ಷ್ಮಣನೂ ಧನುರ್ಬಾಣಗಳನ್ನು ಧರಿಸಿ ಅಣ್ಣನೊಂದಿಗೆ ಹೊರಡಲು ಸಿದ್ಧನಾದನು. ರಾಮಲಕ್ಷ್ಮಣರಿಬ್ಬರೂ ಮಾತಾಪಿತೃಗಳಿಗೂ ಗುರುಹಿರಿಯರಿಗೂ ನಮಸ್ಕರಿಸಿ ದೇವಕುಮಾರರಂತೆ ವಿಶ್ವಾಮಿತ್ರರ ಹಿಂದೆ ಕಾಲ್ನಡೆಯಿಂದ ಹೊರಟರು. ಅವರಿಗೆ ಅಪಾಯವುಂಟಾಗುವುದೆಂಬ ಅಧೈರ್ಯವಿಲ್ಲದಿದ್ದರೂ, ಬಿಸಿಲಿನಲ್ಲಿ ಬರಿಗಾಲಲ್ಲಿ ಕಾಲ್ನಡೆಯಿಂದ ಪ್ರಯಾಣಮಾಡುತ್ತಿದ್ದ ತನ್ನ ಸುಕುಮಾರರನ್ನು ಕಂಡು ದಶರಥನು ಮನಸ್ಸಿನಲ್ಲೇ ಮರುಗುತ್ತಿದ್ದನು.

ವಿಶ್ವಾಮಿತ್ರರು ದಶರಥರಾಜನಿಗೆ ಧೈರ್ಯಹೇಳಿ, ರಾಮಲಕ್ಷ್ಮಣರೊಂದಿಗೆ ರಾಜಧಾನಿಯನ್ನು ಬಿಟ್ಟು ಮುಂದೆ ಪ್ರಯಾಣಮಾಡಿದರು. ವಿನಯ ವಿಧೇಯತೆಗಳಿಂದ ಅಶ್ವಿನೀದೇವತೆಗಳಂತೆ ಶೋಭಿಸುತ್ತಾ, ತಮ್ಮ ಪಾದಚಿಹ್ನೆಯನ್ನು ಅನುಸರಿಸಿ ಬರುತ್ತಿರುವ ಆ ರಾಜಪುತ್ರರಿಗೆ ಮಾರ್ಗಾಯಾಸವುಂಟಾಗಬಾರದೆಂದು, ಮುನೀಶ್ವರರು, ಅವರಿಗೆ ಬಲೆ-ಅತಿಬಲೆ ಎಂಬೆರಡು ಅಪೂರ್ವ ವಿದ್ಯೆಗಳನ್ನು ಉಪದೇಶಿಸಿದರು. ಅವುಗಳ ಪ್ರಭಾವದಿಂದ ಅವರಿಗೆ ಹಸಿವು ಬಾಯಾರಿಕೆ ನಿದ್ರೆ ಬಳಲಿಕೆ ಮುಂತಾದ ಯಾವ ವಿಕಾರವೂ ಉಂಟಾಗದೆ ಆ ಬಾಲಕರು ಪರಮೋತ್ಸಾಹಯುಕ್ತರಾಗಿ ಪ್ರಯಾಣಮಾಡುತ್ತಿದ್ದರು. ಅವರು ಹೀಗೆ ಅಂಗದೇಶವನ್ನೂ ಮಲದ-ಕರೂಶದೇಶಗಳಿದ್ದ ಪ್ರಾಂತ್ಯವನ್ನೂ ದಾಟಿ ತಾಟಕಾವನ ಪ್ರವೇಶಮಾಡಿದರು. ಒಡನೆ, ಅವರ ಮೇಲೆ, ಕಲ್ಲುಮಣ್ಣುಗಳು ಮಳೆಯಂತೆ ಸುರಿಯಲಾರಂಭವಾದುವು. ವಿಶ್ವಾಮಿತ್ರರು—'ರಾಮಾ, ಆಗೋ ಘೋರರೂಪದಿಂದ ಕಲ್ಲುಮಣ್ಣುಗಳನ್ನು ಬೀರುತ್ತಾ ಬರುತ್ತಿರುವ ಆ ತಾಟಕಿಯನ್ನು ನೋಡು. ಅವಳಮೇಲೆ ಒಡನೆ ಬಾಣಪ್ರಯೋಗಮಾಡಿ ಸಂಹಾರಮಾಡು. ಅವಳನ್ನು ಸಂಹರಿಸುವುದರಿಂದ ಸಕಲ ಲೋಕಗಳಿಗೂ ಕ್ಷೇಮವುಂಟಾಗುವುದು. ಸಾವಕಾಶಮಾಡದೆ ಬಾಣವನ್ನು ಬಿಡು' ಎಂದು ಹುರುಪುಗೊಳಿಸಿದರು.

ರಾಮನು ಅವರಿಗೆ ಧನುರ್ವಿದ್ಯಾಭ್ಯಾಸಕ್ಕಾಗಿ ಆಗಾಗ್ಗೆ ಬಾಣಪ್ರಯೋಗ ಮಾಡಿದ್ದನಲ್ಲದೆ, ಯಾರನ್ನೂ ಸಂಹರಿಸುವ ಉದ್ದೇಶದಿಂದ ಬಾಣವನ್ನು ಪ್ರಯೋಗಿಸಿರಲಿಲ್ಲ. ಈಗ, ತನ್ನ ಪ್ರಥಮ ಬಾಣವನ್ನು ಸ್ತ್ರೀಮಾತ್ರಳ ಮೇಲೆ ಬಿಡಬೇಕಲ್ಲ-ಎಂದು ಶಂಕಿಸುತ್ತಿದ್ದನು. ವಿಶ್ವಾಮಿತ್ರರು ಆತನ ಭಾವವನ್ನು ತಿಳಿದು—'ರಾಮಾ ಇವಳು ಸ್ತ್ರೀಯೆಂದು ಶಂಕಿಸಬೇಡ. ಮಹಾ ಘಾತಕಿಯಿವಳು. ಇವಳ ಮರಣದಿಂದ ಲೋಕಶಾಂತಿಯುಂಟಾಗುವುದು. ದೇವತೆಗಳು ತೃಪ್ತರಾಗುವರು. ಇದರಿಂದ ನಿನಗೆ ಎಳ್ಳಷ್ಟೂ ದೋಷ ವುಂಟಾಗದು' ಎಂದು ಪ್ರೋತ್ಸಾಹ ವಚನಗಳನ್ನು ನುಡಿದರು. ಅಷ್ಟರಲ್ಲಿ ಕಲ್ಲುಮಣ್ಣುಗಳು ಎಲುಬು ಮಜ್ಜೆ ಮಾಂಸಾದಿ ಅಸಹ್ಯಪದಾರ್ಥಗಳು ಮುಂ ತಾದುವುಗಳ ಒಂದು ವೃಷ್ಟಿಯು ಪುನಃ ಸುರಿಯಿತು. ರಕ್ಕಸಿಯು ತನ್ನ ಭಯಂಕರ ವದನವನ್ನು ತೆರೆದು ಅರಚಿಸುತ್ತಾ ಗುಡುಗಿನಂತೆ ಪ್ರಳಯ ಗರ್ಜನೆ ಮಾಡುತ್ತಾ ಅವರ ಮೇಲೇರಿ ಬರುತ್ತಿದ್ದಳು. ಅದನ್ನು ಕಂಡು ರಾಮನು, ಆ ದುಷ್ಟಳ ವಿಷಯದಲ್ಲಿ ಕರುಣೆಯನ್ನು ತೋರಿಸುವುದು ನಿರ ರ್ಥಕವೆಂದು ಭಾವಿಸಿ, ಧನುಸ್ಸಿನಲ್ಲಿ ಕ್ರೂರವಾದ ಬಾಣವನ್ನು ಸಂಧಿಸಿ ಪ್ರಯೋಗಿಸಿದನು. ಆ ಬಾಣವು ಕಾಮರೂಪಿಣಿಯಾದ ಅವಳ ಎದೆಯಲ್ಲಿ ನಾಟಲು ಅವಳು ಅದರ ವೇದನೆಯನ್ನು ಸಹಿಸಲಾರದೆ ಹೆಮ್ಮರದಂತೆ ಭೂಮಿಯಲ್ಲಿ ಬಿದ್ದು ಗತಾಸುವಾದಳು.

ಲೋಕಕಂಟಕಳಾದ ತಾಟಕಿಯನ್ನು ಸಂಹರಿಸಿ ಆ ವನವನ್ನು ನಿಷ್ಕಂ ಟಕವನ್ನಾಗಿಸಿದ ಶ್ರೀರಾಮನನ್ನು ದೇವತೆಗಳು ಬಹು ವಿಧಗಳಿಂದ ಹೊಗಳಿ ದರು. ವಿಶ್ವಾಮಿತ್ರರು, ಆ ಅಣ್ಣತಮ್ಮಂದಿರ ಶೌರ್ಯಧೈರ್ಯಗಳನ್ನು ಬಹು ಬಗೆಯಿಂದ ಪ್ರಶಂಸೆಮಾಡಿ—'ಶ್ರೀರಾಮಾ, ಸಜ್ಜನನಾದ ನಿನ್ನಲ್ಲಿ ರುವ ವಿದ್ಯೆಯೂ ನಿಧಿಯೂ ಸಾಧುರಕ್ಷಣೆ ದುಷ್ಟದಮನ ಕಾರ್ಯಗಳಿಗಾಗಿ ವೆಚ್ಚವಾಗತಕ್ಕುವಾದುದರಿಂದ, ಇಗೋ, ಮಹಾ ತೇಜಸ್ವಿಗಳಾದ ಈ ಅಸ್ತ್ರ ಗಳನ್ನು ನಿನಗೆ ದಾನವಾಗಿ ಕೊಡುತ್ತಿದ್ದೇವೆ, ಮಂತ್ರಪೂರ್ವಕ ಸ್ವೀಕ ರಿಸು' ಎಂದರು. ರಾಮಲಕ್ಷ್ಮಣರು ಶುಚಿಭೂತರಾಗಿ ಬಂದು ವಿನೀತರಾಗಿ ನಿಂತುಕೊಳ್ಳಲು, ವಿಶ್ವಾಮಿತ್ರರು ವಿಧ್ಯುಕ್ತವಾಗಿ ಐಂದ್ರಾಸ್ತ್ರ ವಜ್ರಾಸ್ತ್ರ, ಶೂಲಾಸ್ತ್ರ, ಬ್ರಹ್ಮಾಸ್ತ್ರ, ನಾರಾಯಣಾಸ್ತ್ರಾದಿ ಮಹಾಸ್ತ್ರಗಳನ್ನೂ, ವಿಷ್ಣು

ಶಕ್ತಿ, ರುದ್ರಶಕ್ತಿಗಳನ್ನೂ, ಸಮ್ಮೋಹನಾಸ್ತ್ರವೇ ಮುಂತಾದ ಸಕಲ ವಿಧ ದೇವತಾ-ಮತ್ತು ಮಾನವಾಸ್ತ್ರಗಳನ್ನೂ ಪ್ರಯೋಗೋಪ ಸಂಹಾರ ಪೂರ್ವಕವಾಗಿ ಉಪದೇಶ ಮಾಡಿದರು. ಹೀಗೆ ಧನುರ್ವಿದ್ಯಾತ್ಮಕವಾದ ಸಂಪೂರ್ಣ ಜ್ಞಾನವನ್ನೂ ಸಂಪಾದಿಸಿದ ಶ್ರೀರಾಮನು ಮಹಾತೇಜಸ್ವಿಯಾಗಿ ಪ್ರಕಾಶಿಸಿದನು.

ಇದಾದ ತರುವಾಯ ವಿಶ್ವಾಮಿತ್ರರು, ಸಂಕಲ್ಪಪೂರ್ವಕವಾಗಿ ಯಜ್ಞದೀಕ್ಷಿತರಾಗಿ ಕುಳಿತರು. ರಾಮಲಕ್ಷ್ಮಣರಿಬ್ಬರೂ ಧನುರ್ಧಾರಿಗಳಾಗಿ ಯಜ್ಞರಕ್ಷಣೆಗಾಗಿ ಅತಿಶಯ ಜಾಗರೂಕರಾಗಿದ್ದುಕೊಂಡು ನೋಡಿಕೊಳ್ಳುತ್ತಿದ್ದರು. ತಾಟಕಿಯ ಸಂಹಾರಾನಂತರ ಅವಳ ಮಕ್ಕಳಾದ ಮಾರೀಚ ಸುಬಾಹುಗಳಿಬ್ಬರೂ ಕೋಪೋದ್ದೀಪಿತರಾಗಿ ಮಹರ್ಷಿಯ ಯಜ್ಞಕಾರ್ಯವನ್ನು ಧ್ವಂಸಗೊಳಿಸಬೇಕೆಂದು ಹಟತೊಟ್ಟು, ಬಾಧಿಸತೊಡಗಿದರು. ಧ್ಯಾನಮಗ್ನರಾಗಿ ಕುಳಿತಿದ್ದ ವಿಶ್ವಾಮಿತ್ರರ ಮೇಲೂ, ಶುಭಕರಗಳಾದ ಹೋಮದ್ರವ್ಯಗಳಿಂದ ಪ್ರಜ್ವಲಿಸುತ್ತಿದ್ದ ಅಗ್ನಿಕುಂಡದ ಮೇಲೂ ಆ ದುರುಳರು ಮಲಮೂತ್ರಗಳು, ರಕ್ತಮಾಂಸವೇ ಮುಂತಾದ ಅಸಹ್ಯ ಪದಾರ್ಥಗಳು ಇವುಗಳನ್ನೆಲ್ಲಾ ಮೇಲಿನಿಂದ ಅದೃಶ್ಯರಾಗಿ ಸುರಿಸುತ್ತಿದ್ದರು. ಶ್ರೀರಾಮಲಕ್ಷ್ಮಣರು ಈ ಸುಳಿವನ್ನು ತಿಳಿದು, ಆ ಕಲ್ಮಷ ಪದಾರ್ಥಗಳನ್ನು ವಾಯುವ್ಯಾಸ್ತ್ರ ಪ್ರಯೋಗದಿಂದ ಹಾರಿಸಿ, ಯಜ್ಞವೇದಿಕೆಯು ಅಪವಿತ್ರವಾಗದಂತೆ ಕಾಪಾಡಿದರಲ್ಲದೆ, ಅದೃಶ್ಯರಾಗಿ ಹಾವಳಿ ಮಾಡುತ್ತಿದ್ದ ಆ ದುರುಳ ದೈತ್ಯರ ಮೇಲೂ ಮಹಾಸ್ತ್ರಗಳನ್ನು ಪ್ರಯೋಗಿಸಿದರು. ಕಾಲಯಮನ ಕಿಡಿಗಣ್ಣರಿಯೋ ಎಂಬಂತೆ ಜಾಜ್ವಲ್ಯಮಾನವಾಗಿ ನುಗ್ಗಿ ಬಂದ ಆ ಬಾಣಗಳು ಸುಬಾಹು ರಾಕ್ಷಸನನ್ನು ಸಜೀವ ದಹಿಸಿಬಿಟ್ಟುವು. ಮತ್ತೊಂದು ಬಾಣವು ಪ್ರಳಯ ಮಾರುತನಂತೆ ಭಯಂಕರವಾದ ಬಿರುಗಾಳಿಯನ್ನೆಬ್ಬಿಸಿ ಮಾರೀಚನನ್ನು ಮುನ್ನೂರು ಗಾವುದಗಳಾಚೆ ಬೀಳಿಸಿತು. ಹೀಗೆ ಆ ದುರುಳ ರಾಕ್ಷಸರ ಬಾಧೆಯು ನೀಗಲಾಗಿ ಮುಂದೆ ಯಾಗವು ನಿಷ್ಕಂಟಕವಾಗಿ ಪೂರ್ತಿಗೊಂಡಿತು. ಪೂರ್ಣಾಹುತಿಯನ್ನರ್ಪಿಸಿ ಸಂತುಷ್ಟರಾದ ವಿಶ್ವಾಮಿತ್ರರು, ಶ್ರೀರಾಮಲಕ್ಷ್ಮಣರನ್ನು ಮುಕ್ತಕಂಠದಿಂದ ಹೊಗಳಿದರು. ಜನಕಂಟಕರಾಗಿದ್ದ ಆ ದುಷ್ಟರನ್ನು ಅವಲೀಲೆಯಿಂದ

ಸಂಹಾರವಮಾಡಿದ ಮಹಾತೇಜಸ್ವಿಗಳಾದ ಆ ರಾಜಕುಮಾರರ ಮೇಲೆ ದೇವತೆಗಳು ಪುಷ್ಪವೃಷ್ಟಿಯನ್ನು ಸುರಿಸಿ, ದೇವದುಂದುಭಿಯನ್ನು ಮೊಳಗಿಸಿ ತಮಗಾದ ಪರಮಾನಂದವನ್ನು ವ್ಯಕ್ತಪಡಿಸಿದರು.

ಆ ವೇಳೆಗೆ ಮಿಥಿಲಾನಗರಿಯಲ್ಲಿ ಜನಕಮಹಾರಾಜನ ಮಗಳಾದ ಜಾನಕೀದೇವಿಗೆ ಸ್ವಯಂವರ-ವಿವಾಹವು ನಡೆಯಲು ಏರ್ಪಾಡಾಗಿದೆಯೆಂದೂ, ಆ ಶುಭಕಾಲಕ್ಕೆ ದಯಮಾಡಿಸಬೇಕೆಂದೂ, ವಿಶ್ವಾಮಿತ್ರ ಮಹರ್ಷಿಗಳಿಗೆ ಮಿಥಿಲಾಧಿಪನಿಂದ ಆಹ್ವಾನ ಪತ್ರಿಕೆಯು ಬಂದು ತಲ್ಪಿತು. ವಿಶ್ವಾಮಿತ್ರರು, ಆ ಸಂದರ್ಭವನ್ನು ಯೋಚಿಸಿ, ಬಹು ಸಂತೋಷಪಟ್ಟು, ರಾಮಲಕ್ಷ್ಮಣರನ್ನೂ ತಮ್ಮೊಂದಿಗೇ ಕರೆದೊಯ್ಯಲು ನಿರ್ಧರಿಸಿದರು. ಮುಂದೆ ಒಂದುದಿನ ಶುಭಮುಹೂರ್ತದಲ್ಲಿ ವಿಶ್ವಾಮಿತ್ರರು ಮಹರ್ಷಿಪರಿವಾರದೊಂದಿಗೂ ರಾಮಲಕ್ಷ್ಮಣರೊಂದಿಗೂ ಮಿಥಿಲಾಪುರಾಭಿಮುಖವಾಗಿ ಪ್ರಯಾಣವಾಗಿ ಹೊರಟರು. ಮಾರ್ಗಮಧ್ಯದಲ್ಲಿ ದೊರೆತ ಕೌಶಿಕೀನದಿಯ ವೃತ್ತಾಂತವನ್ನೂ, ಗಂಗಾಪಾರ್ವತಿಯರ ಜನ್ಮವೃತ್ತಾಂತವನ್ನೂ ಸಗರವಂಶಜನಾದ ಭಗೀರಥರಾಜರ್ಷಿಯು ದೇವಗಂಗೆಯನ್ನು ಒಲಿಸಿಕೊಂಡು ಭೂಲೋಕಕ್ಕೆ ತಂದ ವೃತ್ತಾಂತವನ್ನೂ, ವಿಸ್ತಾರವಾಗಿ ಹೇಳಿ, ವಿಶ್ವಾಮಿತ್ರರು ಶ್ರೀರಾಮಲಕ್ಷ್ಮಣರ ಮನರಂಜನೆ ಮಾಡಿದರು. ಮುಂದೆ ಪ್ರಯಾಣ ಮಾಡುತ್ತಿರಲು, ಅವರಿಗೆ ಗೌತಮಾಶ್ರಮವು ಸಿಕ್ಕಿತು. ವಿಶ್ವಾಮಿತ್ರರು, ನಿರ್ಜನವಾಗಿದ್ದ ಆ ಆಶ್ರಮದ ಪೂರ್ವ ವೃತ್ತಾಂತವನ್ನು ತಿಳಿಸಿ, ಶ್ರೀರಾಮಾ, ಇಲ್ಲಿ ಗೌತಮಪತ್ನಿಯಾದ ಅಹಲ್ಯಾದೇವಿಯು, ಪಂಚೇಂದ್ರಿಯ ಶಕ್ತಿವಿಹೀನಳಾಗಿ-ಶಿಲಾಸ್ವರೂಪಿಯಾಗಿ ಗುಪ್ತವಾಗಿ ನಿನ್ನ ಆಗಮನಕ್ಕಾಗಿ ತಪಸ್ಸುಮಾಡುತ್ತಾ ಎದುರುನೋಡುತ್ತಿದ್ದಾಳೆ ಪರಬ್ರಹ್ಮಸ್ವರೂಪನಾದ ನೀನು, ಸರ್ವಚೈತನ್ಯಯುಕ್ತವಾದ, ನಿನ್ನೀ ದಿವ್ಯಪಾದದ ಸೋಂಕಿನಿಂದ ಆಕೆಯಲ್ಲಿ ಪುನಃ ಪಂಚೇಂದ್ರಿಯ ಶಕ್ತಿಸಂಚಾರವಾಗುವಂತೆ ಅನುಗ್ರಹಮಾಡು, ಎಂದು ಪ್ರಾರ್ಥಿಸಿದರು.

ಅಪೂರ್ವವಾದ ಆ ವೃತ್ತಾಂತವನ್ನು ಕೇಳಿ ರಾಜಪುತ್ರರಿಬ್ಬರೂ ಪರಮಾಶ್ಚರ್ಯಪಟ್ಟರು. ಶ್ರೀರಾಮನು ವಿಶ್ವಾಮಿತ್ರರ ಇಷ್ಟದಂತೆಯೇ ಅಲ್ಲಿ ಬಿದ್ದಿದ್ದ ಶಿಲಾಸ್ವರೂಪಿ ಅಹಲ್ಯೆಯ ದೇಹವನ್ನು ತನ್ನ ಪಾದಾಂಗುಟದಿಂದ

ನೋಕಿದನು. ಬಹುಕಾಲದಿಂದಲೂ, ನಿಶ್ಚೈತನ್ಯಗೊಂಡು ಬಿದ್ದಿದ್ದ ಆ ದೇಹವು ಸರ್ವಚೈತನ್ಯಯುಕ್ತವಾದ ಶ್ರೀರಾಮಚಂದ್ರನ ಪಾದದ ಸೋಂಕಿನಿಂದ ಚೈತನ್ಯಹೊಂದಿ ಒಡನೆ ಚಲಿಸತೊಡಗಿತು. ಅಹಲ್ಯೆಯು ಸರ್ವಲಕ್ಷಣ ಸಂಪನ್ನಳಾದ ಸುಮಂಗಲೆಯಾಗಿ ಎದ್ದು, ಅತಿಶಯ ಭಕ್ತಿಭಾವದಿಂದ ಶ್ರೀರಾಮಚಂದ್ರನ ಪಾದಪದ್ಮಗಳನ್ನು ಆರಾಧಿಸಿ, ಆ ಪುರಾಣಪುರುಷನನ್ನು ಬಹು ವಿಧಗಳಿಂದ ಹೊಗಳಿದಳು. ಅಷ್ಟರಲ್ಲಿ, ತಮ್ಮ ಆಶ್ರಮಕ್ಕೆ ರಾಮಾಗಮನವಾದ ವೃತ್ತಾಂತವನ್ನು ಯೋಗದೃಷ್ಟಿಯಿಂದ ತಿಳಿದ ಗೌತಮ ಮಹರ್ಷಿಗಳು ಒಡನೆ ಅಲ್ಲಿಗೆ ಬಂದು, ವಿಶ್ವಾಮಿತ್ರರನ್ನೂ, ರಾಮಲಕ್ಷ್ಮಣರನ್ನೂ ಬಹುಬಗೆಯಿಂದ ಆದರಿಸಿ ಉಪಚರಿಸಿ ಮುಂದಕ್ಕೆ ಬೀಳ್ಕೊಟ್ಟರು.

ಅಪೂರ್ವ ತೇಜಸ್ಸಂಪನ್ನರಾದ ರಾಜಪುತ್ರರಿಬ್ಬರೊಂದಿಗೆ ಮಹಾತಪೋಧನರಾದ ವಿಶ್ವಾಮಿತ್ರರು ಬರುತ್ತಿದ್ದಾರೆಂಬ ವರ್ತಮಾನವು ಜನಕ ಮಹಾರಾಜನಿಗೆ ತಿಳಿಯಿತು. ಒಡನೆ ಆತನು, ಪರಿವಾರಯುಕ್ತನಾಗಿ ಬಂದು ಅವರನ್ನು ಎದುರುಗೊಂಡು, ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿ, ಕರೆದೊಯ್ದು ಒಂದು ದಿವ್ಯವಾದ ಆಶ್ರಮಸ್ಥಳದಲ್ಲಿ ಬಿಡಾರಮಾಡಿಸಿದನು. ಮಾರನೆಯ ಪ್ರಾತಃಕಾಲ ಜನಕರಾಜನು, ವಿಶ್ವಾಮಿತ್ರರಲ್ಲಿಗೆ ಬಂದನು. ವಿಶ್ವಾಮಿತ್ರರು ಆತನಿಗೆ ರಾಮಲಕ್ಷ್ಮಣರು ಸೂರ್ಯವಂಶ ಶ್ರೇಷ್ಠನಾದ ದಶರಥನ ಮಕ್ಕಳೆಂದು ಪರಿಚಯ ಮಾಡಿಕೊಟ್ಟರು. ಮತ್ತು-ಎಲೈ ರಾಜನೇ ನಿನ್ನ ಬಳಿಯಲ್ಲಿರುವ ಶೈವಧನುಸ್ಸನ್ನು ನೋಡಬೇಕೆಂದು ಶ್ರೀರಾಮನು ಅಪೇಕ್ಷಿಸುತ್ತಿರುವನು' ಎಂದು ತಿಳಿಸಿದರು. ಒಡನೆ ಜನಕನು ಪರಮಾದರದಿಂದ ಅದನ್ನು ನೂರಾರುಮಂದಿ ಸೇವಕರಿಂದ ತರಿಸಿ ಅವರೆದುರಿಗಿರಿಸಿ—'ಮುನೀಶ್ವರಾ, ಇದನ್ನು ಎತ್ತಿ ಬಾಗಿಸಿ ಇದರಲ್ಲಿ ಶರಸಂಧಾನ ಮಾಡುವ ವೀರನಿಗೆ, ಯಜ್ಞಭೂಮಿಯಲ್ಲಿ ದೊರೆತು ನನ್ನಿಂದ ಪಾಲಿತಳಾಗಿರುವ ಸೀತೆಯೆಂಬ ಕನ್ಯಾಮಣಿಯನ್ನು ಕೊಟ್ಟು ಲಗ್ನಮಾಡಬೇಕೆಂಬುದು ನನ್ನ ಸಂಕಲ್ಪವಾಗಿದೆ. ಸಾಧ್ಯವಿರುವುದಾದರೆ ಶ್ರೀರಾಮನು ಪ್ರಯತ್ನಿಸಲಿ' ಎಂದನು.

ಧನುರ್ವಿದರಲ್ಲಿ ಸರ್ವಶ್ರೇಷ್ಠನಾದ ಶ್ರೀರಾಮಚಂದ್ರನು ಸಾವಕಾಶಮಾಡದೆ, ವಿಶ್ವಾಮಿತ್ರರ ಕಣ್ಣುಸನ್ನೆಯನ್ನೇ ಆಜ್ಞೆಯೆ [illegible]ಪಸಿ,

ಧನುಸ್ಸಿಗೆ ಎಡಗೈಯನ್ನು ಸಿಂಡಿ ಕ್ಷಣಮಾತ್ರದಲ್ಲಿ ಮೇಲಕ್ಕೆತ್ತಿ ಬಿಟ್ಟನು. ತರುವಾಯ ಅದನ್ನು ಬಾಗಿಸಿ ನಾರಿಯನ್ನು ಒಂಧಿಸಬೇಕೆಂದು ಯತ್ನಿಸಲು, ಪುರಾತನಕಾಲದ ದೃಢವಾದ ಆ ಧನಸ್ಸು ಮಧ್ಯಭಾಗಕ್ಕೆ ಸಿಟಿಲುಸಿಟಿಲೆಂದು ಮುರಿದು ತುಂಡಾಗಿ ಹೋಯಿತು.—ಅಕ್ಕಟಾ, ಧನುಸ್ಸು ಮುರಿದುಹೋಯಿತಲ್ಲಾ-ಎಂದು, ರಾಮನು ಆಶ್ಚರ್ಯದಿಂದ ನೋಡುತ್ತಿರಲು, ಆತನ ಅಗಾಧಸತ್ವಕ್ಕಾಗಿ ಪರಮಾಶ್ಚರ್ಯಗೊಂಡ ಜನಕರಾಜನೇ ಮುಂತಾದವರೆಲ್ಲರೂ ಪರಮಸಂತೋಷದಿಂದ ಆತನನ್ನು ಹೊಗಳಿದರು. ವೀರಶುಲ್ಕೆಯಾದ ಸೀತಾದೇವಿಯು ಮಂದಗಮನದಿಂದ ನಡೆದುಬಂದು ಕುಡಿನೋಟದಿಂದ ಆ ಮೋಹನಮೂರ್ತಿಯ ದಿವ್ಯಸುಂದರ ವಿಗ್ರಹವನ್ನು ದರ್ಶಿಸಿ ದಿವ್ಯಪರಿಮಳ ಪುಷ್ಪಹಾರವನ್ನು ಆತನ ಭದ್ರಕಂಠದಲ್ಲಿ ಸಮರ್ಪಿಸಿದಳು. ಸಮಸ್ತರೂ ಜಯಜಯವೆಂದು ಕರತಾಡನೆ ಮಾಡಿದರು.

ತರುವಾಯ ಜನಕರಾಜನು. ದಶರಥರಾಜನ ನಾಲ್ಕುಮಂದಿ ಮಕ್ಕಳಿಗೂ ತನ್ನ ಇಬ್ಬರು ಮಕ್ಕಳನ್ನೂ, ತನ್ನ ತಮ್ಮ ಕುಶಧ್ವಜನ ಇಬ್ಬರು ಕನ್ಯೆಯರನ್ನೂ ಕೊಟ್ಟು ಲಗ್ನಮಾಡಲು ನಿಶ್ಚಯಿಸಿದನು. ಒಡನೆ, ಶ್ರೀರಾಮನ ಧನುರ್ಭಂಜನ ವೃತ್ತಾಂತವನ್ನು ಸೂಚಿಸಿ, ಪರಿವಾರಸಮೇತನಾಗಿ ಬಂದು ಕನ್ಯಾಸ್ವೀಕಾರ ಮಾಡಬೇಕೆಂದು ದಶರಥ ಸಾರ್ವಭೌಮನಿಗೆ ಲಗ್ನಪತ್ರಿಕೆಯನ್ನು ಕಳುಹಿಸಿದನು ದಶರಥನು ಪರಮೋತ್ಸಾಹಕರವಾದ ಆ ವಾರ್ತೆಯನ್ನು ಕೇಳಿ, ಸಕಲವಿಧ ವಿವಾಹಸಾಮಗ್ರಿಗಳನ್ನೂ ಸಿದ್ಧಗೊಳಿಸಿಕೊಂಡು, ವಿಶೇಷ ಪರಿವಾರಯುಕ್ತನಾಗಿ ಪ್ರಯಾಣಮಾಡಿದನು. ಜನಕರಾಜನು, ದಶರಥನನ್ನು ಎದುರುಗೊಂಡು, ರಾಜಯೋಗ್ಯವಾದ ಮನ್ನಣೆಯನ್ನಿತ್ತು ಸತ್ಕರಿಸಿ, ತನ್ನ ಮಕ್ಕಳಾದ ಸೀತಾಊರ್ಮಿಳೆಯರನ್ನು ರಾಮಲಕ್ಷ್ಮಣರಿಗೂ, ತನ್ನ ತಮ್ಮನ ಮಕ್ಕಳಾದ ಮಾಂಡವಿ ಶ್ರುತಕೀರ್ತಿಯರನ್ನು ಭರತಶತ್ರುಘ್ನರಿಗೂ ಸ್ವೀಕರಿಸಿ ಕೃತಾರ್ಥನನ್ನಾಗಿ ಮಾಡಬೇಕೆಂದು ಪ್ರಾರ್ಥಿಸಿದನು. ದಶರಥನೂ ಆ ಸಲಹೆಗೆ ಪರಮಸಂತೋಷದಿಂದ ಒಪ್ಪಿದನು.

ಲಗ್ನಮಂಟಪವು ದೇವೇಂದ್ರನ ಸುಧರ್ಮಸಭಾಮಂಟಪವೋ ಎಂಬಂತೆ ಸಿಂಗರಿಸಲ್ಪಟ್ಟಿತ್ತು. ಭೂಮಂಡಲದ ಸಕಲ ಭಾಗಗಳಿಂದಲೂ, ಮಹಾಮಹಿಮರಾದ ಋಷಿಮುನಿಗಳೂ, ಭೂಸುರೋತ್ತಮರೂ, ದೇಶ

ದೇಶಗಳ ರಾಜಾಧಿರಾಜರೂ ಬಂದು ನೆರೆದರು. ಜನಕಮಹಾರಾಜನೂ ಆತನ ತಮ್ಮನೂ ಪತ್ನಿಸಮೇತರಾಗಿ ಕನ್ಯಾದಾನವಮಾಡಿದರು. ಸಕಲರೂ ಜಯಜಯವೆಂದು ಹೊಗಳುತ್ತಿದ್ದ ಶುಭಮುಹೂರ್ತದಲ್ಲಿ ಕನ್ಯಾಶಿರೋಮಣಿಯರಾದ ಸೀತಾ ಊರ್ಮಿಳಾ ಮಾಂಡವಿ ಶ್ರುತಕೀರ್ತಿಯರು, ಕ್ರಮವಾಗಿ ರಾಮಲಕ್ಷ್ಮಣ ಭರತ ಶತ್ರುಘ್ನರ ಕಂಠಪ್ರದೇಶಗಳಲ್ಲಿ ಪುಷ್ಪಹಾರಗಳನ್ನು ಸಮರ್ಪಿಸಿದರು. ಆ ಸಂದರ್ಭದಲ್ಲಿ ದೇವದುಂದುಭಿಯು ಮೊಳಗಿತು, ಪುಷ್ಪವೃಷ್ಟಿಯಾಯಿತು. ಸಾಕ್ಷಾಲ್ಲಕ್ಷ್ಮೀ ಸದೃಶಳಾದ ಜಾನಕೀದೇವಿಯು, ನಾರಾಯಣನ ಲೀಲಾಮಾನುಷ ವಿಗ್ರಹಸ್ವರೂಪನಾದ ಶ್ರೀರಾಮನನ್ನು ವರಿಸಿದ ಆ ಶುಭಸಂದರ್ಭದಲ್ಲಿ ಜಗತ್ತೇ-ಆನಂದಾಮೃತಶರಧಿಯಲ್ಲಿ ಓಲಾಡಿತು. ಜನಕರಾಜೇಂದ್ರನು, ಆ ಕನ್ಯಾದಾನದೊಂದಿಗೆ, ಗೋದಾನ ಭೂದಾನ ಹಿರಣ್ಯದಾನಗಳೇ ಮುಂತಾದ ಸಮಸ್ತವಿಧ ದಾನಗಳನ್ನೂ ಭೂಸುರವರ್ಗಕ್ಕೆ ಸಮರ್ಪಿಸಿದನು. ನೆರೆದ ಸಮಸ್ತರೂ ದಕ್ಷಿಣೆ ತಾಂಬೂಲಗಳಿಂದಲೂ, ಉಡುಗೆರೆ ಉತ್ಸವಾದಿಗಳಿಂದಲೂ ತಣಿದರು. ಸಕಲವಿಧ ಭಕ್ಷ್ಯಭೋಜ್ಯಯುಕ್ತವಾದ ದಿವ್ಯ ಮೃಷ್ಟಾನ್ನಭೋಜನದಿಂದ ಬ್ರಾಹ್ಮಣಾದಿ ಸಕಲ ವರ್ಣಗಳವರೂ ಪರಮಸಂತುಷ್ಟಿಯನ್ನು ಹೊಂದಿದರು. ಜನಕರಾಜನು, ಬೀಯಗನಾದ ದಶರಥರಾಜನನ್ನು ಸಕಲವಿಧ ರಾಜೋಪಚಾರಗಳನ್ನಿತ್ತು ಗೌರವಿಸಿದನು. ಪರಸ್ಪರ ಉಡುಗೆರೆ ಉತ್ಸವಾದಿಗಳನ್ನು ನಡೆಯಿಸಿ ಕನ್ಯಾವರರ ಪಕ್ಷದವರಿಬ್ಬರೂ ಮಹತ್ಸಂತೋಷಗೊಂಡು ವಿವಾಹದ ಆ ಕೆಲವು ದಿನಗಳನ್ನು ತಮ್ಮ ಜನ್ಮದಲ್ಲೇ ಸುದಿನಗಳೆಂದು ತಿಳಿದು ಕಳೆದರು. ಹೀಗೆ ಸೀತಾಸ್ವಯಂವರ ಕಾರ್ಯವು ಅತ್ಯಂತ ವಿಜೃಂಭಣೆಯಿಂದ ನಡೆಯಿತು. ಆ ವಿವಾಹ ಮಹೋತ್ಸವದಲ್ಲಿ, ನೆರೆದ ಸಕಲರೂ ತಮ್ಮ ಇಷ್ಟಾರ್ಥಗಳನ್ನು ಪಡೆದು ಪರಮಾನಂದಗೊಂಡರು.



## ಅಧ್ಯಾಯ ೩. ‘ಚಿತ್ರಕೂಟಾಶ್ರಮ’

ಮಿಥಿಲಾರಾಜಧಾನಿಯಲ್ಲಿ ವಿವಾಹಾಂಗವಾದ ಮಹೋತ್ಸವಗಳೆಲ್ಲವೂ ಮುಗಿದುವು. ವಿಶ್ವಾಮಿತ್ರರೇ ಮುಂತಾದ ಸಕಲ ಮುನಿಗಳೂ ಆಶ್ರಮಾಭಿ

ಮುಖವಾಗಿ ಹೊರಟು ನಡೆದರು. ದಶರಥನು ಜನಕರಾಜನ ಅನುಮತಿಯನ್ನು ಪಡೆದು ಮಕ್ಕಳೊಂದಿಗೂ ಸೊಸೆಯರೊಂದಿಗೂ ಪತ್ನೀಪರಿವಾರದೊಂದಿಗೂ ಅಯೋಧ್ಯಾನಗರಿಯನ್ನು ಕುರಿತು ಪ್ರಯಾಣಮಾಡಿದನು. ಜನಕರಾಜನು ತನ್ನ ಮಕ್ಕಳಿಗೆ ವಿಶೇಷ ಬಳುವಳಿಯನ್ನೂ ದಾಸದಾಸೀ ಜನರನ್ನೂ ಕೊಟ್ಟು, ಅವರೊಂದಿಗೆ ಕೆಲವುದೂರ ಪ್ರಯಾಣಮಾಡಿ, ತನ್ನ ಮಕ್ಕಳ ವಿಯೋಗಕ್ಕಾಗಿ ಕಣ್ಣೀರಿಟ್ಟು ಹಿಂತಿರುಗಿದನು. ದಶರಥನು ಮುಂದೆ ಸ್ವಲ್ಪದೂರ ಪ್ರಯಾಣಮಾಡಿದನೆಂಬ ವೇಳೆಗೆ ಪ್ರಬಲ ಪರಾಕ್ರಮಿಯಾದ ಪರಶುರಾಮನು ರಾಮನನ್ನು ಅಡ್ಡಗಿಸಿ-'ರಾಮಾ, ಹಳೆಯ ಶಿವಧನುಸ್ಸನ್ನು ಭಂಗಿಸಿದುದು ಹೆಚ್ಚಲ್ಲ. ಈ ವೈಷ್ಣವ ಧನುಸ್ಸಿನಮೇಲೆ ನಿನ್ನ ಪರಾಕ್ರಮವನ್ನು ಪ್ರಕಟಿಸು' ಎಂದು ಕೈನಲ್ಲಿದ್ದ ಮಹಾಭಯಂಕರವಾದ ಒಂದು ಧನುಸ್ಸನ್ನು ರಾಮನ ಎದುರಿಗಿಟ್ಟನು.

ಪರಶುರಾಮನೆಂದರೆ ಸಾಮಾನ್ಯವ್ಯಕ್ತಿಯಲ್ಲ ; ಪ್ರಚಂಡಪರಾಕ್ರಮಿಯಾತನು! ತನ್ನ ತಂದೆಯನ್ನು ವಧೆಮಾಡಿದರೆಂಬ ಕಾರಣಕ್ಕಾಗಿ, ಇಪ್ಪತ್ತೊಂದಾವೃತ್ತಿ ಭೂಪ್ರದಕ್ಷಿಣೆಮಾಡಿ ಕ್ಷತ್ರಿಯ ವಂಶವನ್ನು, ಎಲ್ಲ ಸಿಕ್ಕರಲ್ಲಿ ಧ್ವಂಸಗೊಳಿಸಿ ಅವರ ರಕ್ತದ ಮಡುವಿನಲ್ಲೇ ಪಿತೃತರ್ಪಣವನ್ನೆಸೆಗಿದ ಅದ್ಭುತ ವ್ಯಕ್ತಿಯು. ಪರಶುರಾಮನೆಂದರೆ, ಕ್ಷುದ್ರಮೃಗಗಳಿಗೆ ಸಿಂಹ ಸ್ವಪ್ನವೆಂಬಂತೆ ಕ್ಷತ್ರಿಯಕುಲಕ್ಕೆ-ಮಹಾಭೀಕರನಾಗಿದ್ದನು. ಅಂತಹ ಪ್ರಬಲ ಪರಾಕ್ರಮಿಯು ಎದುರಾಗಿ ಬಂದುದನ್ನೂ, ತನ್ನ ಸುಕುಮಾರ ರಾಮಚಂದ್ರನು ಆತನ ಕೈಗೆ ಸಿಕ್ಕಿಬಿದ್ದುದನ್ನೂ ಕಂಡು ದಶರಥನು ಭಯಭ್ರಾಂತನಾಗಿ ಹೋದನು. ಪರಶುರಾಮನು, ಅಂದು ತನ್ನ ಮಕ್ಕಳನ್ನು ಆಹುತಿಗೊಳ್ಳದೆ ಬಿಡನೆಂದು ದಶರಥರಾಜನು ಧೈರ್ಯಗೆಟ್ಟು ಕಾತರಿಸಿ ಹೋದನು. ಆದರೆ ಶ್ರೀರಾಮನಿಗೆ ಶೈವಧನುಸ್ಸಿನಂತೆಯೇ ಆ ವೈಷ್ಣವ ಧನುಸ್ಸೂ ಸಹ ಅವಲೀಲೆಯಿಂದ ಸ್ವಾಧೀನವಾಯಿತು. ಅದನ್ನೂ ನಿಮಿಷಮಾತ್ರದಲ್ಲಿ ಹೆದೆಯನ್ನೇರಿಸಿದನು. ಬಾಲಕನಾದರೂ ಧನುರ್ವಿದ್ಯಾಪ್ರೌಢಪಂಡಿತನಾದ ಶ್ರೀರಾಮಚಂದ್ರನ ಆ ಪರಾಕ್ರಮವನ್ನು ಕಂಡು ಪರಶುರಾಮನು ಸಂತುಷ್ಟನಾಗಿ ಆತನನ್ನು ವಿಶೇಷವಾಗಿ ಅಭಿನಂದಿಸಿದನು. ತನ್ನ ಸುಕುಮಾರನ ಮೇಲೊದಗಿದ್ದ ಆ ಅಪಮೃತ್ಯುವು ಅಷ್ಟು ಸುಲಭವಾಗಿ ನಿವಾ

ರಣೆಯಾದುದನ್ನು ಕಂಡು, ದಶರಥನು ಪರಮಾನಂದಗೊಂಡು, ಎಲ್ಲರೊಂದಿಗೂ ಮುಂದೆ ಶೀಘ್ರಪ್ರಯಾಣಮಾಡಿ, ಅಯೋಧ್ಯಾನಗರಿಯನ್ನು ಸೇರಿದನು. ರಾಜಪುತ್ರರೊಬ್ಬೊಬ್ಬರಿಗೂ ಬೇರೆಬೇರೆ ಅರಮನೆಗಳು ನಿರ್ಮಿಸಿ ಕೊಡಲ್ಪಟ್ಟವು. ಶ್ರೀರಾಮ ಲಕ್ಷ್ಮಣ ಭರತ ಶತ್ರುಘ್ನರು ನಾಲ್ಕುಮಂದಿಯೂ, ತಮ್ಮತಮ್ಮ ಅರಮನೆಗಳಲ್ಲಿ ತಮ್ಮ ಪತ್ನಿಯರೊಂದಿಗೆ ಸುಮಾರು ಹನ್ನೆರಡು ವರ್ಷಕಾಲ ಸುಖವಾಗಿ ವಾಸಮಾಡಿಕೊಂಡಿದ್ದರು.

ಸಂಸಾರದಲ್ಲಿ ಒಂದೇ ಸಮವಾಗಿ ಸುಖಸಂತೋಷಗಳನ್ನನುಭವಿಸುವುದು ಯಾರಿಗೆ ಸಾಧ್ಯ? ದಶರಥರಾಜೇಂದ್ರನು ತನಗೆ ವೃದ್ಧಾಪ್ಯಪ್ರಾಪ್ತವಾದುದನ್ನು ಕಂಡು, ಇನ್ನು ತನ್ನ ರಾಜ್ಯಕಾರ್ಯಭಾರವನ್ನು ತನ್ನ ಹಿರಿಯ ಮಗನಾದ ಶ್ರೀರಾಮಚಂದ್ರನ ಮೇಲಿರಿಸಿ ತಾನು ವಿಶ್ರಾಂತನಾಗಬೇಕೆಂದು ಅಪೇಕ್ಷಿಸಿದನು. ಆ ಸಲಹೆಯನ್ನು ಕೇಳಿ ಮಂತ್ರಿಸಾಮಂತರೂ ಪರಮಾನಂದಗೊಂಡರು. ಪರಿಜನ ಪುರಜನರು, ತಮಗೆ, ಸುಗುಣಶಿರೋಮಣಿ ಶ್ರೀರಾಮಚಂದ್ರನು ಪ್ರಭುವಾಗುವನೆಂಬ ವರ್ತಮಾನವನ್ನು ತಿಳಿದು ಉಬ್ಬಿಹೋದರು. ಶ್ರೀರಾಮನ ಕೃಪಾಛತ್ರದ ನೆಳಲು ತಮಗೆ ಪ್ರಾಪ್ತವಾಗಲಿರುವುದೆಂಬ ವೃತ್ತಾಂತವೂ ಅಯೋಧ್ಯಾರಾಜಧಾನಿಯ ಮತ್ತು ಆ ದೇಶದ ಜನರನ್ನೇ ಆನಂದಸಾಗರದಲ್ಲಿ ಓಲಾಡಿಸಿಬಿಟ್ಟಿತು. ದಶರಥನು ಒಂದಾನೊಂದು ಶುಭದಿನದಲ್ಲಿ ಶ್ರೀರಾಮಚಂದ್ರನಿಗೆ ಯೌವರಾಜ್ಯಪಟ್ಟಾಭಿಷೇಕ ಮಾಡಬೇಕೆಂದು ನಿಶ್ಚಯಿಸಿ, ವಸಿಷ್ಠರ ಅನುಮತಿಯಿಂದ ಆತನಿಗೆ ಹೇಳಿಕಳುಹಿಸಿದನು. ರಾಜ್ಯಾಭಿಷೇಕಕ್ಕೆ ಅವಶ್ಯಕವಾದ ಸಕಲ ಮಂಗಳದ್ರವ್ಯಗಳೂ ಸಂಗ್ರಹಿಸಲ್ಪಟ್ಟವು.—ಇನ್ನೇನು, ನಾಳೆಯೇ ನಮ್ಮ ರಾಮಚಂದ್ರನು ರಾಜ್ಯಾಧಿಪತ್ಯವನ್ನು ವಹಿಸುವನು. ಎಂದು ಪ್ರಜೆಗಳೆಲ್ಲರೂ ಪರಮ ಸಂಭ್ರಮದಿಂದ ಪಟ್ಟಣಶೃಂಗಾರವೇ ಮುಂತಾದ ಕಾರ್ಯಗಳಲ್ಲಿ ಮಗ್ನರಾದರು. ಪಟ್ಟಮಹಿಷಿಯಾದ ಕೌಸಲ್ಯಾದೇವಿಯೂ, ತನ್ನ ಮಗನು ಪಟ್ಟಾಭಿಷಿಕ್ತನಾದುದನ್ನು ಕಂಡು ತನ್ನ ಕಣ್ಣುಗಳನ್ನು ಸಾರ್ಥಕಪಡಿಸಿಕೊಳ್ಳಬೇಕೆಂದು ಬೆಟ್ಟದಷ್ಟು ಆಸೆಯನ್ನಿಟ್ಟುಕೊಂಡಿದ್ದಳು.

ಆದರೆ, ಈ ಮಧ್ಯೆ ಒಂದು ಕುತಂತ್ರವು ನಡೆಯಿತು. ಕೈಕೇಯಿಯ ಬಳಿಯಿದ್ದ ಮಂಥರೆಯೆಂಬ ದಾಸಿಯು, ಆಕೆಗೆ ದುರ್ಬೋಧನೆ

ಮಾಡಿ ಮನಸ್ಸನ್ನು ಕೆಡೆಸಿದಳು. ಅದರ ಪರಿಣಾಮದಿಂದ ಆಕೆಗೆ ರಾಮನ ಪಟ್ಟಾಭಿಷೇಕ ವಿಷಯದಲ್ಲಿ ಮಹತ್ತರವಾದ ದ್ವೇಷವುಂಟಾಯಿತು. ರಾಜನು ತನ್ನ ಸ್ವಂತಮಗನಾದ ಭರತನಿಗೆ ಮೋಸಮಾಡಿ, ತನ್ನ ಸವತಿಯ ಮಗನಾದ ರಾಮನಿಗೆ ಪಟ್ಟಗಟ್ಟಬೇಕೆಂಬ ಉದ್ದೇಶದಿಂದಲೇ, ಅವನನ್ನು ದೂರ ದೇಶಕ್ಕೆ ಅಟ್ಟಿದನೆಂದು ತಿಳಿದು, ಹೇಗಾದರೂ ರಾಜ್ಯವನ್ನು ತನ್ನ ಮಗನಿಗೇ ದಕ್ಕಿಸಿಕೊಳ್ಳಬೇಕೆಂದು ಸಂಕಲ್ಪಮಾಡಿದಳು. ಒಂದಿನ ರಾತ್ರಿ ದಶರಥನು ಪಟ್ಟಾಭಿಷೇಕ ವೃತ್ತಾಂತವನ್ನು ತನ್ನ ಮೋಹದ ಮಡದಿಗೆ ತಿಳಿಸಬೇಕೆಂದು ಆಕೆಯ ಮನೆಗೆ ಬರುವ ವೇಳೆಗೆ ಕೈಕೇಯಿಯು, ತನ್ನ ವಸ್ತ್ರಾಭರಣಗಳನ್ನೆಲ್ಲಾ ಕಿತ್ತು ದಿಕ್ಕಿಗೊಂದೊಂದರಂತೆ ಎಸೆದು, ತಲೆಯ ಕೂದಲನ್ನು ಕೆದರಿಕೊಂಡು, ನೆಲದಮೇಲೆ ಬಿದ್ದು ರೋದಿಸುತ್ತಿದ್ದಳು. ಅವಳ ಆ ಸ್ಥಿತಿಯನ್ನು ಕಂಡು ಗಾಬರಿಯಾದ ರಾಜನು, ಆಕೆಗೆ ಏನು ಅಪೇಕ್ಷೆಯಿದ್ದರೆ ಅದನ್ನು ಸಲ್ಲಿಸುವೆನೆಂದೂ ಸುಮುಖಿಳಾಗಿ ಎಂದಿನಂತೆ ಇರಬೇಕೆಂದೂ ಪ್ರಾರ್ಥಿಸಿದನು. ಉಪಾಯಚತುರಳಾದ ಕೈಕೇಯಿಯು, ಆ ವೃದ್ಧರಾಜನು, ಮೋಹಾಂಧನಾಗಿ ಹಾಗೆ ತನಗೆ ವಶವಾದ ಸಮಯವನ್ನು ಸಾಧಿಸಿ, ಹಿಂದೆ ಒಂದುವೇಳೆ ದೇವಾಸುರರ ಯುದ್ಧದಲ್ಲಿ ಆತನು ತನಗೆ ಕೊಡುತ್ತೇನೆಂದು ವಾಗ್ದಾನಮಾಡಿದ್ದ ಎರಡು ವರಗಳನ್ನು ಈಗ ಕೊಡಬೇಕೆಂದು ಬಲವಂತಪಡಿಸಿದಳು. ದಶರಥನೂ ಒಡನೆ ಅದಕ್ಕೆ ಸಮ್ಮತಿಸಿದನು. ತತ್ಕ್ಷಣವೇ ಕೈಕೇಯಿಯು, ಒಂದು ವರಕ್ಕೆ ಶ್ರೀರಾಮಚಂದ್ರನು ನಾರುವಸ್ತ್ರಗಳನ್ನು ಧರಿಸಿ ಹದಿನಾಲ್ಕು ವರುಷ ಮುನಿಗಳಂತೆ ವನವಾಸಮಾಡಬೇಕೆಂದೂ, ಮತ್ತೊಂದಕ್ಕೆ ಅಯೋಧ್ಯಾರಾಜಧಾನಿಯ ಯೌವರಾಜ್ಯಾಭಿಷೇಕವನ್ನು ತನ್ನ ಮಗನಾದ ಭರತನಿಗೆ ಮಾಡಬೇಕೆಂದೂ ಕೇಳಿಕೊಂಡಳು.

ತನ್ನ ಮಾತುಗಳಿಂದಲೇ ಕಟ್ಟಲ್ಪಟ್ಟವನಾಗಿ ದಶರಥನು ಮುಂದೇನು ಮಾಡುವುದಕ್ಕೂ ತೋರದೆ ಮೂಕನಂತಾಗಿ ಕುಳಿತನು. ರಾಮನ ಅಗಲಿಕೆಯು ಆತನಿಗೆ ಅಸಹನೀಯವಾಯಿತು. ಮೂರ್ಛಿತನಾಗಿ ನೆಲಕ್ಕೆಬಿದ್ದು, ಪುನಃ ಚೇತರಿಸಿಕೊಂಡೆದ್ದು, ಕೈಕೇಯಿಯನ್ನು ಪರಿಪರಿಯಿಂದ ಬೇಡಿಕೊಂಡನು. ವೃದ್ಧನಾದ ತನ್ನ ಮೇಲೂ, ಸುಕುಮಾರನಾದ ರಾಮಚಂದ್ರನ ಮೇಲೂ ದಯೆಯನ್ನು ತೋರಿಸೆಂದು ಬಹುಬಗೆಯಿಂದ-ಎರಡು

ಕೈಗಳನ್ನೂ ಜೋಡಿಸಿ ಪ್ರಾರ್ಥಿಸಿದನು. ಆದರೂ ಏನೂ ಪ್ರಯೋಜನವಾಗಲಿಲ್ಲ. ದಶರಥರಾಜನು ಅಸೌಖ್ಯವಾಗಿರುವ ಸಂಗತಿಯನ್ನು ಸುಮಂತ್ರನ ಮೂಲಕ ತಿಳಿದು ಶ್ರೀರಾಮನು ಕೈಕೇಯಿಯ ಅಂತಃಪುರಕ್ಕೆ ಬಂದು, ಆತನ ಸ್ಥಿತಿಯನ್ನು ಕಂಡು, ಗಾಬರಿಯಾಗಿ ಕಾರಣವನ್ನು ವಿಚಾರಿಸಿದನು. ಕೈಕೇಯಿಯು ಲೇಶಮಾತ್ರವೂ ಸಂಕೋಚವಿಲ್ಲದೆ, ತನ್ನ ವರಯಾಚನೆಯ ವಿವರವನ್ನೂ, ರಾಜನ ವಾಗ್ದಾನವನ್ನೂ ತಿಳಿಸಿದಳು. ಶ್ರೀರಾಮನು ತನ್ನ ತಂದೆಯನ್ನು ಸತ್ಯವಾಕ್ಪರಿಪಾಲಕನನ್ನಾಗಿ ಮಾಡಲು ತಾನು ಸಂತೋಷದಿಂದ ವನವಾಸವನ್ನು ಕೈಕೊಳ್ಳುತ್ತೇನೆಂದು ತಿಳಿಸಿ, ಆ ಸಂಗತಿಯನ್ನು ತನ್ನ ತಾಯಿಗೂ ಪತ್ನಿಯಾದ ಸೀತೆಗೂ ತಿಳಿಸಿ ಹೊರಡಲು ಸಿದ್ಧನಾಗುವುದಕ್ಕಾಗಿ, ಅಲ್ಲಿಂದ ಹೊರಟನು.

ತನ್ನ ಮಗನು ಪಟ್ಟಾಭಿಷಿಕ್ತನಾಗಿ, ಆನೆಯ ಮೇಲೆ ಅಂಬಾರಿಯಲ್ಲಿ ಕುಳಿತು ಶ್ವೇತಚ್ಛತ್ರದ ನೆರಳಿನಲ್ಲಿ ಬರುತ್ತಾನೆಂದು ಅರಳಿದ ಕಣ್ಣುಗಳಿಂದ-ಬಿಟ್ಟದಷ್ಟು ಆಸೆಯನ್ನಿಟ್ಟುಕೊಂಡಿದ್ದ ಕೌಸಲ್ಯೆಯು, ಪಾದಚಾರಿಯಾಗಿ ತನ್ನ ಅಂತಃಪುರಕ್ಕೆ ನಡೆದುಬಂದ ರಾಮನನ್ನು ಕಂಡು ಬಹುಗಾಬರಿಪಟ್ಟಳು. ತಂದೆಯು ಸತ್ಯವಾಕ್ಕಿಗೆ ಬದ್ಧನಾಗಿ, ತನಗೆ ಕಾನನರಾಜ್ಯದ ಆಧಿಪತ್ಯವನ್ನು ವಹಿಸಿದನೆಂದೂ ಅದಕ್ಕಾಗಿ ವ್ಯಸನಪಡದೆ ತನಗೆ ಅನುಮತಿಯನ್ನು ಕೊಡಬೇಕೆಂದೂ, ಹದಿನಾಲ್ಕು ವರ್ಷಕಾಲವನ್ನು ಹದಿನಾಲ್ಕು ದಿನಗಳಂತೆ ಕಳೆದು ಶೀಘ್ರದಲ್ಲೇ ಪುನಃ ಆಕೆಯ ದರ್ಶನಕ್ಕೆ ಬರುತ್ತೇನೆಂದೂ ರಾಮನು ತನ್ನ ತಾಯಿಗೆ ವಿಜ್ಞಾಪಿಸಿಕೊಂಡನು. ಕೌಸಲ್ಯಾದೇವಿಯು ಕಣ್ಣೀರು ಪ್ರವಾಹವಾಗಿ ಹರಿಯುತ್ತಿರಲು, ಮಾತನಾಡಲು ಬಾಯಿಬಾರದೆ ಗಂಟಲು ಕಟ್ಟಿ ಹೋಗುತ್ತಿರಲು, ಮುಂದೆ ಯಾವ ಉಪಾಯವನ್ನೂ ಕಾಣದೆ,-'ಮಗನೇ ತಂದೆಯ ಮಾತನ್ನು ನೆರವೇರಿಸಿ ಸತ್ಯಸಂಧನೆಂದು ಪ್ರಖ್ಯಾತನಾಗಿ ಸುಖವಾಗಿ ಹಿಂದಿರುಗಿ ಬಾ' ಎಂದು ಆಶೀರ್ವಾದಮಾಡಿ ಕಳುಹಿಸಿಕೊಟ್ಟಳು.

ತರುವಾಯ ಶ್ರೀರಾಮನು ತನ್ನ ಧರ್ಮಪತ್ನಿ ಸೀತಾದೇವಿಯನ್ನು ಕಂಡು, ತನ್ನ ವನವಾಸಕ್ಕೆ ಅನುಮತಿಯನ್ನು ಕೊಡೆಂದು ಕೇಳಿದನು. ಆ ಮಾತುಗಳನ್ನು ಕೇಳಿ, ಸೀತೆಯು—'ಪ್ರಾಣಮನೋಹರಾ-ಇದೇನು, ನಿನ್ನ ಅರ್ಧಾಂಗಿಯಾದ ನನ್ನನ್ನು ಇಲ್ಲಿಬಿಟ್ಟು ನೀನೊಬ್ಬನೇ ಕಾಡಿಗೆ ಹೋಗುವು

ದೆಂದರೇನು? ನಿನ್ನ ಧರ್ಮಪತ್ನಿಯಾದ ನಾನು ನಿನ್ನ ಕಷ್ಟಸುಖಗಳೆಲ್ಲಕ್ಕೂ ಬಾಧ್ಯಳಲ್ಲವೆ? ನಾನೂ ಕಾಡಿಗೆ ಬರುತ್ತೇನೆ. ನನ್ನನ್ನೂ ಕರೆದುಕೊಂಡು ಹೋಗು' ಎಂದು ಬಹುಬಗೆಯಿಂದ ಪ್ರಾರ್ಥಿಸಿದಳು. ರಾಮನು ಅನೇಕ ಬಗೆಯ ಅಡಚಣೆಗಳನ್ನು ಹೇಳಿ ನಿವಾರಿಸಲು ಯತ್ನಿಸಿದನಾದರೂ, ಸಾಧ್ಯವಾಗಲಿಲ್ಲ. ಕೊನೆಗೆ ಜಾನಕಿಯನ್ನೂ ತನ್ನೊಂದಿಗೆ ಕರೆದೊಯ್ಯಲು ನಿಶ್ಚಯಿಸಿದನು. ಆ ವೇಳೆಯಲ್ಲಿ ತನ್ನನ್ನೂ ಒಂದಿಗೇ ಕರೆದೊಯ್ಯಬೇಕೆಂದು ಲಕ್ಷ್ಮಣನು ಶ್ರೀರಾಮನನ್ನು ಪ್ರಾರ್ಥಿಸಿದನು. ಅವನ ಅಪೇಕ್ಷೆಯನ್ನು ಪಲ್ಲಿಸದಿರುವುದೂ ಸಾಧ್ಯವಾಗಲಿಲ್ಲ. ಹೀಗಾಗಿ ಶ್ರೀರಾಮನು ಸೀತಾಲಕ್ಷ್ಮಣರೊಂದಿಗೆ ವನಕ್ಕೆ ಹೊರಡತಕ್ಕುದೆಂದು ನಿಶ್ಚಯಮಾಡಿಕೊಂಡು, ತಮ್ಮ ಸರ್ವಸ್ವವನ್ನೂ ದೀನಾನಾಥರಿಗೆ ದಾನಮಾಡಿ, ಕೈಕೇಯಿಯು ಕೊಟ್ಟ ನಾರುಮಡಿಗಳನ್ನು ಧರಿಸಿ, ರಾಮಲಕ್ಷ್ಮಣರು, ಕೊನೆಯಬಾರಿ ದಶರಥನಿಗೆ ನಮಸ್ಕಾರಮಾಡಿ, ಜಾನಕಿಯೊಂದಿಗೆ ಅರಮನೆಯಿಂದ ಹೊರಹೊರಟರು. ಈ ಅಪೂರ್ವವೃತ್ತಾಂತವು ಒಡನೆ ರಾಜಧಾನಿಯಲ್ಲೆಲ್ಲ ಹಬ್ಬಿತು. ಪುರಜನರು, ಆ ಅನರ್ಥಕಾರಣವನ್ನು ಬಗೆಬಗೆಯಾಗಿ ಹೇಳಿಕೊಳ್ಳತೊಡಗಿದರು. ತಮ್ಮ ರಾಜಪುತ್ರನು, ಆ ದಿನ ಪಟ್ಟಾಭಿಷಿಕ್ತನಾಗಿ ಮೆರವಣಿಗೆಯಾಗಿ ಬರುವುದಕ್ಕೆ ಬದಲಾಗಿ, ತಿರುಕನಂತೆ ನಾರುವಸ್ತ್ರಗಳನ್ನು ಧರಿಸಿ, ಸುಕುಮಾರಾಂಗಿಯಾಗಿ ಪತ್ನಿಯೊಂದಿಗೆ ಪಾದಚಾರಿಯಾಗಿ ಹೊರಟುದನ್ನು ಕಂಡು, ಅದಕ್ಕೆ ಕಾರಣಳಾದ ಕೈಕೇಯಿಯನ್ನು ನಾವಿಧಪರಿಯಾಗಿ ಬೈದರು. ಶಾಪಿಸಿದರು. ಪರಿಪರಿಯಿಂದ ಗೋಳಿಟ್ಟರು. ರಾಮವಿರಹಿತವಾಗಿ, ಸ್ಮಶಾನಸದೃಶವಾದ ಈ ಹಾಳು ಅಯೋಧ್ಯೆಯಲ್ಲಿ ತಾವು ವಾಸಮಾಡಲಾರೆವೆಂದು, ಅವರೊಂದಿಗೇ ತಾವೂ ಗುಂಪುಗುಂಪಾಗಿ ಹೊರಟರು. ನಗರಕ್ಕೆ ನಗರವೇ ಶ್ರೀರಾಮಾದಿಗಳೊಂದಿಗೆ ವನಕ್ಕೆ ಹೊರಟಿತು.

ಶ್ರೀರಾಮನು ಪಟ್ಟಣಿಗರ ವ್ಯಸನವನ್ನು ಕಂಡು ಕನಿಕರಪಟ್ಟನು. ಆದರೆ ಏನುಮಾಡಲು ಸಾಧ್ಯ! ಎಷ್ಟೋಬಗೆಯಿಂದ ಸಮಾಧಾನ ಹೇಳಿದನು. ಯಾರೂ ಕೇಳಲಿಲ್ಲ. ಪುರಜನರು ಮಕ್ಕಳುಮರಿಗಳೊಂದಿಗೆ-ಶ್ರೀರಾಮನೆಲ್ಲಿದ್ದರೆ ನಾವೂ ಅಲ್ಲಿರುವೆವು-ಎಂದು ಬೆನ್ನಟ್ಟಿ ಹೊರಟರು. ಸುಮಂತ್ರನು ಶ್ರೀಸೀತಾ ರಾಮಲಕ್ಷ್ಮಣರನ್ನು ರಥದಲ್ಲಿ ಕೂರಿಸಿಕೊಂಡು

ವೇಗವಾಗಿ ಹೊರಟನು. ದಶರಥನು ಪುತ್ರವಿಯೋಗವನ್ನು ಸಹಿಸಲಾರದೆ-ಹಾ ರಾಮಾ, ರಾಮಾ ಎಂದು ಅರಚಿಕೊಂಡು ಮೂರ್ಛಿತನಾಗಿ ಬಿದ್ದುಹೋದನು. ಅರಮನೆಯಲ್ಲಿ ಕೌಸಲ್ಯಾದಿ ರಾಜಮಹಿಷಿಯರೂ, ಇತರ ರಾಜಸ್ತ್ರೀಯರೂ ಕಲ್ಲುಮರಗಳು ಕರಗುವಂತೆ ಮೊರೆಯಿಟ್ಟರು. ಆ ಪಟ್ಟಣದ ಜನವೇ ಹೋ ಎಂದು ಅರಚಿಕೊಂಡು ಗೋಳಿಟ್ಟಿತು. ಆದರೇನು, ರಾಮಾದಿಗಳೇನೋ ವನಾಭಿಮುಖವಾಗಿ ಹೊರಟೇಬಿಟ್ಟರು !

ರಥವು ಕ್ಷಣಕ್ಷಣಕ್ಕೂ ಅಯೋಧ್ಯಾನಗರಿಯಿಂದ ದೂರದೂರವಾಗುತ್ತಾ ಬಹುವೇಗವಾಗಿ ಪ್ರಯಾಣಮಾಡಿತು. ಆ ದಿನ ಸಾಯಂಕಾಲದ ವೇಳೆಗೆ ಅವರು ತಮಸಾನದೀತೀರವನ್ನು ಸೇರಿ ಅಲ್ಲೇ ಮರಗಳ ಕೆಳಗೆ ವಿಶ್ರಮಿಸಿಕೊಂಡರು. ಅವರನ್ನು ಹಿಂಬಾಲಿಸಿ ಬಂದ ಜನರೂ ಸಹ ಅಲ್ಲಲ್ಲೆ ತಂಗಿ ಆ ರಾತ್ರಿಯನ್ನು ಕಳೆದರು. ದಯಾಮಯನಾದ ಶ್ರೀರಾಮನು ಆ ಸಾಧುಸ್ವಭಾವದ ಪ್ರಜೆಗಳು ತನ್ನಮೇಲಿನ ಪ್ರೀತಿಗಾಗಿ ಪಡುವ ಕಷ್ಟವನ್ನು ಕಂಡು ಮರುಗಿ, ಅವರನ್ನು ಹಿಂದಿರುಗಿರೆಂದು ಹೇಳಿದರೆ ಕೇಳಲಾರರೆಂದೂ, ಅವರು ನಿದ್ರಿಸುತ್ತಿದ್ದಾಗ ಬಿಟ್ಟು ತಾವು ಮುಂದೆ ಪ್ರಯಾಣವಾಗಿ ಹೋಗಿಬಿಡುವುದೇ ಸೂಕ್ತವೆಂದೂ ಯೋಚಿಸಿ ಸುಮಂತ್ರನಿಗೆ ಪ್ರೇರಿಸಿದನು. ಒಡನೆ ಆತನೆದ್ದು ರಥವನ್ನು ಸಜ್ಜುಗೊಳಿಸಲು ಅವರು ನಾಲ್ವರೂ ಹೊರಟು, ಪ್ರಯಾಣಮಾಡಿಬಿಟ್ಟರು. ಇತ್ತ ಮಾರನೆಯ ಪ್ರಾತಃಕಾಲ, ಪುರಜನರು ರಾಮಾದಿಗಳನ್ನು ಕಾಣದೆ, ಅವರು ಎತ್ತ ಹೋದರೆಂಬುದು ಗೋಚರವಾಗದೆ, ಬಹುವ್ಯಸನಪಟ್ಟು, ಕೊನೆಗೆ ಹಿಂದಿರುಗಿ ಅಯೋಧ್ಯೆಯನ್ನು ಸೇರಿದರು. ಅತ್ತ ಶ್ರೀರಾಮಾದಿಗಳಾದರೋ ದೇವಶ್ರುತಿ ಗೋಮತಿ ಎಂಬೆರಡು ತೊರೆಗಳನ್ನೂ-ಕೋಸಲರಾಜ್ಯದ ಗಡಿಯನ್ನೂ ದಾಟಿಬಿಟ್ಟರು. ಅಲ್ಲಿ ಗುಹನೆಂಬ ವ್ಯಾಧನು ಬಂದು ಅವರ ದರ್ಶನಮಾಡಿದನು. ಸೂರ್ಯವಂಶ ಶ್ರೇಷ್ಠನಾದ ಶ್ರೀರಾಮನಿಗೆ ಪ್ರಾಪ್ತವಾದ ಆ ವನವಾಸದ ಕಷ್ಟಕ್ಕಾಗಿ ಆತನು ವಿಶೇಷವಾಗಿ ವ್ಯಥೆಪಟ್ಟು, ಅವರನ್ನು ಬಗೆಬಗೆಯಿಂದ ಉಪಚರಿಸಿದನು. ಶ್ರೀರಾಮನು ಆತನಿಗೆ ಅನೇಕ ಧರ್ಮಸೂಕ್ಷ್ಮಗಳನ್ನು ಹೇಳಿ ಸಮಾಧಾನಪಡಿಸಿ, ಆತನಿಂದಲೇ ಆಲದಹಾಲನ್ನು ತರಿಸಿಕೊಂಡು ತಾನೂ ಲಕ್ಷ್ಮಣನೂ ಜಡೆಯನ್ನು ಧರಿಸಿದರು. ತರುವಾಯ

ಸುಮಂತ್ರನು, ಅವರನ್ನು ಕಾಡಿನಲ್ಲಿ ಬಿಟ್ಟು, ಶ್ರೀರಾಮನಿತ್ತ ಸಂದೇಶವನ್ನು ಕೈಕೊಂಡು ಅಯೋಧ್ಯಾಭಿಮುಖವಾಗಿ ಹಿಂದಿರುಗಿದನು.

ತಮ್ಮನ್ನಗಲಿ, ಮೂರ್ಖಳೂ ದುರಾಶಾಪರಳೂ ಆದ ಕೈಕೇಯಿಯ ಹಿಡಿತದಲ್ಲಿ ಸಿಕ್ಕಿಬಿದ್ದ ದಶರಥ ಕೌಸಲ್ಯಾಸುಮಿತ್ರೆಯರು ಎಷ್ಟು ಕಷ್ಟಪಡುವರೋ ಎಂಬ ಯೋಚನೆಯು ರಾಮನನ್ನು ಅತಿಶಯವಾಗಿ ಬಾಧಿಸತೊಡಗಿತು. ಆಗ ಆತನು, ಲಕ್ಷ್ಮಣನನ್ನು ಹಿಂದಿರುಗಿ ಅಯೋಧ್ಯೆಗೆ ಹೋಗಿ ಅವರ ಯೋಗಕ್ಷೇಮವನ್ನು ಗಮನಿಸಿಕೊಂಡಿರೆಂದು ಬಗೆಬಗೆಯಿಂದ ಬೋಧಿಸಿದನು. ಆದರೆ ಲಕ್ಷ್ಮಣನು ಆ ಸಲಹೆಗೆ ಒಪ್ಪದೆ, ಶ್ರೀರಾಮನನ್ನು ಕ್ಷಣಮಾತ್ರವೂ ಅಗಲಿ ಜೀವಿಸಲು ತನ್ನಿಂದ ಸಾಧ್ಯವಾಗಲಾರದೆಂದೂ, ಹದಿನಾಲ್ಕು ವರ್ಷಕಾಲ ಆದ ಕಷ್ಟನಷ್ಟಗಳನ್ನು ಅನುಭವಿಸಿಕೊಂಡು ಆತನೊಂದಿಗೇ ವಾಸಿಸುವೆನೆಂದೂ ತನ್ನ ನಿಶ್ಚಯವನ್ನು ಹೇಳಿದನು. ಹೀಗೆ ಅವರು ಅಲ್ಲಿ ಒಂದೆರಡು ದಿನಗಳನ್ನು ಕಳೆದು ತರುವಾಯ ಮುಂದಕ್ಕೆ ಪ್ರಯಾಣಮಾಡಿ ಭರದ್ವಾಜಾಶ್ರಮವನ್ನು ಸೇರಿದರು. ಭರದ್ವಾಜ ಮುನಿಪೋತ್ತಮನು, ಶ್ರೀರಾಮಾದಿಗಳಿಗೆ ಪ್ರಾಪ್ತವಾದ ವನವಾಸಕ್ಕಾಗಿ ಮರುಗಿ ಅವರ ವಾಸಕ್ಕೆ ಚಿತ್ರಕೂಟವೆಂಬ ಆಶ್ರಮವು ಪ್ರಶಸ್ತವಾಗಿರುವುದೆಂದು ಸೂಚಿಸಿದರು. ಶ್ರೀರಾಮಾದಿಗಳು ಯಮುನಾನದಿಯನ್ನು ದಾಟಿ, ಸಮೀಪದಲ್ಲೇ ಇದ್ದ ವಾಲ್ಮೀಕಾಶ್ರಮವನ್ನು ಸೇರಿ, ಅವರ ದರ್ಶನಮಾಡಿ, ಆ ಚಿತ್ರಕೂಟ ಪ್ರಾಂತದಲ್ಲೇ ಒಂದು ಪರ್ಣಶಾಲೆಯನ್ನು ರಚಿಸಿಕೊಂಡು ಅಲ್ಲಿ ಮುನಿವೃತ್ತಿಯಲ್ಲಿ ವಾಸಮಾಡಿಕೊಂಡಿದ್ದರು.



**ಅಧ್ಯಾಯ ೪. "ಸುಗ್ರೀವ ಸಖ್ಯ"**

ಇತ್ತ ಅಯೋಧ್ಯೆಯಲ್ಲಿ ದಶರಥನು, ಶ್ರೀರಾಮನ ಅಗಲಿಕೆಯಿಂದ ಮತಿಭ್ರಮಣ ಹೊಂದಿದವನಾಗಿ ನಿದ್ರಾಹಾರಗಳು ರುಚಿಸದೆ, ದಿನದಿನಕ್ಕೆ ಕ್ಷೀಣಿಸತೊಡಗಿದನು. ಸದಾಕಾಲವೂ, ತನ್ನಾಪ್ರೇಮಪುತ್ರನನ್ನು ಹಲುಬಿ

ಕೊಂಡು ಕೊರಗುತ್ತಾ,-'ಹಾ ರಾಮಾ, ನನ್ನ ಪ್ರೀಮಸಿದ್ಧೇ ರಾಮಚಂದ್ರಾ, ನಿನ್ನ ಮುಖಕಮಲವನ್ನು ಇನ್ನೆಂದಿಗೆ ಕಂಡೇನು? ನಿನ್ನನ್ನು ಅಗಲಿ ನಾನು ಹೇಗೆ ಈ ಪ್ರಾಣಗಳನ್ನು ಧರಿಸಿರಲಿ! ನನಗೆ ಇನ್ನು ಆಪ್ತರ್ಯಾರು? ಯಾರನ್ನು ರಾಮಾ ಎಂದು ಕರೆದು ಸಂತಸಗೊಳ್ಳಲಿ! ಅಯ್ಯೋ ನನಗಿನ್ನಾರು ದಿಕ್ಕು?' ಎಂದು ರೋದಿಸುತ್ತಾ, ಅಗಲಿಕೆಯ ಹೃದಯವೇದನೆಯನ್ನು ಸೈರಿಸಲಾರದೆ, ದೇಹವನ್ನು ನೀಗಿದನು. ಮುನಿಯ ಶಾಪವು ಇಂತು ಫಲಿಸಿತು.

ವಸಿಷ್ಠಾದಿ ಮಹರ್ಷಿಗಳೂ, ಸುಮಂತ್ರಾದಿ ಮಂತ್ರಿಮುಖ್ಯರೂ, ದಶರಥನ ದೇಹಕ್ಕೆ ಸಂಸ್ಕಾರ ನಡಿಸಲು ಆತನ ನಾಲ್ಕುಮಂದಿ ಮಕ್ಕಳಲ್ಲಿ ಒಬ್ಬನೂ ಸಮೀಪದಲ್ಲಿಲ್ಲದ ಆ ದುಸ್ಥಿತಿಯನ್ನು ಕಂಡು ಅತ್ಯಂತ ವಿಚಾರಪಟ್ಟು, ಆ ಕಳೇಬರವನ್ನು ತೈಲಕಟಾಹದಲ್ಲಿರಿಸಿ, ಬಹುಶೀಘ್ರವಾಗಿ ಭರತ ಶತ್ರುಘ್ನರಿದ್ದೆಡೆಗೆ ದೂತರನ್ನಟ್ಟಿದರು. ಅಲ್ಲಿ ಅವರಿಗೂ ಅವರೆಗೇ ದುಸ್ವಪ್ನಗಳುಂಟಾಗಿ ಕಳವಳವಾಗಿದ್ದುದರಿಂದ ಅವರು ಬಹುಗಾಬರಿಪಟ್ಟು ಆ ದೂತರೊಂದಿಗೆ ಶೀಘ್ರವಾಗಿ ರಾಜಧಾನಿಗೆ ಬಂದರು. ಅಯೋಧ್ಯೆಯು ಎತ್ತನೋಡಿದರೂ ಹಾಳುಹಾಳು ಬಡಿಯುತ್ತಿದ್ದುದನ್ನೂ, ಯಾರ ಮುಖದಲ್ಲೂ ಉತ್ಸಾಹವೇ ಇಲ್ಲದೆ, ನಗರವೇ ಶೋಕಸಾಗರದಲ್ಲಿ ಮುಳುಗಿದಂತಿದ್ದ ಆ ಪರಿಸ್ಥಿತಿಯನ್ನೂ ನೋಡಿ, ಭರತನು ಮನಸ್ಸಿನಲ್ಲೇ ಗಾಬರಿಪಟ್ಟುಕೊಂಡು, ನೇರವಾಗಿ ಅರಮನೆಯನ್ನು ಸೇರಿ, ತನ್ನ ತಾಯಿಗೆ ವಂದಿಸಿದನು. ಕೈಕೇಯಿಯು ತನ್ನ ಮಗನನ್ನು ಮನಸಾರೆ ಆಶೀರ್ವದಿಸಿ, ತಾನು ಸಂಪಾದಿಸಿಕೊಟ್ಟ ಆ ರಾಜ್ಯವನ್ನಿಟ್ಟುಕೊಂಡು ಸೌಖ್ಯದಿಂದ ಆಳಿಕೊಂಡಿರೆಂದು ಆಶೀರ್ವಾದಮಾಡಿದಳು. ಭ್ರಾತೃವತ್ಸಲನಾದ ಭರತನು, ತಮ್ಮಣ್ಣನಿಗೆ ವನವಾಸವನ್ನೂ, ತಮ್ಮ ತಂದೆಗೆ ಮರಣವನ್ನೂ ಉಂಟುಮಾಡಿದ ಆ ರಾಜ್ಯಾಧಿಪತ್ಯವನ್ನು ತಾನು ಖಂಡಿತವಾಗಿ ಒಲ್ಲೆನೆಂದು ನಿರಾಕರಿಸಿದನು. ಮಾತ್ರವಲ್ಲ, ರಾಜಸ್ತ್ರೀಯಾಗಿ ಪತಿಯ ಮರಣವನ್ನೂ ಲಕ್ಷ್ಯಮಾಡದೆ ಅಂತಹ ಘೋರಕೃತ್ಯಮಾಡಿದ ತನ್ನಾ ತಾಯಿಯ ನಡತೆಯನ್ನು ಬಹುಕಠೂರವಾಕ್ಯಗಳಿಂದ ನಿಷೇಧಿಸಿದನು. ಆದರೆ ಏನುಮಾಡಿದರೇನು? ರಾಜ್ಯಕ್ಕೆ ಶ್ರೀರಾಮನಲ್ಲದೆ ಮತ್ತೊಬ್ಬನು ಬಾಧ್ಯಸ್ಥನಲ್ಲವಾದುದರಿಂದ,

ಪುನಃ ಅರಣ್ಯವನ್ನು ಹೊಕ್ಕು ಹುಡುಕಿ ಆತನನ್ನೇ ಸಮಾಧಾನಗೊಳಿಸಿ ಕರೆತಂದು ರಾಜ್ಯವನೊಪ್ಪಿಸುವೆನಲ್ಲದೆ, ನಾನು ಎಷ್ಟುಮಾತ್ರವೂ ರಾಜ್ಯವನ್ನು ಅಪೇಕ್ಷಿಸೆನು ಎಂದು ಹೇಳಿ, ಮಿತಪರಿವಾರದೊಂದಿಗೆ ವನಕ್ಕೆ ಹೊರಟನು. ನಿಷ್ಕಂಟಕವಾಗಿ ದೊರೆತ ಸಾಮ್ರಾಜ್ಯಪದವಿಯನ್ನೂ ನಿರಾಕರಿಸಿ, ಕಾಡಿಗೆ ಹೊರಟ ಆ ಸತ್ಯಸಂಧನನ್ನು ಕಂಡು ವಸಿಷ್ಠಾದಿ ಮಹರ್ಷಿಗಳೂ, ಕೌಸಲ್ಯಾದಿ ಮಾತೆಯರೂ ಸುಪ್ರೀತರಾಗಿ ಆತನೊಂದಿಗೆ ತಾವೂ ಹೊರಟರು. ಹೀಗೆ ಹೊರಟು ಭರತನು ಮಾರ್ಗದಲ್ಲಿ ಗುಹನನ್ನೂ, ಭರದ್ವಾಜ ಮಹರ್ಷಿಗಳನ್ನೂ ಸಂಧಿಸಿ ಅವರಿಂದ ರಾಮಾದಿಗಳು ಪ್ರಯಾಣ ಮಾಡಿದ ಮಾರ್ಗವನ್ನೂ, ಆಗ ಚಿತ್ರಕೂಟಾಶ್ರಮದಲ್ಲಿ ವಾಸಮಾಡಿಕೊಂಡಿದ್ದ ವೃತ್ತಾಂತವನ್ನೂ ತಿಳಿದು, ನೇರವಾಗಿ ಅಲ್ಲಿಗೆ ಪ್ರಯಾಣಮಾಡಿದನು.

ಅತ್ತ ಚಿತ್ರಕೂಟ ಆಶ್ರಮದಲ್ಲಿ ಶ್ರೀರಾಮನು ಸೀತಾಲಕ್ಷ್ಮಣರೊಂದಿಗೆ ಶುದ್ಧ ಸಾತ್ವಿಕವೃತ್ತಿಯಿಂದ ಮುನಿಗಳಂತೆ ಜಡೆ ನಾರುಮಡಿಗಳನ್ನು ಧರಿಸಿ ಕಂದಮೂಲಾದಿ ಆಹಾರಗಳಿಂದ ಕಾಲಯಾಪನೆ ಮಾಡುತ್ತಿದ್ದನು. ಒಂದು ದಿನ ಅಕಸ್ಮಾತ್ತಾಗಿ ಚತುರಂಗಸೈನ್ಯವು ಬರುತ್ತಿದ್ದಂತಹ ಚಿಹ್ನೆಗಳನ್ನು ಕಂಡು ಅದಕ್ಕೆ ಕಾರಣವನ್ನು ತಿಳಿಯದೆ ಸಂದೇಹಿಸುತ್ತಿರುವಲ್ಲಿ, ಲಕ್ಷ್ಮಣನು ಒಂದು ಉನ್ನತವಾದ ವೃಕ್ಷವನ್ನೇರಿ ನೋಡಿ,-ಭರತನು ಕೇವಲ ರಾಜ್ಯಪ್ರಾಪ್ತಿಯಿಂದ ಮಾತ್ರವೇ ತೃಪ್ತನಾಗದೆ, ತಮ್ಮನ್ನು ನಿರ್ಮೂಲಗೊಳಿಸಬೇಕೆಂದು ಸೈನ್ಯಸಮೇತನಾಗಿ ಬರುತ್ತಿದ್ದಾನೆಂದು ಹೇಳಿ ಯುದ್ಧಕ್ಕೆ ಸಿದ್ಧನಾಗೆಂದು ರಾಮನನ್ನು ಪ್ರೇರಿಸಿದನು. ಆ ಮಾತನ್ನು ಕೇಳಿದ ಶ್ರೀರಾಮನು-'ತಮ್ಮಾ ಲಕ್ಷ್ಮಣಾ, ಭರತನು ಅಂತಹ ದ್ರೋಹಿಯೆಂದು ತಿಳಿಯಬೇಡ. ಅವನು, ತಾಯಿಯಾದ ಕೈಕೇಯಿಯ ಅಭಿಪ್ರಾಯಕ್ಕೆ ಒಪ್ಪದೆ ರಾಜ್ಯಾಧಿಪತ್ಯವನ್ನು ನಿರಾಕರಿಸಿ ನಮ್ಮನ್ನು ಕರೆದೊಯ್ಯಬೇಕೆಂದು ಬಂದಿದ್ದಾನೆ. ಅವನು ಬಹು ಸದ್ಗುಣಿಯು, ಅವನ ವಿಷಯದಲ್ಲಿ ಸಂದೇಹಗೊಳ್ಳಬೇಡ' ಎಂದು ತಿಳಿಯಹೇಳಿದನು. ಮುಂದೆ ಸ್ವಲ್ಪಹೊತ್ತಿನಲ್ಲೇ ಭರತನು, ಆಶ್ರಮ ಸಮೀಪಕ್ಕೆ ಬಂದು ಮುನಿವೇಷದಲ್ಲಿದ್ದ ಆ ಶ್ರೀರಾಮಾದಿಗಳನ್ನು ಕಂಡು ಸಹಿಸಲಾರದೆ, ವ್ಯಸನಾಧಿಕ್ಯದಿಂದ ಹರಿಯುತ್ತಿದ್ದ ಕಣ್ಣೀರಿನಿಂದ ಮಾರ್ಗವು ಕಾಣದೆ ಎಡಹಿಬೀಳುತ್ತಾ, ಹೋ

ಎಂದು ಅರಚಿಕೊಂಡು ಬಂದು, ರಾಮನ ಪಾದಮೂಲದಲ್ಲಿ ಬಿದ್ದುಬಿಟ್ಟನು. ರಾಮನು ತನ್ನ ತಮ್ಮನನ್ನು ಹಿಡಿದೆತ್ತಿ ಬಹುಬಗೆಯಿಂದ ಸಮಾಧಾನಗೊಳಿಸಿದನು. ತರುವಾಯ ಶ್ರೀರಾಮನು, ರಾಜಧಾನಿಯಲ್ಲಿ ಎಲ್ಲರ ಕುಶಲವನ್ನೂ ಕುರಿತು ಪ್ರಶ್ನಿಸಲು, ದಶರಥನ ಮರಣವಾರ್ತೆಯೂ ತಿಳಿಯಿತು. ಪಿತೃಮರಣವಾರ್ತೆಯನ್ನು ಕೇಳಿದ ಶ್ರೀರಾಮನು ಮಹಾ ಪ್ರಾಜ್ಞನಾದರೂ ಎಳೆಮಗುವಿನಂತೆ ಅಳುತ್ತ-ಕೊನೆಗೆ ತಾನೇ ಸಮಾಧಾನಪಟ್ಟುಕೊಂಡನು. ತರ್ಪಣಾದಿಗಳಿಂದ ಪಿತೃಕಿರಿಯೆಯನ್ನು ತೀರಿಸಿದ್ದಾಯಿತು. ಭರತನು, ಇನ್ನು ರಾಜ್ಯಕ್ಕೆ ಬಂದು ಅಭಿಷಿಕ್ತನಾಗೆಂದು ಬಲವಂತಪಡಿಸಲು ಶ್ರೀರಾಮನು ತಾನು ತಂದೆಗೆ ಕೊಟ್ಟ ಮಾತಿಗೆ ಮೀರದೆ ಹದಿನಾಲ್ಕು ವರ್ಷಕಾಲ ವನದಲ್ಲಿದ್ದು, ತರುವಾಯ ಹೊರಟುಬರುತ್ತೇನಲ್ಲದೆ-ತಂದೆಯು ಕಾಲವಾದ ಮಾತ್ರಕ್ಕೆ ಅತನ ಆಜ್ಞೆಯನ್ನು ಮೀರಲಾರೆನೆಂದು ತಿಳಿಸಿದನು. ವಸಿಷ್ಠ ಜಾಬಾಲಿ ಮುಂತಾದ ಮಹರ್ಷಿಗಳ ಸಲಹೆಗಳೂ ಕಾರ್ಯಕಾರಿಗಳಾಗಲಿಲ್ಲ. ಭರತನು ಹದಿನಾಲ್ಕು ವರ್ಷಗಳು ತೀರಿದ ಮಾರನೆಯ ದಿನವೇ ತನಗೆ ದರ್ಶನಕೊಡದಿದ್ದರೆ ಅಗ್ನಿಪ್ರವೇಶ ಮಾಡುವೆನೆಂದು ಶ್ರೀರಾಮನಿಗೆ ವಿಜ್ಞಾಪಿಸಿಕೊಂಡು, ಅತನ ಪಾದುಕೆಗಳನ್ನು ಪಡೆದು, ಪರಿವಾರದೊಂದಿಗೆ ಹಿಂದಿರುಗಿದನು. ಮತ್ತು ರಾಮನಿಲ್ಲದ ಅಯೋಧ್ಯೆಯಲ್ಲಿ ಪ್ರವೇಶಿಸಲಾರೆನೆಂದು ಶಪಥಮಾಡಿ, ಸಮೀಪದ ನಂದಿಗ್ರಾಮದಲ್ಲೇ ಒಂದು ಕುಟೀರವನ್ನು ನಿರ್ಮಿಸಿಕೊಂಡು, ಶತ್ರುಘ್ನನೂ ಮುನಿವೃತ್ತಿಯಿಂದ ಅಲ್ಲೇ ವಾಸಿಸುತ್ತಾ, ಆ ರಾಮಪಾದುಕೆಗಳನ್ನು ಸಿಂಹಾಸನದ ಮೇಲಿಟ್ಟು ತಾವು ಮಾಡಿದ ರಾಜ್ಯಪಾಲನೆಯ ವರದಿಯನ್ನು ರಾಮನ ಪ್ರತಿನಿಧಿಗಳೆಂಬಂತಿದ್ದ, ಆ ಪಾದುಕೆಗಳಿಗೇ ನಿವೇದಿಸುತ್ತಾ, ಕಾಲಯಾಪನೆ ಮಾಡಿಕೊಂಡಿದ್ದನು.

ಭರತನು ಅಯೋಧ್ಯೆಯನ್ನು ಕುರಿತು ಹೊರಟು ನಡೆದಮೇಲೆ, ಶ್ರೀರಾಮಾದಿಗಳು ಕೆಲವು ದಿನಗಳವರೆಗೆ ಅಲ್ಲೇ ವಾಸಿಸಿದ್ದು, ತರುವಾಯ ಅತ್ರಿಮಹರ್ಷಿಯನ್ನು ಸಂದರ್ಶಿಸಿದರು. ಅತನ ಪತ್ನಿಯಾದ ಅನುಸೂಯಾ ದೇವಿಯು ಸಾಧ್ವೀರತ್ನವಾದ ಸೀತಾದೇವಿಯನ್ನು ಬಹುಬಗೆಯಿಂದ ಉಪಚರಿಸಿ, ಪತಿವ್ರತಾ ಧರ್ಮವನ್ನೂ ಇತರ ಹಲವು ಧರ್ಮ

ಸೂಕ್ಷ್ಮಗಳನ್ನು ಬೋಧಿಸಿದಳು. ತರುವಾಯ ರಾಮಾದಿಗಳು ಅತ್ರಿ ಮಹರ್ಷಿಯ ಅನುಮತಿಯನ್ನು ಪಡೆದು ದಂಡಕಾರಣ್ಯವನ್ನು ಕುರಿತು ಪ್ರಯಾಣಮಾಡಿದರು.

ದಂಡಕಾರಣ್ಯವನ್ನು ಪ್ರವೇಶಿಸಿದೊಡನೆಯೇ ಅಲ್ಲಿಯ ನಿವಾಸಿಗಳಾಗಿದ್ದ ಹಲವರು ಋಷಿಗಳು ಅವರನ್ನು ಸಂದರ್ಶಿಸಿ ಸ್ವಾಗತವನ್ನು ಬಯಿಸಿದರು. ಮುಂದೆ ಪ್ರಯಾಣಮಾಡುತ್ತಿರುವಲ್ಲಿ ವಿರಾಧನೆಂಬ ರಾಕ್ಷಸನು ಸೀತೆಯನ್ನು ಹೊತ್ತುಕೊಂಡೊಯ್ಯಲು ಶ್ರೀರಾಮಲಕ್ಷ್ಮಣರು ಅವನನ್ನು ವಧಿಸಿದರು. ತರುವಾಯ ಅವರು ಶರಭಂಗ ಸುತೀಕ್ಷ್ಣಾದಿ ಮಹರ್ಷಿಗಳ ಆಶ್ರಮಗಳನ್ನು ಸಂದರ್ಶಿಸಿ ಋಷಿಗಳಿಗೆ ಅಭಯಪ್ರದಾನಮಾಡಿ, ಅಗಸ್ತ್ಯಾಶ್ರಮವನ್ನು ಕುರಿತು ಹೊರಟರು. ಅಗಸ್ತ್ಯರು ರಾಕ್ಷಸರ ನಾಶಕ್ಕೆ ಅತಿಶಯ ಸಹಕಾರಿಗಳಾದ ವೈಷ್ಣವ ಧನುಸ್ಸನ್ನೂ ಬಾಣಬತ್ತಳಿಕೆಗಳನ್ನೂ ಶ್ರೀರಾಮನಿಗೆ ಕೊಟ್ಟು ಆಶೀರ್ವದಿಸಿದರು. ಅದನ್ನು ಪಡೆದು ರಾಮನು ಸೀತಾಲಕ್ಷ್ಮಣರೊಂದಿಗೆ ಪ್ರಯಾಣಮಾಡಿ ಪಂಚವಟಿಯನ್ನು ಸೇರಿ, ಅಲ್ಲಿ ಆಶ್ರಮವನ್ನು ನಿರ್ಮಿಸಿಕೊಂಡು ಹದಿಮೂರು ವರ್ಷಕಾಲ ಅಲ್ಲೇ ವಾಸಮಾಡಿಕೊಂಡಿದ್ದನು.

ಅಲ್ಲಿ ಅವರು ವಾಸಿಸಿದ್ದಾಗಲೇ ರಾವಣಾದಿ ರಾಕ್ಷಸ ಸಂಹಾರಕ್ಕೆ ಮೂಲಕಾರಣವೊದಗಿದುದು. ಒಂದಾನೊಂದು ದಿನ ಶೂರ್ಪನಖಿಯೆಂಬೊಬ್ಬ ಕಾಮರೂಪಿ ರಾಕ್ಷಸಿಯು ಆಶ್ರಮದ್ವಾರಕ್ಕೆ ಬಂದು ಶ್ರೀರಾಮನ ದಿವ್ಯಸುಂದರ ವಿಗ್ರಹವನ್ನು ಕಂಡು ಮೋಹಿಸಿ, ತನ್ನನ್ನು ವರಿಸೆಂದು ಯಾಚಿಸಿದಳು. ಶ್ರೀರಾಮನು ಅವಳನ್ನು ತನ್ನ ತಮ್ಮನೆಡೆಗೆ ಕಳುಹಿಸಿದನು. ಹೀಗೆ ಬಹುಹೊತ್ತು ಒಬ್ಬರು ಮತ್ತೊಬ್ಬರೆಡೆಗೆ ಕಳುಹಿಸುತ್ತಾ, ವಿನೋದಪಟ್ಟರು. ಕೊನೆಗೆ ಅವಳು ರೋಷದಿಂದ ಸೀತೆಯನ್ನು ಭಕ್ಷಿಸುತ್ತೇನೆಂದು ಮೇಲೆ ಬೀಳಬರಲು, ಲಕ್ಷ್ಮಣನು ಶ್ರೀರಾಮಾಜ್ಞೆಯಿಂದ ಅವಳ ಮೂಗುಕಿವಿಗಳನ್ನು ಛೇದಿಸಿ ಆಚೆಗೆ ನೂಕಿಬಿಟ್ಟನು. ಅವಳು ಭಯಂಕರ ಧ್ವನಿಯಿಂದ ರೋದಿಸುತ್ತಾ ಹೋಗಿ ತನ್ನ ಅಣ್ಣಂದಿರಾದ ಖರದೂಷಣ ತ್ರಿಶಿರರೆಂಬ ರಾಕ್ಷಸರಿಗೆ ತನ್ನ ದುರವಸ್ಥೆಯನ್ನು ತೋರಿಸಿ, ರಾಮಲಕ್ಷ್ಮಣರು ತನಗೆ ಮಾಡಿದ ಪರಾಭವವನ್ನು ಕುರಿತು ದೂರಿಕೊಂಡಳು. ಅವರು ಹಿಂದೆ

ಮುಂದೆ ನೋಡದೆ, ಅಗಾಧ ರಾಕ್ಷಸ ಸೈನ್ಯಸಮೇತರಾಗಿ ಶ್ರೀರಾಮನ ಮೇಲೆ ದಂಡೆತ್ತಿ ಬಂದರು. ಆಗ ಶ್ರೀರಾಮನು ಸೀತೆಯ ರಕ್ಷಣೆಗಾಗಿ ಆಶ್ರಮದಲ್ಲಿ ಲಕ್ಷ್ಮಣನನ್ನು ಇರಿಸಿ, ತಾನು ಏಕಾಕಿಯಾಗಿ, ಆ ರಾಕ್ಷಸರ ಮೇಲೆ ಕಾಣಿಸಿಕೊಂಡು ಭಯಂಕರ ಯುದ್ಧ ಮಾಡಿ, ಆ ಹದಿನಾಲ್ಕು ಸಾವಿರ ಮಂದಿ ರಾಕ್ಷಸರನ್ನೂ, ಖರದೂಷಣ ತ್ರಿಶಿರರೆಂಬ ಪ್ರಮುಖ ರಾಕ್ಷಸ ವೀರರನ್ನೂ ಯಮಾಲಯಕ್ಕೆ ನೂಕಿದನು. ಹೀಗೆ ಅಲ್ಲಿ ಸಹಾಯವು ತಪ್ಪಿದಬಳಿಕ ಶೂರ್ಪನಖಿಯು ಲಂಕಾಪಟ್ಟಣಕ್ಕೆ ಓಡಿ, ಸಭೆಯಲ್ಲಿದ್ದ ರಾವಣನೆದುರಿಗೆ ಗೋಳಿಟ್ಟು, ತನ್ನ ದುರವಸ್ಥೆಯನ್ನೂ, ಖರದೂಷಣಾದಿಗಳ ಸಂಹಾರ ವೃತ್ತಾಂತಗಳನ್ನೂ ಹೇಳಿಕೊಂಡಳು. ಆ ದುರುಳ ರಾಕ್ಷಸನು ಒಡನೆ ಹೊರಟು, ಮಾರೀಚನ ಸಹಾಯದಿಂದ ರಾಮನನ್ನು ವಂಚಿಸಿ, ಸೀತೆಯನ್ನು ಅಪಹರಿಸಬೇಕೆಂದು ರಾಮಾಶ್ರಮಕ್ಕೆ ಬಂದನು.

ಮಹಾ ಮಾಯಾವಿಯಾದ ಮಾರೀಚನು ದಿವ್ಯವಾದ ಒಂದು ಜಿಂಕೆಯ ಸ್ವರೂಪದಿಂದ ಸೀತೆಯ ಎದುರಿಗೆ ಸುಳಿದನು. ಸೀತೆಯು ಅದನ್ನು ಮೋಹಿಸಿ ತನಗೆ ಬೇಕೆಂದಳು. ರಾಮನು ಧನುರ್ಧಾರಿಯಾಗಿ ಅದನ್ನು ಹಿಡಿದು ತರಲು ಹೊರಟನು. ಲಕ್ಷ್ಮಣನು ಇದು ರಾಕ್ಷಸರ ಮಾಯೆಯೆಂದು ಹೇಳಿದ ಮಾತೂ ಲಕ್ಷ್ಯಗೆ ಬರಲಿಲ್ಲ. ಕೊನೆಗೆ ಬಹುದೂರದವರೆಗೆ ಅಲೆದು ಆಯಾಸಗೊಂಡು, ಕೋಪದಿಂದ ಶ್ರೀರಾಮನು ಒಂದು ಕ್ರೂರವಾದ ಬಾಣವನ್ನು ಪ್ರಯೋಗಿಸಿದನು. ಮೃಗರೂಪದಿಂದ ಇದ್ದ ಮಾರೀಚನು ಪ್ರಾಣ ಬಿಡುವಾಗ 'ಹಾ ಸೀತೆ-ಹಾ ಲಕ್ಷ್ಮಣಾ' ಎಂದು ಆರ್ತಸ್ವರದಿಂದ ಕೂಗಿಕೊಂಡನು. ಅದು ರಾಮನ ಧ್ವನಿಯೇ ಎಂದು ಗಾಬರಿಗೊಂಡ ಸೀತೆಯು, ರಾಮನನ್ನು ಹುಡುಕಿಕೊಂಡು ಬಾರೆಂದು ಲಕ್ಷ್ಮಣನನ್ನು ಕಳುಹಿಸಿದಳು. ಲಕ್ಷ್ಮಣನು ಹೊರಟುಹೋದ ಸ್ವಲ್ಪಹೊತ್ತಿನೊಳಗಾಗಿಯೇ, ರಾವಣನು ಯತಿವೇಷದಿಂದ ಬಂದು, ಸೀತೆಯನ್ನಪಹರಿಸಿ, ತನ್ನ ರಥದಲ್ಲಿಟ್ಟುಕೊಂಡು ಲಂಕೆಯ ಮಾರ್ಗವಾಗಿ ಪ್ರಯಾಣಮಾಡಿದನು. ಮಾರ್ಗದಲ್ಲಿ ಸೀತೆಯ ಕಾತರ ಧ್ವನಿಯನ್ನು ಕೇಳಿ ಜಟಾಯುವು ತಡೆಗಟ್ಟಲು, ರಾವಣನು ಅವನ ಪಕ್ಷಗಳನ್ನು ಛೇದಿಸಿ, ವೇಗವಾಗಿ ಪ್ರಯಾಣಮಾಡಿ ಲಂಕೆಯನ್ನು ಸೇರಿ, ಅಲ್ಲಿ ಸೀತೆಯನ್ನು ಅಶೋಕವನದಲ್ಲಿ ಸೆರೆಯಿಟ್ಟನು.

ಇತ್ತ ರಾಮನು ಆ ಮಾಯಾಮೃಗವನ್ನು ವಧಿಸಿ, ಹಿಂದಿರುಗಿ ಬರ ತಾ, ಏಕಾಂಗಿಯಾಗಿ ಬರುತ್ತಿದ್ದ ಲಕ್ಷ್ಮಣನನ್ನು ಕಂಡು ಗಾಬರಿಗೊಂಡು ಆಶ್ರಮಕ್ಕೆ ಬಂದು ಸೀತೆಯನ್ನು ಕಾಣದೆ ಕಲ್ಮರಗಳು ಕರಗುವಂತೆ ರೋದಿಸುತ್ತಾ, ಸುತ್ತುಮುತ್ತಿನ ಸಮಸ್ತ ಪ್ರದೇಶಗಳನ್ನೂ ಹುಡುಕುತ್ತಾ ಇಬ್ಬರೂ ಆಶ್ರಮವನ್ನು ಬಿಟ್ಟು ಹೊರಟರು. ಸಮೀಪದಲ್ಲೇ ಪಕ್ಷವಿಹೀನನಾಗಿ ಬಿದ್ದಿದ್ದ ಜಟಾಯುವು,—ರಾವಣನೆಂಬ ರಾಕ್ಷಸನು, ಅವಳನ್ನು ಎತ್ತಿಕೊಂಡೊಯ್ದ ವಿಚಾರವನ್ನು ತಿಳಿಸಿ ಪ್ರಾಣಬಿಟ್ಟನು. ಕೃತಜ್ಞನಾದ ರಾಮನು ಅವನಿಗೆ ಅಗ್ನಿಸಂಸ್ಕಾರಮಾಡಿ, ಮುಂದೆ ಪ್ರಯಾಣಮಾಡುತ್ತಾ, ಕಬಂಧನೆಂಬ ರಾಕ್ಷಸನಿಂದ ಬಾಧೆಯೊದಗಲು ಅವನನ್ನೂ ಸಂಹರಿಸಿ, ತರುವಾಯ ಶಬರಿಯೆಂಬ ಸಾಧ್ವಿಯನ್ನು ಕಂಡು ಆಕೆಯಿಂದ ಸತ್ಕಾರಹೊಂದಿದರು. ಶಬರಿಯು ಅವರಿಗೆ ಋಷ್ಯಮೂಕ ಪರ್ವತದಲ್ಲಿ ವಾಸವಾಗಿದ್ದ ಸುಗ್ರೀವನ ವೃತ್ತಾಂತವನ್ನೂ ತಿಳಿಸಿದಳು. ಶ್ರೀರಾಮ ಲಕ್ಷ್ಮಣರು, ಸುಗ್ರೀವನನ್ನು ಹುಡುಕುತ್ತಾ ಆ ಪ್ರಾಂತ ಸಂಚರಿಸುತ್ತಿದ್ದಾಗ, ಋಷ್ಯಮೂಕ ಪರ್ವತಾಗ್ರದಲ್ಲಿ, ತನ್ನ ಪರಿವಾರದೊಂದಿಗೆ ಕುಳಿತಿದ್ದ ಸುಗ್ರೀವನು, ಆ ರಾಜಪುತ್ರರನ್ನು ಕಂಡು, ಅವರನ್ನು ಕರೆತರುವುದಕ್ಕಾಗಿ ತನ್ನ ಮಂತ್ರಿಯಾದ ಆಂಜನೇಯನನ್ನು ಕಳುಹಿಸಿದನು. ಹನುಮಂತನು, ಬಾಲ ಬ್ರಹ್ಮಚಾರಿಯ ರೂಪಿನಿಂದ ಬಂದು ಅವರ ಪರಿಚಯವನ್ನು ಕೇಳಿ, ಪರಮಾನಂದಗೊಂಡು, ಅವರನ್ನು ಸುಗ್ರೀವನ ಬಳಿಗೆ ಕರೆತಂದನು. ಸುಗ್ರೀವನು, ಶ್ರೀರಾಮನಿಗೆ ನಮಸ್ಕರಿಸಿ, ಉಪಚರಿಸಿ ಉನ್ನತಾಸನದಲ್ಲಿ ಕೂರಿಸಿ, ತನಗೆ ತನ್ನ ಅಣ್ಣನಾದ ವಾಲಿಯಿಂದ ಉಂಟಾದ ಪರಾಭವದ ವೃತ್ತಾಂತವನ್ನೆಲ್ಲ ವಿಜ್ಞಾಪಿಸಿಕೊಂಡು ಸಹಾಯಮಾಡಬೇಕೆಂದು ಕೇಳಿಕೊಂಡನು. ರಾಮನು, ಖಂಡಿತವಾಗಿಯೂ ಆ ಧೂರ್ತನನ್ನು ನಿಗ್ರಹಿಸಿ, ಸಹಾಯಮಾಡುವೆನೆಂದು ವಾಗ್ದಾನಮಾಡಿದ ತರುವಾಯ ರಾವಣನಿಂದ ತನಗಾದ ಅಪಚಾರವನ್ನೂ ಸೀತಾಪಹಾರ ವೃತ್ತಾಂತವನ್ನೂ ತಿಳಿಸಿದನು. ಸುಗ್ರೀವನು ತನ್ನ ಸಮಸ್ತ ವಾನರಸೇನೆಯೊಂದಿಗೂ ಸೀತಾನ್ವೇಷಣೆಗಾಗಿಯೂ ರಾವಣ ವಧಕ್ಕಾಗಿಯೂ ಸಹಾಯಮಾಡುವುದಾಗಿ ವಾಗ್ದಾನಮಾಡಿದನು. ಹೀಗೆ ಪರಸ್ಪರರ ಕಷ್ಟಗಳಿಗೆ ಉಭಯರೂ ಸಹಾಯಕರಾಗುವಂತೆ

ವಾಗ್ದಾನ ಮಾಡಿಕೊಂಡು ತಮ್ಮತಮ್ಮ ಸ್ನೇಹದ ಭದ್ರತೆಗಾಗಿ ಅಗ್ನಿಯನ್ನು ಪ್ರತಿಷ್ಠಿಸಿ ಯಜ್ಞಪುರುಷ ಸಾಕ್ಷಿಯಾಗಿ ಉಭಯರೂ ಸ್ನೇಹಮಾಡಿಕೊಂಡರು. ಹೀಗೆ ಅನಾಯಾಸವಾಗಿ ಪ್ರಾಪ್ತವಾದ ಸುಗ್ರೀವ ಸಖ್ಯದಿಂದ ಮುಂದೆ ಸೀತಾನ್ವೇಷಣ ಕಾರ್ಯವು ನಡೆದು ತನ್ನ ಇಷ್ಟಾರ್ಥಸಿದ್ಧಿಯಾಗಬಹುದೆಂದು ಯೋಚಿಸಿ ರಾಮನು ಹರ್ಷಿಸಿದನು.



## ಅಧ್ಯಾಯ ೫. 'ರಾಮ-ರಾವಣ ಸಂಗ್ರಾಮ.'

ಶ್ರೀರಾಮನು ಧನುರ್ವಿದ್ಯಾಗ್ರೇಸರನೆಂಬ ವೃತ್ತಾಂತವು ಸುಗ್ರೀವನಿಗೆ ಪರಿಚಯವಿರಲಿಲ್ಲ. ವಾಲಿಯ ಅಗಾಧ ಪರಾಕ್ರಮವಾದರೋ ಅವನನ್ನು ಕ್ಷಣಕ್ಷಣಕ್ಕೂ ಭೀತಿಗೊಳಿಸುತ್ತಿದ್ದಿತು. ಶ್ರೀರಾಮನು ಅಂತಹ ಪರಾಕ್ರಮಶಾಲಿಯಾದ ವಾಲಿಯನ್ನು ಜಯಿಸಬಲ್ಲನೆ, ಎಂದು ಸುಗ್ರೀವನು ಸಂದೇಹಿಸಿದ್ದನು. ಶ್ರೀರಾಮನು, ಈ ಸೂಕ್ಷ್ಮವನ್ನು ಗ್ರಹಿಸಿ, ದುಂದುಭಿಯೆಂಬ ರಾಕ್ಷಸನ ಶರೀರವನ್ನು ತನ್ನ ಹೆಬ್ಬೆರಳಿನಿಂದಲೇ ಇನ್ನೂರು ಬಿಲ್ಲತೆಗಳ ದೂರಕ್ಕೆ ಚಿಮ್ಮಿ-ಸಪ್ತತಾಳ ವೃಕ್ಷಗಳನ್ನು ಒಂದೇ ಬಾಣದಿಂದ ಛೇದಿಸಿ, ತಾನು ವಾಲಿಯನ್ನು ಕೊಲ್ಲಲು ಸಮರ್ಥನೆಂಬ ವಿಷಯದಲ್ಲಿ ಆತನಿಗೆ ಧೈರ್ಯವನ್ನುಂಟು ಮಾಡಿದನು. ಹೀಗೆ ರಾಮನ ಬೆಂಬಲದಿಂದ ಧೈರ್ಯಗೊಂಡ ಸುಗ್ರೀವನು ಕಿಷ್ಕಿಂಧಾಧಿಪತಿಯಾದ ವಾಲಿಯ ಮೇಲೆ ಮಲ್ಲಯುದ್ಧಕ್ಕೆ ನಡೆದು ಅವನನ್ನು ಕೆಣಕಿದನು. ಹೀಗೆ ಒಂದೆರಡು ಸಾರಿ ಅವರಿಬ್ಬರಿಗೂ ಭಯಂಕರ ಯುದ್ಧನಡೆಯಿತು. ಎರಡನೆಯ ಬಾರಿ ನಡೆದ ಯುದ್ಧಕಾಲದಲ್ಲಿ ಶ್ರೀರಾಮನು ಒಂದು ತೀಕ್ಷ್ಣವಾದ ಬಾಣವನ್ನು ಪ್ರಯೋಗಿಸಿ, ವಾಲಿಯನ್ನು ಸಂಹಾರಮಾಡಿದನು.

ವಾಲಿಯ ಸಂಹಾರವಾದನಂತರ ಸುಗ್ರೀವನಿಗೆ ಕಿಷ್ಕಿಂಧಾ ರಾಜಧಾನಿಯಲ್ಲಿ ಪಟ್ಟಾಭಿಷೇಕವು ಬಹು ಸಂಭ್ರಮದಿಂದ ನೆರವೇರಿತು. ತರು

ವಾಯು ಅವನು, ವರ್ಷಋತುವು ಕಳೆಯುವವರೆಗೆ ತನ್ನ ರಾಜಧಾನಿಯಲ್ಲಿ ಪತ್ನೀಸಮೇತನಾಗಿ ಸುಖವಾಗಿ ವಾಸಿಸಿದ್ದನು. ಆ ನಾಲ್ಕು ತಿಂಗಳ ಕಾಲವೂ, ಶ್ರೀರಾಮನು ಋಷ್ಯಮೂಕ ಪರ್ವತದಲ್ಲಿ ವಾಸಿಸಿ, ಸೀತಾವಿರಹದಿಂದ ಬಹುಬಗೆಯಲ್ಲಿ ಕಳವಳಿಸಿ-ಎಂತೂ ಕಾಲಯಾಪನೆ ಮಾಡಿದನು. ತರುವಾಯ ಶರತ್ಕಾಲವು ಪ್ರಾಪ್ತವಾಗಲು, ಲಕ್ಷ್ಮಣನು ಶ್ರೀರಾಮಾಜ್ಞೆಯಿಂದ ಕಿಷ್ಕಿಂಧಾ ಪಟ್ಟಣಕ್ಕೆ ಬಂದು ಸುಗ್ರೀವನನ್ನು ಎಚ್ಚರಗೊಳಿಸಲು, ಆತನು ಆವರೆಗೆ ತಾನು ಶೇಖರಿಸಿದ್ದ ಅಪರಿಮಿತ ಕಪಿಸೇನೆಯೊಂದಿಗೆ ಬಂದು ಶ್ರೀರಾಮನ ಪಾದದರ್ಶನಮಾಡಿದನು. ಶ್ರೀರಾಮನು ಅವನನ್ನು ಆದರಿಸಿ, ಮುಂದೆ ಸೀತಾನ್ವೇಷಣಕ್ಕಾಗಿ ಬಹು ಶೀಘ್ರವಾಗಿಯೇ ಯತ್ನ ಮಾಡಬೇಕೆಂದು ಆಜ್ಞೆಮಾಡಿದನು.

ಒಡನೆ ಸುಗ್ರೀವಾಜ್ಞೆಯಿಂದ, ಪೂರ್ವಪಶ್ಚಿಮೋತ್ತರ ದಿಕ್ಕುಗಳಿಗೂ ದಕ್ಷಿಣದಿಕ್ಕಿಗೂ ಕಪಿಮುಖ್ಯರು ಹೊರಡಲು ನಿಯಮಿತರಾದರು. ಒಂದು ತಿಂಗಳೊಳಗಾಗಿ ಸೀತಾವೃತ್ತಾಂತವನ್ನು ತಂದು ತಿಳಿಸಬೇಕೆಂದು ರಾಜಾಜ್ಞೆಯಾಯಿತು. ಹಾಗೆ ಹೊರಟ ಆ ಕಪಿಶೇಖರರು ತಮ್ಮ ಪರಿವಾರಗಳೊಂದಿಗೆ ಪ್ರಯಾಣಮಾಡಿ, ತಮ್ಮತಮ್ಮ ದಿಕ್ಕುಗಳಲ್ಲಿ ಗೋಷ್ಪಾದದಷ್ಟು ಪ್ರದೇಶವನ್ನೂ ಬಿಡದೆ ಹುಡುಕಿ ಎಲ್ಲೂ ಸೀತೆಯನ್ನು ಕಾಣದೆ ಆ ಅವಧಿಕಾಲದೊಳಗಾಗಿ ಹಿಂದಿರುಗಿ ಬಂದುಬಿಟ್ಟರು. ಆದರೆ ದಕ್ಷಿಣದಿಕ್ಕಿಗೆ ಹೊರಟಿದ್ದ ಹನುಮ ಅಂಗದ ಜಾಂಬವಂತ ಮುಂತಾದವರು, ಎಲ್ಲಾ ಸ್ಥಳಗಳಲ್ಲೂ ಸುತ್ತಿ, ಸ್ವಯಂಪ್ರಭೆ ಎಂಬ ಯಕ್ಷಸ್ತ್ರೀಯ ಗುಹೆಯನ್ನು ಪ್ರವೇಶಿಸಿ, ಹೊರಕ್ಕೆ ಬರಲರಿಯದೆ, ವ್ಯಸನದಿಂದ ಆಕೆಗೆ ತಮ್ಮ ಪ್ರಯಾಣದ ಉದ್ದೇಶವನ್ನು ತಿಳಿಸಿ, ಗುಹೆಯಿಂದ ಹೊರಕ್ಕೆ ಮಾರ್ಗವನ್ನು ತೋರಿಸೆಂದು ಬೇಡಿಕೊಂಡರು. ಸ್ವಯಂಪ್ರಭೆಯು ಕನಿಕರದಿಂದ ಅವರನ್ನೆಲ್ಲರನ್ನೂ ತನ್ನ ಮಹಿಮೆಯಿಂದ ಕ್ಷಣಮಾತ್ರದಲ್ಲಿ ಹೊರಕ್ಕೆ ತಂದುಬಿಟ್ಟಳು. ಆ ವೇಳೆಗೆ ಸುಗ್ರೀವರಾಜನಿಂದ ಗೊತ್ತುಮಾಡಲ್ಪಟ್ಟಿದ್ದ ಒಂದು ತಿಂಗಳ ಅವಧಿಕಾಲದಲ್ಲಿ ಬಹುಭಾಗವು ಕಳೆದುಹೋಗಿದ್ದುದನ್ನು ಕಂಡು ಅವರು ಅತಿಶಯ ಗಾಬರಿಗೊಂಡು, ಇನ್ನು ಹಿಂದಕ್ಕೆ ಹೋಗಿ ಸೀತೆಯು ಸಿಕ್ಕಲಿಲ್ಲವೆಂದು ಹೇಳಿದರೂ, ಕಾಲತಾಮಸಕ್ಕಾಗಿ ಮರಣ

ದಂಡನೆಯೂ ತಪ್ಪುವುದಿಲ್ಲ. ಅಲ್ಲಿ ಅವಮಾನಪಟ್ಟು ಹಾಗೆ ಸಾಯುವುದ ಕ್ಕಿಂತಲೂ ಇಲ್ಲೇ ಪ್ರಾಯೋಪವೇಶವಮಾಡಿ ಪ್ರಾಣತ್ಯಾಗ ಮಾಡೋಣ ವೆಂದು ನಿಶ್ಚಯಿಸಿ, ಎಲ್ಲರೂ ಒಂದು ವಿಸ್ತಾರವಾದ ಬಂಡೆಯಮೇಲೆ ಬಿದ್ದುಕೊಂಡು ತಮ್ಮ ದುರ್ವಿಧಿಯನ್ನೂ, ರಾಮಾಗಮನದಿಂದ ತಮಗೆ ಪ್ರಾಪ್ತವಾದ ದುರವಸ್ಥೆಯನ್ನೂ, ಜಟಾಯು ಮುಂತಾದವರ ವಧೆಗೂ ರಾಮನೇ ಕಾರಣನಾದ ವೃತ್ತಾಂತವನ್ನೂ ಕುರಿತು ಹಲುಬಿಕೊಳ್ಳುತ್ತಿದ್ದರು. ಆ ಜಟಾಯು ವಧಾವೃತ್ತಾಂತವು, ಅಲ್ಲೇ ಗರಿಸೀದು ಬಿದ್ದಿದ್ದ ಸಂಪಾತಿಯೆಂಬ ಗೃಧ್ರರಾಜನ ಗಮನವನ್ನೆಳೆಯಿತು. ಅತನು ಅವರ ವೃತ್ತಾಂತವನ್ನು ತಿಳಿದು ಕನಿಕರಪಟ್ಟು, ಲಂಕಾಪಟ್ಟಣದ ಹೊರಗಿನ ಉಪವನದಲ್ಲಿ ಸೀತೆಯು ಅಶೋಕವನದಲ್ಲಿ ಸೆರೆಯಿರುವಳೆಂಬ ವೃತ್ತಾಂತ ವನ್ನು ತಿಳುಹಿಸಿ ಹೊರಟುಹೋದನು.

ಹೀಗೆ ಸೀತೆಯಿರುವ ಸ್ಥಳದ ಶೋಧವಾದುದಕ್ಕಾಗಿ ಎಲ್ಲರಿಗೂ ಪರ ಮಾನಂದವಾಯಿತು. ಆದರೆ, ಲಂಕೆಗೂ ತಾವಿದ್ದ ಸ್ಥಳಕ್ಕೂ ಮಧ್ಯೆ ಯಿದ್ದ ನೂರು ಯೋಜನ ಸಮುದ್ರವನ್ನು ದಾಟಿ ಅಲ್ಲಿಗೆ ಹೋಗಿ ಆಕೆಯ ವೃತ್ತಾಂತವನ್ನು ತಿಳಿದುಬರುವುದು ಹೇಗೆ ಎಂಬ ವಿಚಾರದಲ್ಲಿ ಅಗಾಧ ಯೋಚನೆಯುಂಟಾಯಿತು. ಕಪಿವೀರರಲ್ಲಿ ಒಬ್ಬೊಬ್ಬರೂ ತಮ್ಮತಮ್ಮ ಶಕ್ತಿಸಾಮರ್ಥ್ಯಗಳನ್ನು ಹೇಳಿಕೊಂಡರು. ಕೊನೆಗೆ ಮಹಾಮತಿಯಾದ ಅಂಜನೇಯನು ಆ ಕಾರ್ಯವನ್ನು ಸಾಧಿಸಿ ತಮಗೆಲ್ಲರಿಗೂ ಪ್ರಾಣದಾನ ಮಾಡಬೇಕೆಂದು ಎಲ್ಲರೂ ಪ್ರಾರ್ಥಿಸಿದರು. ಉತ್ಸಾಹಿತನಾದ ಆಂಜನೇ ಯನು ಒಡನೆ ಅದಕ್ಕೊಪ್ಪಿ, ಎಲ್ಲರೊಡನೆ ಆ ಮಹೇಂದ್ರ ಪರ್ವತಾಗ್ರ ಕ್ಕೇರಿ ತನ್ನ ಅಪೂರ್ವಯೋಗಸಿದ್ಧಿಯಿಂದ ಸಮುದ್ರಲಂಘನಕ್ಕೆ ಆವಶ್ಯಕ ವಾದಷ್ಟು ದೀರ್ಘವಾದ ದೇಹವನ್ನುತಳೆದು, ಶ್ವಾಸವನ್ನು ಬಂಧಿಸಿ, ಒಂದೇ ಹಾರಿಕೆಗೆ ಅಂತರಿಕ್ಷಮಾರ್ಗದಲ್ಲಿ ಪ್ರವೇಶಿಸಿ, ವಾಯುವೇಗದಿಂದ ಲಂಕಾ ಭಿಮುಖವಾಗಿ ಪ್ರಯಾಣಮಾಡಿದನು. ಮಾರ್ಗದಲ್ಲಿ ಅನೇಕ ವಿಘ್ನಗಳು ಪ್ರಾಪ್ತವಾದುವು. ಆದರೂ ಅವುಗಳನ್ನು ಸಡ್ಡೆಮಾಡದೆ ಆ ವೀರಾಗ್ರೇ ಸರನು ನಿರ್ಲಕ್ಷ್ಯದಿಂದ ಸಮುದ್ರಲಂಘನ ಕಾರ್ಯವನ್ನು ನೆರವೇರಿಸಿ, ಸಮುದ್ರದ ಆಚೆಯ ದಡದ ತ್ರಿಕೂಟಾಚಲದ ಸಮೀಪದಲ್ಲಿ ಇಳಿದನು.

ಆ ವೇಳೆಗೆ ಸಂಧ್ಯಾಕಾಲವಾಗಿದ್ದುದರಿಂದ, ಆ ನಿಶಾಚರರ ಪಟ್ಟಣವನ್ನು ಹೊಕ್ಕು ಸೀತಾನ್ವೇಷಣೆಮಾಡಲು ಅದೇ ತಕ್ಕ ವೇಳೆಯೆಂದು ಗ್ರಹಿಸಿ, ಕತ್ತಲಾಗುವುದನ್ನೇ ಕಾದಿದ್ದು, ನಗರದ್ವಾರದಲ್ಲಿ ಅಡ್ಡಗಿಸಿದ ಲಂಖಿಣಿಯೆಂಬ ರಾಕ್ಷಸಿಯನ್ನು ಕೊಂದು, ಹನುಮಂತನು ಪಟ್ಟಣವನ್ನು ಪ್ರವೇಶಿಸಿ, ಸೂಕ್ಷ್ಮರೂಪದಿಂದ ನಗರದ ಎಲ್ಲಾ ಭಾಗವನ್ನೂ ಹುಡುಕಿದನು. ಕುಂಭಕರ್ಣ, ಪ್ರಹಸ್ತ, ಇಂದ್ರಜಿತು ಮುಂತಾದ ರಾಕ್ಷಸವೀರರ ಮನೆಗಳೆಲ್ಲಾ ಹುಡುಕಿದ್ದಾಯಿತು. ರಾವಣನ ಮೂಲಬಲವಿದ್ದ ಪ್ರದೇಶದಲ್ಲಿ ನೋಡಿದನು. ತರುವಾಯ ರಾವಣನ ಅಂತಃಪುರದಲ್ಲೂ ಹುಡುಕಿ ಅಲ್ಲೂ ಸೀತೆಯನ್ನು ಕಾಣದೆ, ಮಹಾ ವ್ಯಸನಾಕ್ರಾಂತನಾಗಿ ಮುಂದೇನು ಮಾಡಬೇಕೆಂದು ತೋರದೆ ಕುಳಿತು ಯೋಚಿಸುತ್ತಿರಲು, ಅಶೋಕವನವು ದೃಷ್ಟಿಗೋಚರವಾಯಿತು. ಒಡನೆ, ಅಲ್ಲಿಗೆ ನೆಗೆದು, ಶಿಂಶುಪಾವೃಕ್ಷದ ಕೆಳಭಾಗದಲ್ಲಿ ಕುಳಿತಿದ್ದ ಮಂಗಳಾಂಗಿಯಾದ ಸೀತಾಮಾತೆಯನ್ನು ಕಂಡನು.

ಆಂಜನೇಯನು ಆಕೆಯೇ ರಾಮಭಾರ್ಯೆಯೆಂದು ತಿಳಿದುಕೊಂಡನಾದರೂ, ಸೀತೆಯು ಹನುಮಂತನು ರಾಮದೂತನೆಂಬುದನ್ನು ಒಡನೆ ನಂಬಲಿಲ್ಲ. ಆಗ ಅಂಜನಾಸುತನು ಆಕೆಗೆ ಶ್ರೀರಾಮನು ತನ್ನಲ್ಲಿ ರಹಸ್ಯವಾಗಿ ಹೇಳಿದ್ದ ಕೆಲವು ಸಂಗತಿಗಳನ್ನುಹೇಳಿ, ಶ್ರೀರಾಮ ಮುದ್ರಿಕೆಯುಳ್ಳ ಉಂಗುರವನ್ನೂ ಕೊಡಲು, ಆತನು ತನ್ನ ಪ್ರಾಣಕಾಂತನ ಬಳಿಯಿಂದ ಬಂದವನೇ ಎಂಬ ಸಂಗತಿಯು ಆಕೆಗೆ ನಿಶ್ಚಯವಾಯಿತು. ಒಡನೆ ತನ್ನ ಕಷ್ಟಗಳನ್ನೆಲ್ಲ ಆತನಲ್ಲಿ ಹೇಳಿಕೊಂಡು, ಶೀಘ್ರದಲ್ಲೇ ಬಂದು ತನ್ನನ್ನು ಶ್ರೀರಾಮನು ಕರೆದೊಯ್ಯುವಂತೆ ಮಾಡಬೇಕೆಂದು ಅಂಗಲಾಚಿದಳು. ಆಂಜನೇಯನು ಭಯಪಡದೆ ಇರೆಂದು ಆಕೆಗೆ ಬಹುಬಗೆಯಿಂದ ಧೈರ್ಯಹೇಳಿ, ತನ್ನನ್ನು ಹಿಡಿಸಲು ಬಂದ ವನಪಾಲಕರನ್ನುಕೊಂದು ಅಶೋಕವನವನ್ನು ಧ್ವಂಸಮಾಡಿದನು. ಅದನ್ನು ತಿಳಿದು ಅಕ್ಷಯಕುಮಾರನೇ ಮುಂತಾದ ರಾವಣಪುತ್ರರು ಅವನಮೇಲೆ ಯುದ್ಧಕ್ಕೆ ಬಂದರು. ಅಸಹಾಯಶೂರನಾದ ಆಂಜನೇಯನು ಎಲ್ಲರನ್ನೂ ಯಮಸದನಕ್ಕಟ್ಟಿ ವಿಜೃಂಭಿಸಿದನು. ಕೊನೆಗೆ ಮಹಾವೀರನಾದ ಇಂದ್ರಜಿತುವು, ಆತನನ್ನು ಬ್ರಹ್ಮಾಸ್ತ್ರದಿಂದ

ಬಂಧಿಸಿ, ಸೆರೆಹಿಡಿದು ರಾವಣ ಸಭೆಗೆ ಕೊಂಡೊಯ್ಯಲು, ಧೀರಾಗ್ರೇಸರನಾದ ಆ ರಾಮದೂತನು, ರಾವಣನಿಗೆ ಅನೇಕಬಗೆಯಿಂದ ನೀತಿಬೋಧೆ ಮಾಡಿ, ಸೀತೆಯನ್ನು ಕೊಂಡೊಯ್ದು ಶ್ರೀರಾಮನ ಸನ್ನಿಧಿಯಲ್ಲೊಪ್ಪಿಸಿ ಬದುಕೆಂದು ಹಿತವಾಕ್ಯವನ್ನೂ ಹೇಳಿದನು. ಅದು ಆ ದುರುಳನ ಮನಸ್ಸಿಗೆ ವಿಷವಾಗಿ ತೋರಲು, ರಾವಣನು ರೋಷಾರುಣಲೋಚನನಾಗಿ, ಆ ಕಪಿಯ ಬಾಲಕ್ಕೆ ಬಟ್ಟೆಯನ್ನು ಸುತ್ತಿ ಎಣ್ಣೆಯಲ್ಲಿ ಎದ್ದಿ ಬೆಂಕಿತೋರಿಸಿ ಸುಟ್ಟು ಬಿಡಿರೆಂದು ಆಜ್ಞಾಪಿಸಿದನು. ಮಹಾಧೂರ್ತರಾದ ರಾಕ್ಷಸರು ಹಾಗೆಯೇ ಮಾಡಿದರು. ಆಂಜನೇಯನಾದರೋ ಅದಕ್ಕಾಗಿ ಲೇಶಮಾತ್ರವೂ ಅಂಜದೆ, ಆ ತನ್ನ ಬಾಲದಲ್ಲಿದ್ದ ಕಿಚ್ಚಿಯಿಂದಲೇ ಲಂಕಾಪಟ್ಟಣದ ಎಲ್ಲಾ ಗೃಹಗಳಿಗೂ ಅಗ್ನಿಪ್ರವೇಶಮಾಡಿಸಿ ಧ್ವಂಸಗೊಳಿಸಿ, ಮತ್ತೊಮ್ಮೆ ಸೀತೆಯನ್ನು ಸಂದರ್ಶಿಸಿ, ಆಕೆಯಿಂದ ಚೂಡಾಮಣಿಯನ್ನು ಗುರುತಿಗಾಗಿ ತೆಗೆದುಕೊಂಡು, ಪುನಃ ಸಮುದ್ರಲಂಘನಮಾಡಿ, ಜಾಂಬವಾದಿಗಳಿಗೆ ತನ್ನ ವಿಜಯವಾರ್ತೆಯನ್ನು ತಿಳಿಸಿದನು. ತರುವಾಯ ಎಲ್ಲರೂ ಮಹದಾನಂದದಿಂದ ಶ್ರೀರಾಮಾದಿಗಳಲ್ಲಿಗೆ ಪ್ರಯಾಣಮಾಡಿದರು. ಆಂಜನೇಯನು ಭಯಜರಿತ ಭಕ್ತಿಯಿಂದ ಸೀತಾಮಾತೆಯಿತ್ತ ಚೂಡಾರತ್ನವನ್ನು ಶ್ರೀರಾಮನಿಗೆ ಸಮರ್ಪಿಸಿ ಆಕೆಯ ಕುಶಲವಾರ್ತೆಯನ್ನೂ ತಿಳಿಸಿ ಪರಮ ಸಂತೋಷವನ್ನುಂಟು ಮಾಡಿದನು ಶ್ರೀರಾಮನು, ತನಗೆ ತನ್ನ ಪ್ರಾಣನಾಯಿಕೆಯ ವೃತ್ತಾಂತವನ್ನು ತಿಳುಹಿಸಿ ಪ್ರಾಣದಾನಮಾಡಿದ ಆತನನ್ನು ಕೃತಜ್ಞತೆಯಿಂದ ವಂದಿಸಿ-ಆಲಿಂಗಿಸಿ, ಉಚಿತವಚನಗಳಿಂದ ಆದರಿಸಿದನು.

ತನ್ನ ಪ್ರಿಯಪತ್ನಿ ಸೀತೆಯು ರಾಕ್ಷಸನಿಂದ ಅಪಹೃತಳಾಗಿದ್ದರೂ ಜೀವಂತಳಾಗಿರುವಳಲ್ಲಾ ಎಂಬುವ ಸಂಗತಿಯು ರಾಮನಿಗೆ ಅತಿಶಯ ಸಂತೋಷಪ್ರದವಾಗಿದ್ದಿತು. ರಾವಣನನ್ನು ಯುದ್ಧಮುಖದಿಂದ ಜಯಿಸಿ ಸೀತೆಯನ್ನು ಸೆರೆಯಿಂದ ಬಿಡಿಸಬಹುದೆಂಬ ಧೈರ್ಯವಿದ್ದರೂ, ವಿಸ್ತಾರವಾದ ಆ ಸಮುದ್ರವನ್ನು ದಾಟಿ, ಅಸಂಖ್ಯ-ವಾನರಸೇನೆಯು ಲಂಕೆಯನ್ನು ಸೇರುವ ಪರಿಯೇನೆಂಬುದು ತೋರಲಿಲ್ಲ ಆದರೂ ಸಮುದ್ರತೀರವನ್ನು ಸೇರಿ ತರುವಾಯ ಯೋಚಿಸಬಹುದೆಂದುಕೊಂಡನು. ಶ್ರೀರಾಮಾಜ್ಞೆಯಿಂದ, ಸುಗ್ರೀವನು ಅಗಾಧವಾದ ವಾನರಸೇನೆಯನ್ನು ದಂಡಯಾತ್ರೆ

ಗಾಗಿ ಪ್ರಯಾಣಮಾಡಿಸಿದನು. ಹನುಮಂತನ ಭುಜದಮೇಲೆ ಶ್ರೀರಾಮನೂ, ಅಂಗದನ ಭುಜದಮೇಲೆ ಲಕ್ಷ್ಮಣನೂ ಕುಳಿತು ಪ್ರಯಾಣ ಮಾಡಿ, ಸಮುದ್ರತೀರವನ್ನು ಸೇರಿದರು. ಅಲ್ಲಿ ನೀಲನು ಸೇನೆಗಳನ್ನು ಯುಕ್ತರೀತಿಯಲ್ಲಿ ನಿಲ್ಲಿಸಿದನು.

ಅತ್ತ ರಾವಣನು, ಆಂಜನೇಯನಿಂದ ಲಂಕಾನಗರಿಯಲ್ಲಿ ಉಂಟಾದ ಹಾವಳಿಯನ್ನು ಕಂಡು, ರಾಮಸೇನೆಯ ಒಬ್ಬ ಕಪಿಮಾತ್ರನು, ತನ್ನ ಸಮಕ್ಷಮದಲ್ಲೇ ತನ್ನ ರಾಜಧಾನಿಯನ್ನು ಅಂತಹ ದುರವಸ್ಥೆಗೆ ತಂದಿರುವಲ್ಲಿ ಮಿಕ್ಕ ಕಪಿಗಳು ಇನ್ನೆಂತಹ ಪರಾಕ್ರಮಿಗಳೋ, ಅವರೆಲ್ಲರೊಂದಿಗೆ ಶ್ರೀರಾಮನೇ ದಂಡೆತ್ತಿಬಂದರೆ, ಏನು ವಿಪತ್ತು ಉಂಟಾಗುವುದೋ ಎಂದು ಚಿಂತಿಸುತ್ತಾ, ಮುಂದೆ ಮಾರ್ಗವೇನೆಂದು ತನ್ನ ಮಂತ್ರಿಗಳೊಡನೆ ಯೋಚಿಸಿದನು. ಪ್ರಹಸ್ತ, ವಜ್ರದಂಷ್ಟ್ರ, ನಿಕುಂಭ, ದುರ್ಮುಖರೆಂಬ ಆ ಮಂತ್ರಿಗಳು, ಇಂದ್ರಾದಿ ಲೋಕಪಾಲಕರನ್ನೇ ಸದೆಬಡೆದ ರಾಕ್ಷಸ ಚಕ್ರವರ್ತಿಯು, ಆ ಹುಲುಮಾನವನಿಗೂ ಕಾಡುಕಪಿಗಳಿಗೂ ಬೆದರಲೇಕೆಂದು, ರಾವಣನ ಪರಾಕ್ರಮವನ್ನೇ ಹೊಗಳಿ ವಿಶೇಷವಾಗಿ ಮುಖಸ್ತುತಿಮಾಡಿದರು. ಅದು ನ್ಯಾಯಶೀಲನಾದ ವಿಭೀಷಣನಿಗೆ ಸಹನೆಯಾಗಲಿಲ್ಲ. ಆತನು ರಾವಣನನ್ನು ಆತನ ಗೃಹದಲ್ಲೇ ಸಂಧಿಸಿ, ದುರುಳರ ಮುಖಸ್ತುತಿಯ ಮಾತುಗಳಿಗೆ ಮರುಳಾಗಿ—ರಾಕ್ಷಸಕುಲದ ಸೌಭಾಗ್ಯಲಕ್ಷ್ಮಿಯ ಮಾಂಗಲ್ಯವನ್ನು ಮಣ್ಣುಪಾಲು ಮಾಡದೆ, ಸೀತೆಯನ್ನು ರಾಮನಿಗೊಪ್ಪಿಸಿ ಬದುಕೆಂದು ಹಲವುಬಗೆಯಿಂದ ಬೋಧಿಸಿದನು. ಅದನ್ನು ಕೇಳಿದಾಗ ರಾವಣನಿಗೆ, ಶ್ರೀರಾಮನ ಅಗಾಧ ಪರಾಕ್ರಮವೂ ತನ್ನ ಅಶಕ್ತತೆಯೂ ಸ್ಪಷ್ಟವಾಗಿ ತೋರಿಬಂದು ಪುನಃ ಸಭೆಯನ್ನು ನೆರೆಯಿಸಿ ಮಂತ್ರಾಲೋಚನೆ ಮಾಡಿದನು. ಆಗ ಇಂದ್ರಜಿತುವು, ತಾನೊಬ್ಬನೇ ಕಪಿಸೇನೆಯನ್ನೆಲ್ಲಾ ನಿರ್ಮೂಲಮಾಡಿ, ರಾಮಲಕ್ಷ್ಮಣರನ್ನು ವಧಿಸಲು ಶಕ್ತನಿರುವನೆಂದು ತನ್ನ ಪರಾಕ್ರಮವನ್ನು ಹೇಳಿಕೊಂಡನು. ಮಹಾಪಾರ್ಶ್ವನೆಂಬ ದುರುಳ ದೈತ್ಯನಾದರೋ, ಸೀತೆಯನ್ನು ಬಲಾತ್ಕಾರದಿಂದ ಸ್ವಾಧೀನಪಡಿಸಿಕೊಂಡು ರಮಿಸೆಂದು ಸಲಹೆಕೊಟ್ಟನು. ವಿಭೀಷಣನು, ಆ ದುಷ್ಟರ ದುರ್ಬೋಧನೆಗೂ ಆಡಂಬರದ ಮಾತಿಗೂ ಮೋಸಹೋಗಿ ಕೆಡಬೇಡವೆಂದು

ಪುನಃ ರಾವಣನಿಗೆ ಬಹುಪರಿಯಿಂದ ಬೋಧಿಸಿದನು. ಆದರೆ ಮೃತ್ಯುವು ಹೆಡೆತಲೆಯಲ್ಲಿದ್ದು ನಲಿಯುತ್ತಿದ್ದುದರಿಂದ ರಾವಣನಿಗೆ ಅವನ ಹಿತಬೋದನೆಗಳು ರುಚಿಸಲಿಲ್ಲ. ಮಾತ್ರವಲ್ಲ-ಅವನನ್ನು ಒದ್ದು ಭಂಗಿಸಿ ದುರ್ವಾಕ್ಯಗಳಿಂದ ಅವಮಾನಗೊಳಿಸಿ, ಆ ಸ್ಥಾನದಿಂದ ಆಚೆಗೆ ನೂಕಿಸಿಬಿಟ್ಟನು. ವಿಭೀಷಣನಾದರೋ, ಇನ್ನು ರಾಕ್ಷಸವಂಶವು ನಾಶವಾಗುವುದು ನಿಶ್ಚಯವೆಂದುಕೊಂಡು, ತನ್ನ ಮಂತ್ರಿಗಳೊಡನೆ ಹೊರಟು, ಅಂತರಿಕ್ಷಮಾರ್ಗದಲ್ಲಿ ನಿಂತು-'ಎಲೋ ದುರಾತ್ಮಕನೇ, ಇಂದಲ್ಲ,—ಇಂದು ಸ್ವಾರ್ಥಸಾಧಕರಾದ ಧೂರ್ತರ ಮಾತುಗಳೇ ನಿನಗೆ ಹಿತಕರವೆಂದು ತೋರುತ್ತಿವೆ. ಆದರೆ, ಎಂದು ಕಪಿಬಲವು ಬಂದು ಈ ಲಂಕೆಯನ್ನು ಮುತ್ತಿ, ರಾಕ್ಷಸ ಸೈನ್ಯವನ್ನು ಲಕ್ಷಲಕ್ಷ ಸಂಖ್ಯೆಯಿಂದ ವಧಿಸುವುದೋ, ಎಂದು ಆ ರಘುಕುಲತಿಲಕನ ನಿಶಿತಬಾಣಗಳು ನಿನ್ನ ಮೂಲಬಲವನ್ನೂ ನಿರ್ಮೂಲಗೊಳಿಸಿ, ನಿನ್ನ ತಲೆಗಳನ್ನು ತರಿಯಲು ವಿದ್ಯುದ್ವೇಗದಿಂದ ಬರುವುವೋ, ಅಂದು ನಾನು ಹೇಳಿದ ಹಿತವಾಕ್ಯಗಳನ್ನೂ, ನನ್ನನ್ನೂ ನೆನೆದುಕೋ—!'. ಎಂದು ನುಡಿದು, ಶ್ರೀರಾಮನಲ್ಲಿಗೆ ಬಂದು—'ಪ್ರಭೋ ರಾಮಚಂದ್ರಾ, ನಾನು ರಾವಣನ ತಮ್ಮನು. ವಿಭೀಷಣ ನಾಮಕನು ನಿನಗೆ ಶರಣಾಗತನಾಗಿ ಬಂದಿದ್ದೇನೆ. ನನ್ನನ್ನು ಉದ್ಧರಿಸು' ಎಂದು ಪ್ರಾರ್ಥಿಸಿದನು. 'ಅವನು ಶತ್ರುಪಕ್ಷದವನು, ಅವನಿಗೆ ಆಶ್ರಯ ಕೊಡಕೂಡದು' ಎಂದು ಎಲ್ಲರೂ ಬೇಡಿಕೊಂಡರು. ಆಗ ಆಂಜನೇಯನು, ವಿಭೀಷಣನ ಸದ್ಗುಣಗಳನ್ನು ಹೇಳಿ, ಅವನನ್ನು ರಕ್ಷಣೆ ಮಾಡಬಹುದೆಂದು ರಾಮನಿಗೆ ಸಲಹೆ ಇತ್ತನು. ಶ್ರೀರಾಮನಾದರೋ-'ಶರಣಾಗತ ರಕ್ಷಣೆಯು ರಘುಕುಲದ ಅರಸರಿಗೆ ಸ್ವಾಭಾವಿಕ ಕರ್ತವ್ಯವೇ ಆಗಿದೆ. ಇಂದು ವಿಭೀಷಣನಲ್ಲ-ಮಹಾಪರಾಧಿಯಾದ ರಾವಣನೇ ಬಂದು ಶರಣಾಗತನಾದರೆ ಅವನನ್ನೂ ರಕ್ಷಿಸತಕ್ಕುದೇ ನನ್ನ ನಿಶ್ಚಯವು'ಎಂದು ನುಡಿದು ವಿಭೀಷಣನನ್ನು ಬರಮಾಡಿಕೊಂಡು ಆದರಿಸಿ, ಆತನಿಗೆ ಅಂದೇ ಲಂಕಾರಾಜ್ಯದ ಪಟ್ಟಾಭಿಷೇಕವನ್ನು ಮಾಡಿಸಿಬಿಟ್ಟನು. ಕಪಿಕಟಕವು ಮಹದಾನಂದದಿಂದ ಕೋಲಾಹಲಮಾಡಿ ನಲಿಯಿತು.

ರಾವಣನು ಅಗಾಧವಾದ ಕಪಿಸೈನ್ಯವನ್ನು ನೋಡಿ, ಒಳಗೊಳಗೇ ಗಾಬರಿಗೊಂಡು ಶಾರ್ದೂಲ ಶುಕಸಾರಣಾದಿ ಗುಪ್ತಚಾರರ ಮೂಲಕ

ಕಪಿಸೇನೆಯ ಬಲಪರಾಕ್ರಮಗಳ ವಿಚಾರವನ್ನು ಕೇಳಿ, ಸುಗ್ರೀವ ರಾಮರಲ್ಲಿ ಭೇದವನ್ನು ಹುಟ್ಟಿಸಿ ಅವರನ್ನು ಬೇರ್ಪಡಿಸಬೇಕೆಂದು ಪ್ರಯತ್ನಿಸಿದನು. ಆದರೆ ಅದು ಸಾಗಲಿಲ್ಲ. ವಿಭೀಷಣನೂ ಇತರ ಕಪಿಶೇಖರರೂ, ಆ ಗುಪ್ತಚಾರರನ್ನು ಹಿಡಿತಂದು ರಾಮನ ಸಮ್ಮುಖದಲ್ಲಿ ನಿಲ್ಲಿಸಿದರು. ಶ್ರೀರಾಮನು ಅವರಿಗೆ ಅಗಾಧವಾದ ತಮ್ಮ ಕಪಿಸೇನೆಯನ್ನೆಲ್ಲಾ ತೋರಿಸಿ, ತಮ್ಮ ಒಡೆಯನಲ್ಲಿಗೆ ಕಳುಹಿಸಿರೆಂದು ಆಜ್ಞಾಪಿಸಿಬಿಟ್ಟನು. ಅವರು ಲಂಕೆಗೆ ಹೋಗಿ, ಕಪಿಸೇನೆಯ ನಿಶ್ಚಯವಾದ ಪ್ರಮಾಣವನ್ನೂ, ಶ್ರೀರಾಮನ ಪರಾಕ್ರಮ ಔದಾರ್ಯಗಳನ್ನೂ ರಾವಣನಲ್ಲಿ ಹೊಗಳಿದರು. ಅದನ್ನು ಕೇಳಿದ ಅವನು ಮತ್ತಷ್ಟು ಗಾಬರಿಯಾಗಿ ಚಿಂತಾಕ್ರಾಂತನಾದನು.

ಇತ್ತ, ಕಪಿಸೇನೆಯು ಸಮುದ್ರವನ್ನು ದಾಟುವ ಮಾರ್ಗವನ್ನು ಕುರಿತು ವಿಚಾರ ನಡೆಯಿತು. ಶ್ರೀರಾಮನು ದರ್ಭಶಯನದಲ್ಲಿ ಮಲಗಿ ಮೂರು ರಾತ್ರಿಗಳವರೆಗೆ ತನಗೆ ಮಾರ್ಗಕೊಡೆಂದು ಸಮುದ್ರವನ್ನು ಯಾಚಿಸಿದನು. ಸಮುದ್ರನು ಪ್ರಸನ್ನನಾಗಲಿಲ್ಲ. ಅದನ್ನುಕಂಡು ಕುಪಿತನಾಗಿ ಬ್ರಹ್ಮಾಸ್ತ್ರವನ್ನು ಹೂಡಿ ಆ ಧೂರ್ತ ಸಮುದ್ರನನ್ನು ಶೋಷಿಸಿಬಿಡುತ್ತೇನೆಂದು ವಿಜೃಂಭಿಸಲು, ಸಮುದ್ರರಾಜನು ಭಯಗೊಂಡು ಶರಣಾಗತನಾಗಿ, ನಳನಿಂದ ಸೇತುವೆಯನ್ನು ಕಟ್ಟಿಸಿ ಅದರಮೇಲೆ ಸೈನ್ಯವನ್ನು ನಡೆಯಿಸಿಕೊಂಡು ಹೋಗಬಹುದೆಂದು ಪ್ರಾರ್ಥಿಸಿದನು. ಶ್ರೀರಾಮನು ಸಮುದ್ರಕ್ಕೆ ಸೇತುವನ್ನು ಕಟ್ಟಿಸಿದ್ಧಗೊಳಿಸೆಂದು ನಳನೆಂಬ ಕಪಿಶೇಖರನಿಗೆ ಆಜ್ಞಾಪಿಸಿದನು. ಒಡನೆ ಸಮಸ್ತ ಕಪಿಸೇನೆಯೂ ಕಲ್ಲುಮರ ಗುಡ್ಡ ಬೆಟ್ಟಗಳನ್ನು ಹೊತ್ತುತಂದು ಸೇತುವಿಗಾಗಿ ನಳನಿಗೆ ಸಹಾಯಕರಾದರು. ನಳನು, ಅವುಗಳನ್ನು ಉಪಯೋಗಿಸಿ, ಬಹು ಶೀಘ್ರಕಾಲದಲ್ಲೇ ಅಗಾಧವಾದ ಸೇತುವೆಯನ್ನು ನಿರ್ಮಾಣ ಮಾಡಿದನು. ಸಮಸ್ತ ಕಪಿಸೇನೆಯೂ ಶ್ರೀರಾಮಲಕ್ಷ್ಮಣರೂ ಅದರಮೇಲೆ ಪ್ರಯಾಣ ಮಾಡಿಕೊಂಡು ಸುವೇಲಾದ್ರಿಯ ಸಮೀಪದಲ್ಲಿ ಬೀಡುಬಿಟ್ಟರು.

ರಾಮನು ಸುವೇಲಾದ್ರಿಯನ್ನೇರಿ ಆ ಲಂಕಾನಗರಿಯನ್ನು ಸಂದರ್ಶಿಸಿ, ಅದನ್ನು ಮುತ್ತುವ ಗುಪ್ತ ವಿಧಾನಗಳನ್ನು ವಾನರಸೇನೆಗೆ ತಿಳಿಸಿದನು. ವಾನರ ಮುಖ್ಯರು ತಮ್ಮ ಸೇನಾಸಮೇತರಾಗಿ ಹೊರಟು ಸಮಸ್ತ ದಿಕ್ಕುಗ

ಳಿಂದಲೂ ಲಂಕೆಯನ್ನು ಮುತ್ತಿದರು. ರಾಕ್ಷಸ ವಾನರರಿಗೆ ಯುದ್ಧಾರಂಭವಾಯಿತು. ಯುದ್ಧವು ರಾತ್ರಿಹಗಲುಗಳೆನ್ನದೆ ನಡೆಯಿತು. ಮಹಾಮಾಯಾವಿಯಾದ ಇಂದ್ರಜಿತುವು, ನಾಗಪಾಶದಿಂದ ಪ್ರಾರಂಭಕ್ಕೇ ರಾಮಲಕ್ಷ್ಮಣರನ್ನು ಬಂಧಿಸಿಬಿಟ್ಟನು. ಸಮಸ್ತ ಕಪಿಸೇನೆಯೂ ದಿಕ್ಕುತೋರದೆ ರೋದಿಸತೊಡಗಿತು. ಅಷ್ಟರಲ್ಲಿ ಗರುತ್ಮಂತನು ಅಪ್ರಾಂತ ಹಾರಬಂದು ಆ ನಾಗಪಾಶವನ್ನು ಪರಿಹರಿಸಿಹೋದನು. ಧೂಮ್ರಾಕ್ಷ, ವಜ್ರದಂಷ್ಟ್ರ ಅಕಂಪನ, ಪ್ರಹಸ್ತ ಮುಂತಾದ ರಾಕ್ಷಸ ಸೇನಾಪತಿಗಳು, ಅಂಗದ ಹನುಮಂತ ನೀಲ ಮುಂತಾದ ವಾನರ ವೀರರಿಂದ ಹತರಾದರು. ಪ್ರಹಸ್ತಾದಿರಾಕ್ಷಸವೀರರ ಮರಣವನ್ನು ಕೇಳಿ ರಾವಣನು ಯುದ್ಧಸನ್ನದ್ಧನಾಗಿ ಹೊರಟು, ಸುಗ್ರೀವಾದಿ ವಾನರವೀರರನ್ನು ಭಂಗಿಸಿ, ಮಹಾ ಶಕ್ತ್ಯಾಯುಧದಿಂದ ಲಕ್ಷ್ಮಣನನ್ನು ಘಾತಿಸಿದನು. ಸುಷೇಣ ಜಾಂಬವಾದಿಗಳ ಚಿಕಿತ್ಸೆಯಿಂದ ಲಕ್ಷ್ಮಣನು ಚೇತರಿಸಿಕೊಂಡನು. ಲಕ್ಷ್ಮಣನಿಗೆ ಹೀಗೆ ಎಚ್ಚರವಾಗಲು ತರುವಾಯ ಶ್ರೀರಾಮನು ಮಹಾರೋಷಯುಕ್ತನಾಗಿ, ರಾವಣನ ಮೇಲೆ ಕಾಣಿಸಿಕೊಂಡು ಭಯಂಕರ ಯುದ್ಧಕ್ಕೆ ಪ್ರಾರಂಭಿಸಿದನು. ರಾಮ ರಾವಣರಿಗೆ ಲೋಕಭಯಂಕರವಾದ ಸಂಗ್ರಾಮವು ಪ್ರಾರಂಭಿಸಿತು.



**ಅಧ್ಯಾಯ ೬** **'ಪಟ್ಟಾಭಿಷೇಕ ಮಹೋತ್ಸವ'**

ಮಹಾ ತೀಕ್ಷ್ಣಗಳಾದ ರಾಮಬಾಣಗಳು ರಾವಣನ ಕಿರೀಟವನ್ನು ನೆಲಕ್ಕುರುಳಿಸಿ, ಅವನ ಮೈಯ್ಯಲ್ಲಿ ಕೆನ್ನೀರನ್ನು ಹೊರಡಿಸಿ ಬಹು ಬಾಧೆಗೊಳಿಸಿದುವು. ರಾಮಬಾಣಗಳ ಆ ಹೊಡೆತವನ್ನು ಸಹಿಸಿ ಅಲ್ಲಿ ನಿಲ್ಲಲಾರದೆ, ರಾವಣನು ಅರಮನೆಗೆ ಓಡಿ ನಡೆದು, ತನ್ನ ತಮ್ಮನಾದ ಕುಂಭಕರ್ಣನನ್ನು ಎಬ್ಬಿಸಿ, ಶ್ರೀರಾಮನೆದುರಿಗೆ ಯುದ್ಧಕ್ಕೆ ಕಳುಹಿಸಿದನು. ರಾಘುನಿಗೂ ಕುಂಭಕರ್ಣನಿಗೂ ಭಯಂಕರ ಯುದ್ಧವಾಯಿತು ಆ ರಾಕ್ಷಸನು ಅನೇಕ ವಾನರ ಸೇನೆಯನ್ನು ಹತಮಾಡಿ, ಕೊನೆಗೆ ರಾಮಬಾಣಕ್ಕೆ ಆಹುತಿಯಾದನು. ತರುವಾಯ ದೇವಾಂತಕ, ನರಾಂತಕ, ಅತಿಕಾಯ, ಮಹೋದರ, ಮಹಾಪಾರ್ಶ್ವ ಮುಂತಾದ ರಾಕ್ಷಸ ವೀರರೆಲ್ಲರೂ ಹನುಮದಾದಿ ಕಪಿವೀರರಿಂದ ಹತವಾ

ದರು. ರಾವಣನು ತನ್ನ ಪರಾಭವವನ್ನು ಕುರಿತು ಮಹಾ ವ್ಯಸನಾಕ್ರಾಂತ ನಾದನು. ಆಗ ಇಂದ್ರಜಿತುವು, ರಾವಣನನ್ನು ಸಮಾಧಾನಗೊಳಿಸಿ, ಯುದ್ಧಕ್ಕೆ ಹೊರಟು ಬ್ರಹ್ಮಾಸ್ತ್ರ ಪ್ರಯೋಗದಿಂದ ರಾಮಲಕ್ಷ್ಮಣರನ್ನು ಮೂರ್ಛೆಗೊಳಿಸಿದನು. ಜಾಂಬವ ಹನುಮದಾದಿಗಳು ಬಹು ಪ್ರಯತ್ನ ಮಾಡಿ, ಅವರನ್ನು ಎಚ್ಚರಗೊಳಿಸಲು, ಕಪಿಸೇನೆಯೇ ಮಹಾ ಕ್ರೋಧಾನ್ವಿತವಾಗಿ ಪುನಃ ಲಂಕೆಯನ್ನು ಮುತ್ತಿ ಪ್ರಾಕಾರವನ್ನು ದಾಟಿ ಒಳಕ್ಕೆ ನುಗ್ಗಿದರು. ರಾಕ್ಷಸರಿಗೂ ಕಪಿಸೇನೆಗೂ ತುಮುಲ ಯುದ್ಧವು ನಡೆಯಿತು. ಕುಂಭನಿಕುಂಭ ಮಕರಾಕ್ಷ ಮುಂತಾದ ರಾಕ್ಷಸವೀರರ ವಧೆಯಾಯಿತು. ಇಂದ್ರಜಿತು ಕಪಿಸೇನೆಯನ್ನು ಬಹು ಪರಿಯಿಂದ ಪೀಡಿಸಿ, ಕೊನೆಗೆ ಶತ್ರುನಾಶಕರವಾಗಿ ನಿಕುಂಭಿಲೆಯ ಯಾಗವನ್ನು ಪ್ರಾರಂಭಿಸಿದನು. ಅದನ್ನು ತಿಳಿದು ಹನುಮಂತ ಲಕ್ಷ್ಮಣ ವಿಭೀಷಣಾದಿಗಳು ಅಲ್ಲಿಗೆ ನಡೆದು ಆ ಯಾಗವನ್ನು ಧ್ವಂಸಗೊಳಿಸಿ. ಆ ದುರುಳರಾಕ್ಷಸನನ್ನು ಎದುರಿಸಿದರು. ಅಲ್ಲೊಂದು ಭಯಂಕರ ಕಾಳಗವಾಯಿತು. ಇಂದ್ರಜಿತುವು ಲಕ್ಷ್ಮಣನ ಬಾಣಗಳಿಂದ ಸಂಹೃತನಾದನು.

ಇಂದ್ರಜಿತುವಿನ ವಧೆಯಿಂದ ರಾವಣನಬಲಭುಜವೇ ಕಡಿದುಬಿದ್ದಂತೆ ಆಯಿತು. ಆಗ ಅವನು ಅತಿಶಯ ಧೈರ್ಯಗೆಟ್ಟನು. ರಾಮನ ಅಗಾಧ ಪರಾಕ್ರಮವು ಅವನನ್ನು ನಡುಗಿಸಿಬಿಟ್ಟಿತು. ತನಗೆ ನಿಶ್ಚಯವಾಗಿಯೂ ಜಯವಾಗದು ಎಂಬ ಸಂಗತಿಯು ಅವನ ಮನಸ್ಸಿಗೆ ಸ್ಪಷ್ಟವಾಗಿ ತೋರಿತು. ಮುಖ್ಯ ಮುಖ್ಯರಾದ ರಾಕ್ಷಸ ವೀರರೆಲ್ಲರೂ ಹತರಾಗಿದ್ದರು. ಬಂಧುಮಿತ್ರರೆಲ್ಲರೂ ನಾಶವಾಗಿದ್ದರು. ಇನ್ನು ಅವನಿಗೆ ಆಪ್ತರಾರೂ ಉಳಿಯಲಿಲ್ಲ ಮುಂದೆ ಕಾರ್ಯತೋರದೆ, ತನ್ನ ಮೂಲಬಲವನ್ನೇ ರಾಮಬಾಣಗಳಿಗೆ ಆಹುತಿಯಾಗಿ ಒಡ್ಡಿದನು. ಅದೂ ಶ್ರೀರಾಮನಿಂದ ನಿರ್ಮೂಲವಾಯಿತು. ಮುಂದೆ ಮಾರ್ಗವೇ ಇಲ್ಲದಿರಲು, ಸರ್ವಸನ್ನಾಹ ಯುಕ್ತನಾಗಿ ತಾನೇ ಯುದ್ಧಕ್ಕೆ ನಡೆದನು. ರಾಮರಾವಣರಿಗೆ ಮತ್ತೊಂದಾವೃತ್ತಿ ಭಯಂಕರ ಸಮರವು ಕೈಗಟ್ಟಿತು.

ರಾವಣನು ಈ ಬಾರಿಯ ಯುದ್ಧದಲ್ಲಿ, ತನ್ನ ಸರ್ವಶಕ್ತಿಯನ್ನೂ ಪ್ರಯೋಗಿಸಿ ಯುದ್ಧಮಾಡಿ,-ರಾಮಲಕ್ಷ್ಮಣರನ್ನು ವಧಿಸಬೇಕು, ಅಥವ

ತಾನು ಹತನಾಗಬೇಕು-ಎಂದು ನಿಶ್ಚಯ ಮಾಡಿದನು. ಅವನು ಲಕ್ಷ್ಮಣನಮೇಲೆ ಪ್ರಯೋಗಿಸಿದ್ದ ಶಕ್ತ್ಯಾಯುಧವು, ಆತನಿಗೆ ಪ್ರಾಣಾಪಾಯವನ್ನುಂಟುಮಾಡಿತು. ರಾಮನು ತನ್ನ ಸೋದರನ ಮರಣಕ್ಕಾಗಿ ವಿಶೇಷವಾಗಿ ಪ್ರಲಾಪಿಸಿದನು. ಆದರೆ, ವೀರ ಸಮೀರನಂದನನು ಅಂಜನಾದ್ರಿಯನ್ನು ಹೊತ್ತುತಂದು, ಅದರಲ್ಲಿದ್ದ ಅಮೃತಮಯ ಮೂಲಿಕೆಗಳ ಪ್ರಯೋಗದಿಂದ ಆತನನ್ನು ಬದುಕಿಸಿದನು. ಒಡನೆ ರಾಮನು ದ್ವಿಗುಣಿತ ಉತ್ಸಾಹದಿಂದ ರಾವಣನಮೇಲೆ ಕಾಣಿಸಿಕೊಂಡನು. ಆ ವೇಳೆಗೆ ಅಗಸ್ತ್ಯ ಮಹರ್ಷಿಯು ಶ್ರೀರಾಮನಲ್ಲಿಗೆ ಬಂದು, ಆತನಿಗೆ ಆದಿತ್ಯ ಹೃದಯವೆಂಬ ಮಂತ್ರವನ್ನು ಬೋಧಿಸಿದನು. ಶ್ರೀರಾಮಚಂದ್ರನೂ ರಾವಣನ ರಥಾಶ್ವ ಸಾರಥಿಗಳನ್ನೂ, ಧ್ವಜವನ್ನೂ, ಆತನ ಕವಚಕುಂಡಲಗಳನ್ನೂ ಛೇದಿಸಿ, ಮಹಾಸ್ತ್ರ ಪ್ರಯೋಗದಿಂದ ಆತನ ತಲೆಗಳನ್ನು ಒಂದೊಂದನ್ನಾಗಿ ಕತ್ತರಿಸ ತೊಡಗಿದನು. ಆದರೆ ಬ್ರಹ್ಮನ ವರಲಬ್ಧಗಳಾಗಿದ್ದ ಆ ತಲೆಗಳು, ರಾಮನು ಕತ್ತರಿಸಿದಂತೆಲ್ಲ, ಆ ಸ್ಥಳಗಳಲ್ಲಿ ಪುನಃ ಪುನಃ ಮೊಳೆಯುತ್ತಿದ್ದುವು. ರಾಮನು ಬೇಸರವಿಲ್ಲದೆ, ನೂರೊಂದಾವೃತ್ತಿ ಅವುಗಳನ್ನು ಛೇದಿಸಿ ಕೊನೆಗೆ ಬ್ರಹ್ಮಾಸ್ತ್ರ ಪ್ರಯೋಗದಿಂದ ಲೋಕಕಂಟಕನಾದ ಆ ದಶಕಂಠನ ಪ್ರಾಣವಾಯುವನ್ನು ಅಪಹರಿಸಿದನು. ರಾವಣನ ದುಷ್ಟಚೇತನವು, ಭೂಭಾರಕವಾಗ ಆ ದೇಹದಿಂದ ಹೊರಹೊರಟಿತು. ಅವನ ಮರಣಕ್ಕಾಗಿ ದೇವತೆಗಳೂ ಋಷಿಮುನಿಗಳೂ ಆನಂದಿಸಿದರು. ಶ್ರೀರಾಮನನ್ನು ಜಯಜಯವೆಂದು ಹೊಗಳಿ, ಪುಷ್ಪವೃಷ್ಟಿಯನ್ನು ಸುರಿಸಿದರು. ಸಕಲಲೋಕವೂ ರಾಕ್ಷಸಬಾಧೆಯು ಇನ್ನು ನಿವೃತ್ತವಾಯಿತೆಂದು ಪರಮಾನಂದವನ್ನು ಹೊಂದಿತು.

ರಾಕ್ಷಸ ರಾಜನಾದ ರಾವಣನ ಮರಣಕ್ಕಾಗಿ, ಮಂಡೋದರಿಯೇ ಮುಂತಾದ ಅವನ ಅನೇಕಮಂದಿ ಪತ್ನಿಯರು—ವಿಶೇಷವಾಗಿ ಶೋಕಿಸಿದರು. ವಿಭೀಷಣನೂ ತಮ್ಮಣ್ಣನ ನಿಧನಕ್ಕಾಗಿ ವ್ಯಸನಾಕ್ರಾಂತನಾಗಿ, ಕೊನೆಗೆ ಶ್ರೀರಾಮಾಜ್ಞೆಯಿಂದ ಅವನಿಗೆ ಅಪರ ಸಂಸ್ಕಾರಗಳನ್ನು ನಡೆಯಿಸಿದನು. ತರುವಾಯ ಲಕ್ಷ್ಮಣನು ರಾಮಾಜ್ಞೆಯಿಂದ ಲಂಕೆಗೆ ನಡೆದು ಅಲ್ಲಿ ಸಕಲಸಂಭ್ರಮದಿಂದಲೂ ವಿಭೀಷಣನಿಗೆ ಲಂಕಾರಾಜ್ಯದ ಆಧಿಪತ್ಯ

ವನ್ನು ವಹಿಸಿ, ರಾವಣನ ಸಿಂಹಾಸನದಲ್ಲಿ ಕೂರಿಸಿ ಪಟ್ಟಾಭಿಷೇಕ ಮಾಡಿದನು. ವಿಭೀಷಣನು ಭೀತರಾಗಿದ್ದ ಸಕಲರಿಗೂ ಅಭಯಪ್ರಧಾನ ಮಾಡಿದನು.

ಇತ್ತ, ಆಂಜನೇಯನು ಶ್ರೀರಾಮಾಜ್ಞೆಯಿಂದ ಸೀತಾದೇವಿಯ ಬಳಿಗೆ ನಡೆದು, ಶ್ರೀರಾಮನು ಯುದ್ಧದಲ್ಲಿ ರಾವಣನೇ ಮುಂತಾದ ಸಕಲ ರಾಕ್ಷಸ ಸೈನ್ಯವನ್ನೂ ಜಯಿಸಿಗೊಳಿಸಿದ ಸಂತೋಷವಾರ್ತೆಯನ್ನು ತಿಳಿಸಿದನು. ಮುಂದೆ ಸ್ವಲ್ಪ ಹೊತ್ತಿನೊಳಗಾಗಿ ವಿಭೀಷಣನು ಸೀತಾಮಾತೆಯ ಬಳಿಗೆಬಂದು, ಶ್ರೀರಾಮನಬಳಿಗೆ ಹೊರಡಲು ಸಿದ್ಧಳಾಗಬೇಕೆಂದು ವಿಜ್ಞಾಪಿಸಿಕೊಂಡನು. ಒಡನೆ ವಿಭೀಷಣನ ಪತ್ನೀ-ಪುತ್ರಿಯರು ಸೀತೆಗೆ ಮಂಗಳಸ್ನಾನ ಮಾಡಿಸಿ, ದಿವ್ಯ ವಸ್ತ್ರಾಭರಣಾದಿಗಳಿಂದ ಅಲಂಕರಿಸಿದರು. ವಿಭೀಷಣನು ಆ ದೇವಿಯನ್ನು ಕರೆತಂದು ರಾಮನ ಬಳಿಯಲ್ಲಿ ನಿಲ್ಲಿಸಿದನು. ಸೀತೆಯು ಭಯಭರಿತ ಭಕ್ತಿಯಿಂದ ಕುಗ್ಗಿದ ಹೃದಯದಿಂದ, ತಲೆಯನ್ನು ತಗ್ಗಿಸಿ, ನಡೆದು ಬಂದು, ಶ್ರೀರಾಮ ಸನ್ನಿಧಿಯಲ್ಲಿ ನಿಂತಳು. ಆಗ ಸತ್ಯಸಂಧನಾದ ಶ್ರೀರಾಮಚಂದ್ರನು—'ಎಲೆ ಕಲ್ಯಾಣಿ, ದುರುಳನಾದ ರಾವಣನಿಂದ ಅಪಹೃತಳಾದ-ಪತ್ನಿಯಾದ ನಿನ್ನನ್ನು ಪುನಃ ಸಾಧಿಸಬೇಕಾದುದು ನನ್ನ ಕರ್ತವ್ಯವಾದುದರಿಂದ, ಇಷ್ಟು ಶ್ರಮಪಟ್ಟು ನನ್ನ ಶತ್ರುವಾದ ಅವನನ್ನು ವಧಿಸಿ, ನಿನ್ನನ್ನು ಸಾಧಿಸಿ ಪ್ರಾಪ್ತವಾದ ಕಳಂಕವನ್ನು ನೀಗಿಸಿಕೊಂಡುದಾಯಿತು. ಇಷ್ಟುಕಾಲ ಕಾಮಾಂಧನಾದ ಆ ರಾವಣನ ಅಧೀನದಲ್ಲಿ ಏಕಾಂಗಿಯಾಗಿದ್ದ ನಿನ್ನನ್ನು ಈಗ ನಾನು ಪುನಃ ಸಂಗ್ರಹಿಸುವುದು ಲೋಕನಿಂದ್ಯವಾದ ಕಾರ್ಯವು. ಅದು ನ್ಯಾಯಸಮ್ಮತವಲ್ಲ. ಆದುದರಿಂದ ಇನ್ನು ನಿನ್ನ ಮನಬಂದೆಡೆಗೆ ಹೋಗಬಹುದು' ಎಂದು ನುಡಿದುಬಿಟ್ಟನು. ಮಹಾ ದಯಾಳುವಾದ ಶ್ರೀರಾಮನ ಬಾಯಿಂದ ಈ ಮಾತುಗಳು ಹೊರಟುದನ್ನು ಕೇಳಿ, ಸೀತೆಯು ಬಹುಪರಿಯಾಗಿ ದುಃಖಿಸುತ್ತಾ, ತನ್ನ ಸಚ್ಚರಿತ್ರೆಯನ್ನು ಕುರಿತು ಹಲವು ಪರಿಯಿಂದ ಹೇಳಿಕೊಂಡಳಾದರೂ ಏನೂ ಫಲವಾಗಲಿಲ್ಲ. ಕೊನೆಗೆ ತನ್ನ ಸ್ಥಿತಿಯನ್ನು ಕುರಿತು ಬೇಸತ್ತು, ಜಾನಕಿಯು ಲಕ್ಷ್ಮಣನಿಗೆ ಹೇಳಿ ಒಂದು ಚಿತೆಯನ್ನು ಸಿದ್ಧಪಡಿಸಿ, ಅದನ್ನು ಪ್ರದಕ್ಷಿಣೆಯಾಗಿ ಬಂದು-ತನ್ನ ಮನಸ್ಸಿನಲ್ಲಿ ಶ್ರೀರಾಮನ ದಿವ್ಯಪಾದಗಳನ್ನಲ್ಲದೆ ಅನ್ಯವಿಚಾರವನ್ನು ಭಾವಿಸದಿದ್ದುದು

ಸತ್ಯವಾಗಿದ್ದರೆ ಆ ಅಗ್ನಿಯು ತನ್ನನ್ನು ಕಾಪಾಡಲಿ-ಎಂದು ಪ್ರಾರ್ಥಿಸಿಕೊಂಡು ಮಹಾ ಭಯಂಕರವಾಗಿ ಜ್ವಲಿಸುತ್ತಿದ್ದ ಆ ಅಗ್ನಿಯಲ್ಲಿ ಪ್ರವೇಶಿಸಿಬಿಟ್ಟಳು. ಸಕಲರೂ ಹಾಹಾಕಾರ ಮಾಡಿದರು. ಸುಗ್ರೀವ ವಿಭೀಷಣಾದಿಗಳು ಬಹು ಅನುಚಿತಕಾರ್ಯವೆಂದುಕೊಂಡರು. ಆದರೆ ಅಷ್ಟರಲ್ಲಿ ದೇವೇಂದ್ರ ಬ್ರಹ್ಮ ಅಷ್ಟದಿಕ್ಪಾಲಕರು ಮುಂತಾದ ಸಮಸ್ತರೂ ತಮ್ಮ ತಮ್ಮ ದಿವ್ಯವಿಮಾನಗಳನ್ನೇರಿ ಅಲ್ಲಿಗೆಬಂದು, ಶ್ರೀರಾಮನ ಸಚ್ಚರಿತ್ರೆಯನ್ನು ಬಹುಬಗೆಯಿಂದ ಹೊಗಳಿದರು. ಯಜ್ಞಪುರುಷನು ಸೀತೆಯು ಮುಡಿದಿದ್ದ ಹೂ ಕೂಡ ಬಾಡದಂತೆ, ಆಕೆಯನ್ನು ಎತ್ತಿತಂದು-ಮಹಾ ಪತಿವ್ರತಾ ಶಿರೋಮಣಿಯಾದ ಈಕೆಯನ್ನು ಪರಿಗ್ರಹಿಸೆಂದು-ಶ್ರೀರಾಮನಬಳಿ ಒಪ್ಪಿಸಿದನು. ಸೀತೆಯು ಶ್ರೀರಾಮನ ಅಂಕದಲ್ಲಿ ಪ್ರಕಾಶಿಸಿದಳು. ಮಹಾ ಬಾಹುವಾದ ಶ್ರೀರಾಮನು ಆ ಲೋಕಮಾತೆಯನ್ನು ಪರಿಗ್ರಹಿಸಿದುದಕ್ಕಾಗಿ ಸಕಲರೂ ಪರಮಾನಂದಗೊಂಡರು.

ತರುವಾಯ ಶ್ರೀರಾಮಚಂದ್ರನು, ವಿಭೀಷಣನು ತಂದೊಪ್ಪಿಸಿದ ಪುಷ್ಪಕವಿಮಾನವನ್ನೇರಿ, ವಿಭೀಷಣ ಸುಗ್ರೀವಾದಿ ಸಮಸ್ತ ಪರಿವಾರದೊಂದಿಗೂ ಸಮುದ್ರವನ್ನು ದಾಟಿ, ಸೇತುಮೂಲದಲ್ಲಿ ಶ್ರೀರಾಮಲಿಂಗವನ್ನು ಪ್ರತಿಷ್ಠಿಸಿ, ಅಯೋಧ್ಯಾಭಿಮುಖವಾಗಿ ಪ್ರಯಾಣ ಮಾಡಿದನು. ಮಾರ್ಗದಲ್ಲಿ ಸೀತೆಗೆ ಮನೋಹರಗಳಾದ ಗಿರಿವನ ನದಿಗಳನ್ನು ವಿವರಿಸಿ ತೋರಿಸುತ್ತಾ ಬಹು ಶೀಘ್ರವಾಗಿ ಪ್ರಯಾಣಮಾಡಿ ಭರದ್ವಾಜಾಶ್ರಮವನ್ನು ತಲುಪಿದರು. ಭರದ್ವಾಜರು ಆದಿನ ತಮ್ಮ ಆಶ್ರಮದಲ್ಲಿದ್ದು ಮಾರನೆಯ ಪ್ರಾತಃಕಾಲ ಪ್ರಯಾಣ ಮಾಡಬಹುದೆಂದು ಪ್ರಾರ್ಥಿಸಲಾಗಿ ಶ್ರೀರಾಮನು ತನ್ನ ಆಗಮನವನ್ನೇ ಎದುರು ನೋಡಿಕೊಂಡಿದ್ದ ಭರತನಿಗೆ ತಮ್ಮ ಕ್ಷೇಮ ವಾರ್ತೆಯನ್ನು ತಿಳಿಸಲೋಸುಗ ಆಂಜನೇಯನನ್ನು ಪೂರ್ವಭಾವಿಯಾಗಿ ಕಳುಹಿಸಿದನು. ಆಂಜನೇಯನು ವಾಯುವೇಗದಿಂದ ಒರುವುದರೊಳಗಾಗಿಯೂ, ಅತ್ತ ಭರತನು, ತನ್ನ ಪ್ರತಿಜ್ಞೆಯಂತೆ ರಾಮದರ್ಶನವಾಗಲಿಲ್ಲವೆಂದುಕೊಂಡು ಅಗ್ನಿಪ್ರವೇಶಕ್ಕೆ ನಿಶ್ಚಯಮಾಡಿ, ಯಜ್ಞಕುಂಡವನ್ನು ಪ್ರದಕ್ಷಿಣೆಮಾಡುತ್ತಾ ಬೀಳಲನುವಾಗಿದ್ದನು. ಅಷ್ಟರಲ್ಲಿ ಆಂಜನೇಯನು ಆತನ ಉದ್ಯೋಗವನ್ನು ದೂರದಿಂದಲೇ ಕಂಡು, ಸಾವಕಾಶವಾದರೆ ಪ್ರಮಾದ

ಸಂಭವಿಸೀತೆಂದುಕೊಂಡು—'ಕುಶಲ ರಾಮುನಿಗೆ, ಕುಶಲ' ಎಂದು ಕೂಗಿಕೊಂಡು ಕೇಳಿದ.—'ಅಯ್ಯಾ ಭರತನೇ, ರಾಮಲಕ್ಷ್ಮಣರು ಸೀತಾಸಮೇತರಾಗಿ ಬರುತ್ತಿದ್ದಾರೆ. ಇನ್ನೊಂದು ಮುಹೂರ್ತ ಕಾಲದೊಳಗಾಗಿ ಅವರನ್ನು ನೋಡುವೆ. ಈ ನಿನ್ನ ಪ್ರಯತ್ನವನ್ನು ಬಿಡು' ಎಂದು ನುಡಿದನು. ಭರತನು ಶ್ರೀರಾಮಾಗಮನ ವಾರ್ತೆಯನ್ನು ಕೇಳಿ ಪರಮಾನಂದ ಭರಿತನಾದನು. ಮುಂದೆ ಸ್ವಲ್ಪಹೊತ್ತಿನೊಳಗಾಗಿಯೇ ಪುಷ್ಪಕ ವಿಮಾನವು ದೃಷ್ಟಿಗೋಚರವಾಯಿತು. ಭರತ ಶತ್ರುಘ್ನರೂ, ರಾಜಸ್ತ್ರೀಯರೂ, ಸಕಲಪರಿಜನ ಪುರಜನರೂ ಶ್ರೀರಾಮ ದರ್ಶನದಿಂದ ವರ್ಣಿಸಲಾಗದಂತಹ ಮಹಾದಾನಂದ ಭರಿತರಾದರು.

ಶ್ರೀರಾಮಚಂದ್ರನು ಭ್ರಾತೃವತ್ಸಲನಾದ ಭರತಶತ್ರುಘ್ನರನ್ನು ಕರೆದಾಲಂಗಿಸಿ, ಹಲವು ಸವಿನುಡಿಗಳಿಂದ ಮನ್ನಿಸಿದನು. ಸ್ವಾಮಿಭಕ್ತರಾದ ಸುಮಂತ್ರಾದಿ ಮಂತ್ರಿಗಳನ್ನು ಪ್ರೇಮಕಟಾಕ್ಷದಿಂದ ಆದರಿಸಿದನು. ವಸಿಷ್ಠಾದಿ ಗುರುಜನಗಳನ್ನೂ, ಕೌಸಲ್ಯಾದಿ ಮಾತೆಯರನ್ನೂ ವಂದಿಸಿ, ಆಶೀರ್ವಾದಗೊಂಡನು. ತರುವಾಯ ಇನ್ನು ತಡವಾಗಬಾರದೆಂದು ಎಲ್ಲರೂ ಅಯೋಧ್ಯಾ ನಗರಿಯನ್ನು ಕುರಿತು ಪ್ರಯಾಣಮಾಡಿದರು. ಪಟ್ಟಾಭಿಷೇಕದ ಸಕಲ ಸನ್ನಾಹಗಳೂ ಭರದಿಂದ ನಡೆದುವು. ಸುವರ್ಣ ಕುಂಭಗಳಲ್ಲಿ ಚತುಸ್ಸಮುದ್ರದಿಂದ ಪುಣ್ಯತೀರ್ಥಗಳು ತರಿಸಲ್ಪಟ್ಟುವು. ಸಮಸ್ತ ಮಂಗಳ ದ್ರವ್ಯಗಳೂ ಗಂಧ ಪುಷ್ಪಾದಿಗಳೂ ಸಿದ್ಧಗೊಳಿಸಲ್ಪಟ್ಟುವು. ಅಯೋಧ್ಯಾನಗರಿಯ ಪ್ರಜೆಗಳು ಮಹದಾನಂದ ಭರಿತರಾಗಿ ತಮ್ಮ ಶಕ್ತಿಮೀರಿ ನಗರವನ್ನು ನೇತ್ರಾನಂದಕರವಾಗಿರುವಂತೆ ಸಿಂಗರಿಸಿದರು. ಎಲ್ಲೆಲ್ಲೂ ಆನಂದೋತ್ಸಾಹಗಳು ಎಲ್ಲೆಮೀರಿ ಪ್ರವಹಿಸತೊಡಗಿದುವು.

ಕೌಸಲ್ಯಾದಿ ಮಾತೆಯರ ಮತ್ತು ಗುರುಜನರ ಆಜ್ಞೆಯಂತೆ ಶ್ರೀರಾಮಲಕ್ಷ್ಮಣ ಭರತಶತ್ರುಘ್ನರು ಜಡೆಯನ್ನು ವಿಸರ್ಜನೆಮಾಡಿ ಮಂಗಳ ಸ್ನಾನಾದಿಗಳಿಂದ ಶುದ್ಧರಾಗಿ ದಿವ್ಯವಸ್ತ್ರ ವಿಭೂಷಣಾದಿಗಳಿಂದ ಅಲಂಕೃತರಾದರು. ಮಹರ್ಷಿಗಳಿಂದಲೂ, ಭೂಸುರೋತ್ತಮರಿಂದಲೂ, ರಾಜಾಧಿರಾಜರಿಂದಲೂ, ಸಾಮಂತ ನೃಪಾಲರಿಂದಲೂ ನೆರೆದ ಮಹಾಸಭಾ ಮಧ್ಯದಲ್ಲಿ ಶ್ರೀರಾಮಚಂದ್ರನು ರತ್ನ ಸಿಂಹಾಸನಾರೂಢನಾಗಿ ಕುಳಿತನು. ವಸಿ

ಷ್ಠಮಹರ್ಷಿಯು ದಿವ್ಯರತ್ನ ಕಲಶಗಳಿಂದ ಚತುಸ್ಸಮುದ್ರದ ಮತ್ತು ಗಂಗಾದಿ ಪುಣ್ಯತೀರ್ಥಗಳ ಜಲದಿಂದ ಶ್ರೀರಾಮನಿಗೂ ಸೀತಾದೇವಿಗೂ ಅಭಿಷೇಕಮಾಡಿ ವೇದೋಕ್ತ ಆಶೀರ್ವಚನಗಳನ್ನು ನುಡಿದನು. ಭೂಸುರರ ವೇದಘೋಷಗಳೂ, ಸುಮಂಗಲೆಯರ ಮಂಗಳಕರ ಗೀತಗಳೂ, ಮಂಗಳ ವಾದ್ಯಗಳ ಕರ್ಣಾನಂದಕರವಾದ ಸುಸ್ವನಗಳೂ, ಪ್ರಜೆಗಳ ಕೋಲಾಹಲವೂ ಕಿವಿಗಳನ್ನು ಕಿವುಡಾಗಿಸುತ್ತಿದ್ದುವು. ಶ್ರೀರಾಮಚಂದ್ರನ ಪಟ್ಟಾಭಿಷೇಕ ಮಹೋತ್ಸವವು ಅತಿಶಯ ವಿಜೃಂಭಣೆಯಿಂದ ನಡೆಯಿತು.

ಶ್ರೀರಾಮಚಂದ್ರನು ಸೀತಾಸಮೇತನಾಗಿ ಸೂರ್ಯವಂಶ ಪಾರಂಪರ್ಯವಾಗಿ ಮನುಮಾಂಧಾತರು ಕುಳಿತು ಆಳಿದ ದಿವ್ಯರತ್ನ ಸಿಂಹಾಸನದಲ್ಲಿ ಕುಳಿತನು. ವಸಿಷ್ಠರು, ರಘು ಇಕ್ಷ್ವಾಕು ದಶರಥ ಮುಂತಾದ ಧರಾರಮಣರು ಧರಿಸಿದ್ದ ಭದ್ರಕಿರೀಟವನ್ನು ಶ್ರೀರಾಮಚಂದ್ರನ ಶಿರಸ್ಸಿನಲ್ಲಿಟ್ಟರು. ದಿವ್ಯರತ್ನ ಕಿರೀಟಧಾರಣೆಯಾಗಲು ಭರತನು, ತಾನು ಅವರಿಗೆ ಶ್ರೀರಾಮಾಜ್ಞೆಯಿಂದ ವಹಿಸಿದ್ದ ಕೋಸಲರಾಜ್ಯದ ಸಮಸ್ತ ಆಧಿಪತ್ಯವನ್ನೂ ರಾಜರಾಜನಾದ ಆತನ ಪಾದಗಳಿಗೆ ಒಪ್ಪಿಸಿದನು. ಸಕಲ ಸಾಮಂತರಾಜರೂ, ಬಂದು ಪಾದಾಭಿವಾದನ ಮಾಡಿ ಕಾಣಿಕೆಗಳನ್ನೊಪ್ಪಿಸಿದರು. ಶ್ರೀರಾಮನು, ಆ ಶುಭ ಸಂದರ್ಭದಲ್ಲಿ ಭೂಸುರ ವರ್ಗಕ್ಕೂ ಅರ್ತರಿಗೂ ಗೋಭೂ ಹಿರಣ್ಯಕನ್ಯಾದಾನಾದಿ ಸಕಲ ದಾನಗಳನ್ನೂ ಅಗಾಧ ಪ್ರಮಾಣದಿಂದ ಮಾಡಿ ಸಕಲರಿಗೂ ಸಂತುಷ್ಟಿಯನ್ನುಂಟುಮಾಡಿದನು. ಸುಗ್ರೀವ ವಿಭೀಷಣ ಅಂಗದ ಜಾಂಬುವಂತ ಮುಂತಾದ ಮಿತ್ರವರ್ಗವನ್ನು ಶ್ರೀರಾಮನು ಅತಿಶಯ ಪ್ರೇಮಪೂರ್ವಕ ಆದರಿಸಿ ವಿಶೇಷ ಬಹುಮಾನಗಳನ್ನಿತ್ತನು. ಸೀತಾರಾಮರಿಬ್ಬರಿಗೂ ಮಹೋಪಕಾರಮಾಡಿ, ಲಕ್ಷ್ಮಣನಿಗೆ ಪ್ರಾಣದಾನಮಾಡಿ ಹೀಗೆ ತಮಗೆ ಅಗಾಧ ಸೇವೆಮಾಡಿದ್ದ ಹನುಮಂತನನ್ನು ಹೇಗೆ ಗೌರವಿಸುವುದೆಂಬುದು ತೋರದೆ ಶ್ರೀರಾಮನು ತನ್ನ ಕೊರಳಲ್ಲಿದ್ದ ದಿವ್ಯವಾದ ಆಣೆಮುತ್ತುಗಳ ಹಾರವನ್ನು ಸೀತೆಗಿತ್ತು ಆಕೆಯಿಂದ ಅದನ್ನು ಆಂಜನೇಯನಿಗೆ ಬಹುಮಾನವಾಗಿ ಕೊಡಿಸಿದನು. ಅಯೋಧ್ಯಾನಗರಿಯು ಹೀಗೆ ಶ್ರೀರಾಮ ಪಟ್ಟಾಭಿಷೇಕ ಮಹೋತ್ಸವದ ಆನಂದ ಕೋಲಾಹಲದಿಂದ ತುಂಬಿಕೊಂಡಿತು. ತರುವಾಯ ಶ್ರೀರಾಮನು ಭರತನಿಗೆ ಯು

ವರಾಜ್ಯಾಭಿಷೇಕ ಮಾಡಿದನು. ಲಕ್ಷ್ಮಣ ಶತ್ರುಘ್ನರು ಎಂದಿನಂತೆ ರಾಮ ಮತ್ತು ಭರತರ ಆಜ್ಞಾನುಯಾಯಿಗಳಾಗಿ ನಿಂತರು. ಧರ್ಮಾತ್ಮನಾದ ಶ್ರೀರಾಮನು ರಾಜ್ಯಪರಿಪಾಲನೆಗೆ ಆರಂಭಿಸಿದನು. ಶ್ರೀರಾಮನ ರಾಜ್ಯಭಾರದಲ್ಲಿ ಸಕಾಲಕ್ಕೆ ಪೂರ್ಣವೃಷ್ಟಿಯಾಗುತ್ತಾ, ಭೂಮಿಯಲ್ಲಿ ಸಕಲವಿಧ ಪೈರು ಪಚ್ಚೆಗಳೂ ವಿಶೇಷವಾಗಿ ಬೆಳೆಯುತ್ತಾ, ಎಲ್ಲೆಲ್ಲೂ ಸುಭಿಕ್ಷವಾಗಿ ಭೂಮಂಡಲವು ಸುಖ ಸಂತೋಷಗಳಿಂದ ಪೂರ್ಣವಾಗಿ, ಸ್ವರ್ಗಲೋಕವೋ ಎಂಬಂತೆ ರಂಜಿಸಿತು. ರಾಕ್ಷಸರು, ಕಳ್ಳಕಾಕರು, ಕ್ಷಾಮಡಾಮರಗಳು, ಸಾಂಕ್ರಾಮಿಕಾದಿ ದುರ್ವ್ಯಾಧಿಗಳು ಮುಂತಾದುವುಗಳ ಸೋಂಕೇ ಆತನ ಆ ರಾಜ್ಯಾಭಾರದಲ್ಲಿ ಕಾಣಿಸಿಕೊಂಡುದಿಲ್ಲ. ಸಕಲರೂ ಶ್ರೀರಾಮಚಂದ್ರನ ಕಲ್ಯಾಣಗುಣಗಳನ್ನೂ, ಸೀತಾಮಾತೆಯ ಪವಿತ್ರ ಚಾರಿತ್ರ್ಯವನ್ನೂ ಭರತ ಲಕ್ಷ್ಮಣ ಶತ್ರುಘ್ನರ ಭ್ರಾತೃವಾತ್ಸಲ್ಯವನ್ನೂ ಮುಕ್ತಕಂಠದಿಂದ ಹೊಗಳುತ್ತಾ ಇದ್ದರು. ಅಂದು ದುರ್ದೈವ ವಶದಿಂದ, ಪಾದಚಾರಿಯಾಗಿ ವನಕ್ಕೆ ನಡೆದ ತಮ್ಮ ಪುತ್ರರು, ಇಂದು ಸಕಲ ರಾಕ್ಷಸ ಕುಲವನ್ನೂ ನಿರ್ಮೂಲಿಸಿ ಅಗಾಧ ಕೀರ್ತಿ ಸಂಪನ್ನರಾಗಿ ಮೆರೆಯುತ್ತಾ, ಪಟ್ಟಾಭಿಷೇಕವನ್ನು ಹೊಂದಿದುದನ್ನು ಕಂಡು ಕೌಸಲ್ಯಾ ಸುಮಿತ್ರಾದಿ ರಾಜಮಾತೆಯರೂ ಪರಮಾನಂದಗೊಂಡರು. ಹೆಚ್ಚೇನು-ಶ್ರೀ ರಾಮನ ಸಾನ್ನಿಧ್ಯದಿಂದ ಅಯೋಧ್ಯೆಯೂ-ಕೋಸಲ ದೇಶವೂ, ಭೂಮಂಡಲವೂ, ಸಾಕ್ಷಾದ್ವೈಕುಂಠ ಸದೃಶವೆನ್ನಿಸಿಕೊಂಡು, ಸಕಲ ಶುಭಗಳಿಗೂ, ಸುಖ ಸೌಭಾಗ್ಯಗಳಿಗೂ ನೆಲೆವೀಡಾಗಿ ಪ್ರಕಾಶಿಸಿದುವು.

## ಉಪಸಂಹಾರ.

ಸ್ಥಿತಿಕರ್ತನೂ, ಬ್ರಹ್ಮೇಂದ್ರಾದಿ ನಿಯಾಮಕನೂ, ಸರ್ವಲೋಕಸಂರಕ್ಷಕನೂ ಆದ ಶ್ರೀಮನ್ಮಹಾವಿಷ್ಣುವೇ ಮನುಷ್ಯಾವತಾರವನ್ನೆತ್ತಿ ಲೋಕಶಿಕ್ಷೆಗೆಂದು ಭೂಲೋಕದಲ್ಲಿ ವಾಸಿಸುತ್ತಿರುವಲ್ಲಿ ಪ್ರಜಾಪಾಲನೆಯು ಸುಖಪ್ರದವಾಗಿದ್ದಿತೆಂದು ಹೇಳಬೇಕಾದುದೇನು? ಶ್ರೀರಾಮನು ಹೀಗೆ ಹನ್ನೊಂದು ವರ್ಷಕಾಲ ಭೂಭಾರವನ್ನು ವಹಿಸಿ ಧರ್ಮದಿಂದ ರಾಜ್ಯಪಾಲನೆ ಮಾಡಿದನು. ಈ ಮಧ್ಯೆ ಪ್ರಜಾಪಾಲಕನಾದ ರಾಜನು ಎಷ್ಟು ಮಟ್ಟಿಗೆ ಪ್ರ

ಚಾಭಿಪ್ರಾಯ ಬದ್ಧನಾಗಿ ರಾಜ್ಯವಾಳಬೇಕೆಂಬುದನ್ನು ಪ್ರದರ್ಶಿಸಲಿಕ್ಕಾಗಿ ಯೋ ಎಂಬಂತೆ ಶ್ರೀರಾಮನು, ಪೂರ್ಣ ಗರ್ಭಿಣಿಯಾಗಿದ್ದ ತನ್ನ ಪತ್ನಿ ಸೀತೆಯನ್ನು ಮತ್ತೊಂದುಬಾರಿ ವನಕ್ಕೆ ಕಳುಹಿಸಿದನು. ಅಲ್ಲಿ ಆ ಸಾಧ್ವೀಮಣಿಯು ಶ್ರೀ ವಾಲ್ಮೀಕಿಮಹರ್ಷಿಗಳ ಆಶ್ರಮದಲ್ಲಿದ್ದು, ಕುಶ-ಲವರೆಂಬ ಇಬ್ಬರು ಮಕ್ಕಳನ್ನು ಪಡೆದು, ಅವರು ಪ್ರಬುದ್ಧರಾಗುವವರೆಗೂ ಅಲ್ಲೇ ವಾಸಿಸಿದಳು. ಕುಶಲವರು ವಾಲ್ಮೀಕರ ಪೋಷಣೆಯಲ್ಲಿ, ಸಕಲ ವೇದ ಶಾಸ್ತ್ರಗಳನ್ನೂ, ಧನುರ್ವೇದವನ್ನೂ ಅಭ್ಯಸಿಸಿ, ಅವರಿಂದಲೇ ರಚಿತವಾದ ಶ್ರೀಮದ್ರಾಮಾಯಣವನ್ನು ಶೃತಿ ತಾಳಲಯ ಬದ್ಧವಾಗಿ ಶ್ರಾವ್ಯವಾಗಿ ಹಾಡಲೂ ಕಲಿತು, ಸಕಲರಿಗೂ ಆನಂದದಾಯಕರಾಗಿದ್ದರು.

ಶ್ರೀರಾಮಚಂದ್ರನು ತನ್ನ ಆಳಿಕೆಯ ಕೊನೆಯ ಭಾಗದಲ್ಲಿ ಅಶ್ವಮೇಧಯಾಗವಮಾಡಿದನು. ಆ ಸಂಬಂಧದಲ್ಲಿ ಆತನಿಗೂ ವಾಲ್ಮೀಕ್ಯಾಶ್ರಮದಲ್ಲಿದ್ದ ಆತನ ಮಕ್ಕಳಾದ ಕುಶಲವರಿಗೂ ಭಯಂಕರ ಯುದ್ಧ ಪ್ರಸಂಗ ಒದಗಿ,-ರಾವಣಾದಿ ರಾಕ್ಷಸರನ್ನು ಸಂಹರಿಸಿ ಮಾಡಿಗೆಯಲ್ಲಿ ಬಂದು ಸೇರಿದ್ದ ಬಾಣಗಳೆಲ್ಲವೂ, ಅಲ್ಲಿ ವ್ಯರ್ಥವಾದುವು. ರಾಮಲಕ್ಷ್ಮಣಾದಿಗಳೂ ಮೂರ್ಛೆಹೋಗಿ ಬಿದ್ದರು. ತರುವಾಯ ವಾಲ್ಮೀಕಿ ಮಹರ್ಷಿಗಳಿಂದ ಸ್ತುತಿಸಲ್ಪಟ್ಟ ಶ್ರೀರಾಮನು ಎಚ್ಚರಗೊಂಡು, ವೀರಾಗ್ರಣಿಗಳಾದ ತನ್ನಾ ಪುತ್ರರನ್ನು ಕರೆದಾಲಂಗಿಸಿ, ಸೀತೆಯನ್ನು ಪರಿಗ್ರಹಿಸಿ, ಅಶ್ವಮೇಧ ಯಾಗವನ್ನು ಸಾಂಗಗೊಳಿಸಿದನು. ತರುವಾಯ ಕುಶಲವರಿಗೆ ಕುಲಕ್ರಮಾಗತವಾಗಿ ಬಂದ ಅಯೋಧ್ಯಾ ರಾಜ್ಯಾಧಿಪತ್ಯವನ್ನಿತ್ತು ಪಟ್ಟಗಟ್ಟಿ ಧರೆಗೆ ಶಾಂತತೆಯನ್ನುಂಟುಮಾಡಿದನು.

ಹೀಗೆ ರಾವಣಾದಿ ದುಷ್ಟರಾಕ್ಷಸರ ಬಾಧೆಯಿಂದ ಭೂಲೋಕದಲ್ಲಿ ನಷ್ಟವಾಗಿದ್ದ ಶಾಂತತೆಯನ್ನು ಪುನಃ ಸ್ಥಾಪಿಸಿ, ಶ್ರೀರಾಮಚಂದ್ರನು ಬ್ರಹ್ಮೇಂದ್ರಾದಿ ದೇವತೆಗಳ ಪ್ರಾರ್ಥನೆಯಿಂದ ತನ್ನ ಅವತಾರ ಕಾರ್ಯವನ್ನು ಉಪಸಂಹರಿಸಿ, ವೈಕುಂಠ ಲೋಕವನ್ನು ಕುರಿತು ಪ್ರಯಾಣಮಾಡಿದನು. ಸಕಲ ದೇವತೆಗಳೂ ಜಯ ಜಯನಿನಾದದಿಂದ ದಿಕ್ತಟಗಳನ್ನು ತುಂಬಿ, ಅಲ್ಲಿ ಶ್ರೀರಾಮನಿಗೆ ಸ್ವಾಗತವನ್ನಿತ್ತರು.

ಯಾವ ಪುಣ್ಯಪುರುಷನು, ಪುರಾಣ ಪುರುಷೋತ್ತಮನಾಗಿದ್ದರೂ, ನರಸಾಮಾನ್ಯನಾಗಿ, ದೇವಾದಿದೇವ ನಿಯಾಮಕನಾಗಿದ್ದರೂ-ಕರಡಿ ಕಪಿಗಳೊಂದಿಗೆ ಬೆರೆದು, ಸಕಲಲೋಕ ಭಯಂಕರರಾಗಿದ್ದ ದುರುಳ ರಾಕ್ಷಸವರ್ಗವನ್ನು ನಿರ್ಮೂಲಗೊಳಿಸಿ, ಅಂದು ಶಾಂತಿಸ್ಥಾಪನೆ ಮಾಡಿದನೋ ಆ ಭಕ್ತಜನ ಸಂರಕ್ಷಕನಾದ ಶ್ರೀರಾಮಚಂದ್ರಮೂರ್ತಿಯು, ಇಂದೂ ಲೋಕದಲ್ಲಿ ಹೆಚ್ಚಿಹೋಗಿರುವ ದುಷ್ಕರ್ಮ, ದುರ್ನೀತಿ, ದುರಾಚರಣೆಗಳನ್ನು ನಿರ್ಮೂಲಗೊಳಿಸಿ, ದುಷ್ಟ ಶಿಕ್ಷಣ, ಸಾಧು ರಕ್ಷಣ ಧರ್ಮಸ್ಥಾಪನಾದಿಕಾರ್ಯಗಳಿಂದ ಲೋಕವನ್ನುದ್ಧರಿಸಲಿ. ಸರ್ವಾಂತರಾತ್ಮನಾದ ಆ ಶ್ರೀರಾಮ ಪ್ರಭುವು, ಲೋಕದಲ್ಲಿ ದುಷ್ಟದಮನಕ್ಕಾಗಿಯೂ, ದೀನಜನೋದ್ಧರಣಕ್ಕಾಗಿಯೂ, ಶಾಂತಿಸ್ಥಾಪನೆಗಾಗಿಯೂ ನಿಸ್ವಾರ್ಥ ಭಾವದಿಂದ ಹೆಣಗುತ್ತಿರುವ ಸಕಲ ಸಜ್ಜನರಿಗೂ, ಏಕಮಾತ್ರ ಬೆಂಬಲನಾಗಿದ್ದು ಧೈರ್ಯೋತ್ಸಾಹಗಳನ್ನೂ, ಶ್ರದ್ಧಾಭಕ್ತಿಗಳನ್ನೂ ಪ್ರಸಾದಿಸಿ ಸಂರಕ್ಷಿಸಲಿ. ಶ್ರೀರಾಮಚಂದ್ರಮೂರ್ತಿಯ ಕೃಪಾವರ್ಷವು ಅವಿಚ್ಛಿನ್ನವಾಗಿ ಪ್ರವಹಿಸುತ್ತಿರಲು, ಭಾರತೀಯರು, ಧೈರ್ಯವೀರ್ಯಗಳನ್ನು ಪ್ರಕಟಿಸಿ, ನಿಯತಾತ್ಮರಾದ ಮಹಾತ್ಮರ ದಿವ್ಯ ಸಂದೇಶವನ್ನುಅನುಸರಿಸಿ ನಡೆದು, ಜಗತ್ತಿನಲ್ಲಿ ಸುಖಶಾಂತಿ ಸ್ವಾತಂತ್ರ್ಯ ಸಮಾಧಾನಗಳನ್ನು ಸ್ಥಾಪಿಸಿ, ಭೂತಲವನ್ನು ಸ್ವರ್ಗಸದೃಶವನ್ನಾಗಿಸಲು ಸಮರ್ಥರಾಗಲಿ.—ಅಷ್ಟುಮಾತ್ರ, ಶ್ರೀರಾಮಾನುಗ್ರಹವಾಗಲಿ.—

ತಥಾಸ್ತು.



ಸುಬೋಧ ಮುದ್ರಣಾಲಯ, ಬೆಂಗಳೂರು ನಗರ.



ದೀನಜನ ಬಾಂಧವ ಅಬ್ರಹಾಮ್ ಲಿಂಕನ್

ಶ್ರೀರಾಮ ಸಹಾಯಂ

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸ ಪುಸ್ತಕಾವಳಿ)



**ಮುನ್ನುಡಿ:—**

ಪ್ರಪಂಚದಲ್ಲಿ ಮಾನವಕುಲೋದ್ಧಾರಕವಾದ ಮಹತ್ಕಾರ್ಯಗಳನ್ನು ಮಾಡಿ, ಮಹರ್ಷಿಯರೆಂದೂ ಮಹಾತ್ಮರೆಂದೂ ಗೌರವಿಸಲ್ಪಡುತ್ತ, ಜನಾಂಗದ ಹೃದಯಪೀಠದಲ್ಲಿ ಸ್ಥಾನವನ್ನು ಸಂಪಾದಿಸಿಕೊಂಡು, ಪ್ರಾತಃಸ್ಮರಣೀಯರಾಗಿರುವ ವ್ಯಕ್ತಿಶ್ರೇಷ್ಠರಲ್ಲಿ, ನಮ್ಮ ಕಥಾನಾಯಕನಾದ ಅಬ್ರಹಾಂ ಲಿಂಕನ್ ಎಂಬಾತನೊಬ್ಬನು. ಈತನು ಅಮೇರಿಕಾ ದೇಶೀಯನು. ಲಿಂಕನನು ಶ್ರೀಮಂತನಾಗಿ ಜನಿಸಿ ಚಿನ್ನದ ತೊಟ್ಟಿಲಿನಲ್ಲಿ ಬೆಳೆದವನಲ್ಲ. ಗರ್ಭದರಿದ್ರನಾಗಿ ಹುಟ್ಟಿ ಕಷ್ಟಪರಂಪರೆಗಳಲ್ಲಿ ಬೆಳೆದವನು. ಈತನ ತಂದೆತಾಯಿಗಳು, ಮರದ ಹಲಗೆಗಳಿಂದ ಕಟ್ಟಲ್ಪಟ್ಟ ಒಂದೇ ಕೊಠಡಿಯ ಮನೆಯಲ್ಲಿ ವಾಸವಾಗಿದ್ದವರು. ಹಾಗಿದ್ದರೂ, ಅಬ್ರಹಾಮನ ಪ್ರಾಮಾಣಿಕತೆ, ಎಂದಿಗೂ ಕುಂದದ ಉತ್ಸಾಹ ಧೈರ್ಯ ಸಾಹಸಗಳು, ದೀರ್ಘ ಪರಿಶ್ರಮ ಮುಂತಾದುವುಗಳು ಆತನನ್ನು ಅಮೆರಿಕಾದೇಶದ ಅಧ್ಯಕ್ಷಸ್ಥಾನಕ್ಕೇರಿಸಿದುವು. ಆತನ ದಯಾಮಯ ಹೃದಯ, ಪರೋಪಕಾರ ಪರಾಯಣತೆ, ಸತ್ಯಸಂಧತೆ ಇವು ಆತನ ನಾಮಧೇಯವನ್ನು ಶಾಶ್ವತಗೊಳಿಸಿದುವು.—ಆತನ ಕೀರ್ತಿಯನ್ನು ಸ್ಥಿರಗೊಳಿಸಿದುವು.

ಅಬ್ರಹಾಮ ಲಿಂಕನನೇನು ಪುರಾಣಪುರುಷನಲ್ಲ, ಆತನು ಬೆಟ್ಟವನ್ನು ಕಿತ್ತು ಎತ್ತಿದನೆಂದಾಗಲಿ, ಭೂಮಿಯನ್ನು ಚಾಪೆಯಂತೆ ಸುತ್ತಿದನೆಂದಾಗಲಿ, ಅಥವ ಸಮುದ್ರವನ್ನೆಲ್ಲ ಏಕಾಪೋಶನವಾಗಿ ಕುಡಿದುಬಿಟ್ಟನೆಂದಾಗಲಿ, ಪೂರ್ವಾರ್ಧಗೋಳದಲ್ಲಿ ವಾಸಿಸುತ್ತಿರುವ ನಾವು ಪಶ್ಚಿಮಾರ್ಧಗೋಳದಲ್ಲಿ ಹುಟ್ಟಿಬೆಳೆದ ಆತನನ್ನು, ಇಂದು ಹೊಗಳುತ್ತಿಲ್ಲ. ಆ ಬಗೆಯ

ಅಮಾನುಷ ಕಾರ್ಯಗಳನ್ನು ಮಾಡುವಂತಹ ಅಥವ ಮಾಡಿದನೆಂದಗೂ ನಂಬುವಂತಹ ಕಾಲವು ಲೋಕದಲ್ಲಿ ಕಳೆದುಹೋಗಿದೆ. ಅಂತಹ ಕಾರ್ಯಗಳನ್ನು ಮಾಡಿಯೇ, ಮನುಷ್ಯನು ತಾನು ಧೀರನು ವೀರನು ಪರಾಕ್ರಮಿಯು ಎಂದು ಹೆಸರು ಪಡೆವಂಥ ಕಾಲವೂ ಕಳೆದಿದೆ. ಈಗ ಮನುಷ್ಯನು ನಿಸ್ವಾರ್ಥತೆ, ಪರೋಪಕಾರಕ್ಕಾಗಿ ಸ್ವಸುಖ ತ್ಯಾಗಮಾಡುವ ಉದಾರತೆ, ಮಾನವಕುಲದಲ್ಲಿ ಹೆಚ್ಚುಕುಂದುಗಳನ್ನು ಎಣಿಸದೆ, ಇವನು ಉಚ್ಚತರ ಗತಿಯವನು ಇವನು ಹೀನಕುಲಜನು ಎಂಬ ಭಾವನೆಯನ್ನಿಟ್ಟುಕೊಳ್ಳದೆ ಭಗವಂತನ ಮಕ್ಕಳಂತಿರುವ ಎಲ್ಲರೂ ಸಮಾನರು ಎಂಬ ದೃಢಬುದ್ಧಿಯಿಂದ ಸಕಲರ ಕಷ್ಟದುಃಖಗಳಲ್ಲಿ ಭಾಗಿಯಾಗಿ, ಅವರಿಗೆ ಸುಖಸಂತೋಷಗಳನ್ನುಂಟುಮಾಡುವಿಕೆಯಲ್ಲಿ ಶ್ರಮಪಡಲು ಹಿಂದೆಗೆಯದಿರುವಿಕೆ ಮುಂತಾದ ಗುಣಗಳ ಆಚರಣೆಯಿಂದ ಅವನು ಜನಾಂಗದ ವಿಶ್ವಾಸಗೌರವಗಳಿಗೆ ಪಾತ್ರನಾಗಬೇಕಾಗಿದೆ. ಮಹಿಮೆಯತೆಗೆ, ಪುರಾಣಕಾಲದಲ್ಲಿ ಅಮಾನುಷ ಕಾರ್ಯಗಳನ್ನುಮಾಡಿ ತೋರಿಸುವುದು ಮುಖ್ಯಲಕ್ಷಣವಾಗಿದ್ದಿರಬಹುದು. ಆದರೆ ಈಗ ಆ ಸ್ಥಿತಿಯು ಬದಲಾಯಿಸಿದೆ. ಪ್ರಕೃತಕಾಲದಲ್ಲಿ ಸ್ವಾರ್ಥತ್ಯಾಗ, ಸರ್ವಸಮದೃಷ್ಟಿ, ಪರೋಪಕಾರ ಪರಾಯಣತೆ, ಸಕಲರ ಮೇಲ್ಮೆಗಾಗಿ ದುಡಿಯುವಿಕೆ, ಸತ್ಯ, ಶಾಂತತೆ, ಲೋಕವ್ಯವಹಾರದಲ್ಲಿ ಪ್ರಾಮಾಣಿಕತೆ ಮುಂತಾದ ಗುಣಗಳನ್ನು ಆಚರಣೆಗೆ ತರುವಿಕೆಯು, ಮುಖ್ಯಲಕ್ಷಣವಾಗಿ ಏರ್ಪಟ್ಟಿದೆ. ಇಂತಹ ಶ್ರೇಷ್ಠಗುಣಗಳನ್ನು ಯಾವಾತನು ತನ್ನಜೀವಿತಕ್ಕೆ ಪರಮ ಧ್ಯೇಯಗಳೆಂದು ಇಟ್ಟುಕೊಂಡು ನಡೆಯುವನೋ ಆತನನ್ನು ಮಹನೀಯನೆಂದೂ ಮಹಾತ್ಮನೆಂದೂ ಲೋಕೋದ್ಧಾರಕ್ಕಾಗಿ ನರರೂಪದಲ್ಲಿ ಬಂದಿರುವ ಪುರುಷೋತ್ತಮನೆಂದೂ ತಿಳಿದು ಲೋಕವು ಗೌರವಿಸುವುದು. ನಮ್ಮ ಕಥಾನಾಯಕನು ಇಂತಹ ಶ್ರೇಷ್ಠಗುಣಗಳನ್ನು ತನ್ನ ಜೀವಿತದಲ್ಲಿ ಆಚರಿಸಿದಾತನು. ಆತನು, ವಿಕ್ರೀತದಾಸರಾಗಿ, ಗುಲಾಮರಾಗಿ ನರಳುತ್ತಿದ್ದ ನೀಗ್ರೋಗಳೆಂಬ ಒಂದು ಜನಾಂಗದವರ ದಾಸ್ಯವನ್ನು ತಪ್ಪಿಸಿ, ಅವರಿಗೆ ಮಾನವ ಸ್ವಾಭಾವಿಕವಾದ ಹುಟ್ಟಿನ ಸ್ವಾತಂತ್ರ್ಯವನ್ನು ಕಲ್ಪಿಸಿಕೊಡಲಿಕ್ಕಾಗಿಯೇ ತನ್ನ ಜೀವಿತವನ್ನು ಧಾರೆಯೆರೆದಿದ್ದನು. ಇದರಿಂದ ಆತನಿಗೆ ಸ್ವಜನರೇ ಅನೇಕರು ವಿರೋಧಿಗಳಾದರು. ಬಹು

ಮುಂದಿ ಆತನಿಗೆ ಪ್ರತಿಭಟಿಸಿದರು. ಆದರೂ ಆತನು ಆ ಪ್ರತಿದ್ವಂದ್ವಿಗಳಿಗಾಗಿ ಅಂಜಿ ತನ್ನ ಉದ್ದೇಶಸಾಧನೆಯಲ್ಲಿ ಹಿಂದೆ ಬೀಳಲಿಲ್ಲ. ಉತ್ಸಾಹ ಗುಂದಲಿಲ್ಲ. ಕೊನೆಗೆ ಆ ದ್ವೇಷಿಗಳು, ಆ ಮಹನೀಯನನ್ನು ಗುಂಡಿಟ್ಟು ಕೊಂದು, ತಮ್ಮ ರೋಷವನ್ನು ತೀರಿಸಿಕೊಂಡರು. ಆತನ ಭೌತಿಕ ದೇಹವು ನಾಶವಾಯಿತು. ಆದರಿಂದ ನಷ್ಟವೇನು ? ಆತನ ದೇಹಬೀಜವು ನಾಶವಾಗಿ ಅದರ ಸ್ಥಳದಲ್ಲಿ ಕೀರ್ತಿವೃಕ್ಷವು ಬೆಳೆಯಿತು. ಅಗಾಧವಾಗಿ ಬೆಳೆಯಿತು. ಇಂದು ಆತನು ಮಾನವ ಕುಲದಿಂದಲೇ ಮಹನೀಯನೆಂದು ಗೌರವಿಸಲ್ಪಡುತ್ತಿದ್ದಾನೆ. ಪರೋಪಕಾರಿಯೆಂದು ಹೊಗಳಲ್ಪಡುತ್ತಿದ್ದಾನೆ.

ಇಂತಹ ವ್ಯಕ್ತಿಶ್ರೇಷ್ಠರು, ಯಾವುದೊಂದು ದೇಶಕ್ಕೆ ಅಥವ ಕುಲಕ್ಕೆ ಮಾತ್ರ ಸೇರಿದವರೆಂಬುದಿಲ್ಲ. ಆ ಭಾವನೆಯಿಂದ ಅವರನ್ನು ಮಾನವರಲ್ಲಿ ಬೇರೆಯವರನ್ನಾಗಿ ತಿಳಿಯಲು ಸಾಧ್ಯವಿಲ್ಲ. ಅವರು ಸಕಲ ದೇಶದ-ಸಕಲ ಜನಾಂಗಗಳಿಗೂ ಸೇರಿದವರು. ಅವರಿಂದ ಪ್ರದರ್ಶಿತವಾಗುವ ದಯೆ, ಮಮತೆ, ಪರೋಪಕಾರ ಮುಂತಾದ ಗುಣಗಳಿಗೆ ಮಾನವನ ವರ್ಣಜಾತಿಗಳು ಮುಖ್ಯವಾದ ಕಾರಣಗಳಾಗಿರುವುದಿಲ್ಲ. ಆದುದರಿಂದ ಅವರು ಎಲ್ಲರಿಗೂ ಸೇರಿದವರೇ. ಪ್ರಕೃತಿಸಿದ್ಧವಾದ ಗುಣಧರ್ಮಗಳ ಪಾಲನೆಯನ್ನೇ ತಮ್ಮ ಧ್ಯೇಯವನ್ನಾಗಿ ಇಟ್ಟುಕೊಂಡಿರುವ ಅವರನ್ನು ಗೌರವಿಸಲು ಮಾನವನಲ್ಲ, ಪ್ರಕೃತಿಯೇ ಮುಂದಾಗುವುದು.

ಸುಬೋಧ ಕುಸುಮಾಂಜಲಿ ಗ್ರಂಥಮಾಲೆಯು, ಈ ದೃಷ್ಟಿಯಿಂದ, ಕೇವಲ ಭಾರತದೇಶದ ಮಹನೀಯ ವ್ಯಕ್ತಿಗಳ ಜೀವನ ಚರಿತ್ರೆಗಳನ್ನು ಮಾತ್ರವೇ ಪ್ರಕಟಿಸಬೇಕೆಂದಿದ್ದ ತನ್ನ ಸಂಕಲ್ಪವನ್ನು ೧೦೦ ಕುಸುಮಗಳಾಗುವವರೆಗೆ ಅತಿಕ್ರಮಿಸದೆ ಪಾಲಿಸಿಕೊಂಡು ಬಂದು ಈಗ ಈ ಬಗೆಯ ವಿದೇಶೀಯ ಮಹಾಪುರುಷರ ಜೀವಿತಗಳನ್ನೂ ಪ್ರಚುರಪಡಿಸುವುದು ಆವಶ್ಯಕವೆಂದು ಉದ್ದೇಶಿಸಿತು. ಈ ವಿಷಯದಲ್ಲಿ ನಮ್ಮ ವಾಚಕ ಮಹಾಶಯರು ಅನ್ಯಥಾ ಭಾವಿಸಲಾರರೆಂದು ನಂಬುತ್ತೇವೆ.

ಗ್ರಂಥಮಾಲೆಯು ತನ್ನಪಾಲಿನ ಈ ಬಗೆಯ ಭಾಷಾಸೇವಾಕಾರ್ಯವನ್ನು ನಿರ್ವಿಘ್ನವಾಗಿ ನಡೆಯಿಸಿಕೊಂಡು ಹೋಗುವಂತೆ, ಸ್ವಹಸ್ತ ಪರ

ಹಸ್ತ ಸಹಾಯವಮಾಡಿ ಪ್ರೋತ್ಸಾಹಿಸಬೇಕೆಂದು, ಕರ್ಣಾಟಕ ಮಹಾ ಜನರಲ್ಲಿ ಪ್ರಾರ್ಥಿಸುತ್ತೇವೆ.

ಬೆಂಗಳೂರು ನಗರ,
ತಾ|| ೧೫-೧೨-೧೯೩೦.

ಇತಿ ಸುಜನ ವಿಧೇಯ,
**ಯಂ. ರಾಮರಾವ್.**



## ಅಬ್ರಹಾಮ್ ಲಿಂಕನನ ಅಮೃತ ವಾಕ್ಯ.

‘ಯಾರ ಮೇಲೂ ನಮಗೆ ಅಸೂಯೆ ಬೇಡ. ಎಲ್ಲರ ವಿಷಯದಲ್ಲೂ ದಯೆ ಮಮತೆಗಳಿರಲಿ. ದೃಢವಾದ ಮನಸ್ಸಿನಿಂದ ನಾವು ಸತ್ಯಪಥವನ್ನು ಅನುಸರಿಸಿ ನಡೆಯೋಣ. ಸತ್ಯಪಥವೆಂತಹುದೆಂದು ಅರಿಯಲು, ದೇವರು ನಮಗೆ ಬುದ್ಧಿಯನ್ನು ಕೊಟ್ಟಿದ್ದಾನೆ. ಮನಸ್ಸಾಕ್ಷಿಗೆ ವಿರೋಧವಿಲ್ಲದೆ, ಅಂತಹ ನ್ಯಾಯಮಾರ್ಗದಲ್ಲಿ ನಡೆದು ನಾವು ಹಿಡಿದ ಕೆಲಸವನ್ನು ಮುಗಿಸೋಣ.’

‘ಮನುಷ್ಯನು ಒಂದು ಕಾರ್ಯವಮಾಡತೊಡಗಿದರೆ ಅದಕ್ಕಾಗಿ ತನ್ನಿಂದ ಸಾಧ್ಯವಿರುವ ಎಲ್ಲಾ ಸಾಹಸಗಳನ್ನೂ ಮಾಡಿಬಿಡಬೇಕು. ಫಲಿತಾಂಶವನ್ನೂ ಅವನು ಅಪೇಕ್ಷಿಸಬೇಕಾದುದಿಲ್ಲ. ಆ ಸಾಹಸವೇ ಫಲಿತಾಂಶವನ್ನು ನಿರ್ಣಯಿಸುವುದು. ನಾಳೆಯ ಒಂದು ಕಾರ್ಯವನ್ನು ಮಾಡಲು ಅರ್ಹನಾಗಬೇಕೆಂದು ನಿನ್ನ ಇಚ್ಛೆಯುಳ್ಳದೆಯೋ, ಹಾಗಿದ್ದರೆ ಇಂದು ನಿನ್ನ ಕೈಯಲ್ಲಿರುವ ಕಾರ್ಯವನ್ನು ನಿರಲಸಿಕೆಯಿಂದ ಚೆನ್ನಾಗಿ ಮಾಡು. ಅದು ಹೊರತು ಉತ್ತಮವಾದ ಮತ್ತೊಂದು ಉಪಾಯವೇ ಇಲ್ಲ.

As I would not be a slave, so I would not be a master. This expresses my idea of democracy. Whatever differs from this, to the extent of the difference is no democracy.

—*A. Lincoln.*

ಶ್ರೀರಾಮ ಸಹಾಯ.

ದೀನಜನ ಬಾಂಧವ

# ಅಬ್ರಹಾಮ್ ಲಿಂಕನ್.



ಅಧ್ಯಾಯ ೧.  'ಜನನ-ಬಾಲ್ಯ'

ಜಗತ್ತಿನಲ್ಲಿ ಸ್ವಾತಂತ್ರ್ಯವೆಂಬುದೊಂದು ಅಮೌಲ್ಯ ಪದಾರ್ಥ. ಅವನ್ನು ಗಳಿಸುವಿಕೆಯೇ ಜಗತ್ತಿನ ಜೀವಕೋಟಿಯು ಪರಮ ಧ್ಯೇಯವು. ಯಾವುದೊಂದು ಪಕ್ಷಿಯನ್ನು ಹಿಡಿದು ಪಂಜರದಲ್ಲಿಟ್ಟರೆ, ಅದರಿಂದ ಬಿಡಿಸಿಕೊಂಡು ಓಡಿಹೋಗುವುದಕ್ಕಾಗಿ ಅದು ಪ್ರಯತ್ನಿಸುತ್ತಿರುವುದನ್ನು ಕಾಣಬಹುದು. ಏಕೆ! ಅದು ಆ ಸ್ಥಳದಲ್ಲಿ ತನ್ನ ಮನಬಂದಂತೆ ಇರಲು ಸಾಧ್ಯವಿಲ್ಲವೆಂದು. ತನ್ನ ಇಚ್ಛೆ ಬಂದಂತೆ ಹಾರಾಡಲು ಅಲ್ಲಿ ಅವಕಾಶವಿಲ್ಲವೆಂದು. ಆ ಬಂಧನದಲ್ಲಿ ಸಿಕ್ಕಿಬಿದ್ದು ಇರುವವರೆಗೆ ಅದು ಸರಿಯಾಗಿ ಆಹಾರ ತಿನ್ನದು, ನಿದ್ರೆಮಾಡದು, ಸ್ವಸ್ಥಚಿತ್ತದಿಂದ ಇರದು. ಸ್ವಲ್ಪ ಮಾತ್ರ ಅವಕಾಶ ಸಿಕ್ಕಿದರೆ ಅಲ್ಲಿಂದ ಹೊರಬಿದ್ದು ಹಾರಿಹೋಗಿ, ವಿಶಾಲವಾದ ವಾತಾವರಣದಲ್ಲಿ ಮನಬಂದೆಡೆಗೆ ಹೋಗಬಹುದೆಂದು ಸದಾ ಹಂಬಲಿಸುತ್ತಿರುವುದು. ಪಕ್ಷಿಮಾತ್ರವಲ್ಲ. ಯಾವುದೊಂದು ಮೃಗವಾಗಲಿ-ಪಶುವಾಗಲಿ, ಹುಳುವಾಗಲಿ. ಕ್ರಿಮಿಯಾಗಲಿ ತನ್ನ ಸ್ವೇಚ್ಛೆಯಂತೆ ನಡೆಯಲು ಪ್ರತಿಬಂಧಕವುಂಟಾದರೆ ಸ್ವಸ್ಥಚಿತ್ತದಿಂದ ಇರಲಾರದು. ಆ ಸ್ಥಿತಿಯಿಂದ ತಪ್ಪಿಸಿಕೊಂಡು ಸ್ವತಂತ್ರವಾಗುವವರೆಗೂ ತಳಮಳಿಸುತ್ತಿರುವುದು. ಸ್ವಾತಂತ್ರ್ಯವು ದೊರೆತೊಡನೆಯೇ ಅದಕ್ಕಾಗುವ ಸಂತೋಷವು ವರ್ಣನಾತೀತವು.

ಪಶುಪಕ್ಷಿ ಕ್ರಿಮಿಕೀಟಗಳಿಗೆ ಮಾತ್ರವಲ್ಲ. ಒಂದು ಗಿಡವನ್ನು ಅದಕ್ಕೆ ಸ್ವಾಭಾವಿಕವಾದ ರೀತಿಯಲ್ಲಿ ಬೆಳೆಯಲಿತ್ತರೆ ಮಾತ್ರವೇ ಅದು ಚೆನ್ನಾಗಿ ಬೆಳೆಯುವುದು. ಹಾಗಲ್ಲದೆ, ಅದರ ಬೆಳೆವಣಿಗೆಗೆ, ಯಾವ ಬಗೆಯಿಂದಲಾದರೂ ನಾವು ಪ್ರತಿಬಂಧಕವನ್ನುಂಟುಮಾಡಿ, ಬೇರೆ ಮಾರ್ಗಕ್ಕೆ ತಿರುಗಿಸಲು ಪ್ರಯತ್ನಿಸಿದೆವಾದರೆ, ಅದರ ಬೆಳೆವಣಿಗೆಯು ಕುಂಠಿತವಾಗುವುದು. ಅದು ಕುಗ್ಗಲು ಆರಂಭಿಸುವುದು. ಸ್ವೇಚ್ಛೆಯಾಗಿ ಬೆಳೆಯಲು ಅವಕಾಶವಿದ್ದಾಗ ಹಸುರಾಗಿ ಕೋಮಲವಾಗಿ ಕಳಕಳಿಸುತ್ತಿದ್ದ ಸಸಿಯು, ತಡೆಯು ಪ್ರಾಪ್ತವಾದೊಡನೆಯೇ, ಬಿಳುಪಾಗಿ ಕಾಂತಿಹೀನವಾಗಿ, ಕುಗ್ಗಿ, ನೋಡಲು ಅಂದ ಕಾಣಿಸದಂತೆ ಆಗುವುದು. ಆದುದರಿಂದ ಸ್ವಾತಂತ್ರ್ಯವೆಂಬುದು ಪ್ರಕೃತಿಸಿದ್ಧ ಸ್ಥಿತಿಯೆಂದು ತೋರುತ್ತದೆ.

ಹೀಗೆ-ತೃಣಲತೆ ವೃಕ್ಷ, ಹುಳುಹುಪ್ಪಟೆ ಪಶುಪಕ್ಷಿ ಮೃಗ ಮುಂತಾದ ಸಮಸ್ತ ಚೇತನ ಸೃಷ್ಟಿಯೂ ಸ್ವಾತಂತ್ರ್ಯದಲ್ಲಿ ಪಡೆವಷ್ಟು ಸುಖ-ಸಂತೋಷಗಳನ್ನು ಬಂಧಕಕ್ಕೆ ಒಳಪಟ್ಟಾಗ ಪಡೆಯದಿರುವಿಕೆಯು ಸರ್ವತ್ರ ಕಂಡುಬರುತ್ತಿರುವುದು. ಇವುಗಳ ವಿಷಯವೇ ಹೀಗಿದ್ದರೆ, ಇನ್ನು ಮನುಷ್ಯನ ವಿಚಾರವನ್ನು ಹೇಳಬೇಕಾದುದೇನು. ಮನುಷ್ಯನು ಪ್ರಾಣಿಕೋಟಿಯಲ್ಲಿ ಮೇಲಿನ ತರಗತಿಗೆ ಸೇರಿದವನು. ಅವನು ಇತರ ಪ್ರಾಣಿಗಳಂತಲ್ಲ-ಇತರ ಪ್ರಾಣಿಗಳಿಗೆ ತಮ್ಮ ಮನಸ್ಸಿನಲ್ಲುಂಟಾದ ಭಾವಗಳನ್ನು ವ್ಯಕ್ತಪಡಿಸಲು ಬಾಯಿಲ್ಲ. ಮನುಷ್ಯನಿಗೆ ವಾಕ್‌ಸ್ವಾತಂತ್ರ್ಯವಿದೆ. ಇದು ಯುಕ್ತ ಇದು ಅಯುಕ್ತ ಎಂದು ವಿಚಾರಮಾಡುವ ಬುದ್ಧಿಯಿದೆ. ಯುಕ್ತಮಾರ್ಗವು ಶ್ರೇಯಸ್ಕರವಾದುದೆಂದು ತಿಳಿದು ಅದನ್ನು ಅನುಸರಿಸಿ ನಡೆವಂತಹ ಜ್ಞಾನವಿದೆ. ಹೀಗೆ ಸಕಲ ಇಂದ್ರಿಯಗಳಿಂದಲೂ ಪೂರ್ಣನಾಗಿ ಶ್ರೇಷ್ಠಜೀವಿಯಾಗಿರುವ ಮನುಷ್ಯನು ಬಂಧಕಕ್ಕೆ ಸಿಕ್ಕಿ ಇರತಕ್ಕುದೆಂದರೆ ಅದು ವಿಶೇಷತಾಪದಾಯಕ ವಿಚಾರವು. ಹಾಗೆ ಬಂಧನದಲ್ಲಿ ಸಿಕ್ಕವರನ್ನು ಮುಕ್ತರನ್ನಾಗಿ ಮಾಡುವಿಕೆಯು ಪರಮ ಪುಣ್ಯವಾದುದು ಜಗತ್ತಿನ ಹಲವು ರಾಷ್ಟ್ರಗಳಲ್ಲಿ ಜನರು ಒಂದೊಂದು ಕಾಲದಲ್ಲಿ ಈ ಬಗೆಯಲ್ಲಿ ಬಾಧಕದಲ್ಲಿದ್ದು ನರಳುತ್ತಿದ್ದುದೂ-ಅಂತಹ ಕಾಲದಲ್ಲಿ ವಿಶೇಷ ಪರಿಶ್ರಮ

ನಡೆದು, ಹಲವು ಸಂದರ್ಭಗಳಲ್ಲಿ ಯುದ್ಧವಾಗಿ ತರುವಾಯ ಅವರು ಸ್ವಾತಂತ್ರ್ಯವನ್ನು ಗಳಿಸಿಕೊಂಡ ವಿಚಾರವೂ ಅಗಾಧವಾಗಿ ಸಕಲ ದೇಶ ಚರಿತ್ರೆಗಳಲ್ಲೂ ಬರೆಯಲ್ಪಟ್ಟಿದೆ. ಅಮೇರಿಕಾದೇಶವೂ ಹದಿನೆಂಟನೆಯ ಶತಮಾನದಲ್ಲಿ ಅಸ್ವಾತಂತ್ರ್ಯದಲ್ಲಿ ಬಿದ್ದು ನರಳುತ್ತಿದ್ದಿತು. ಆ ಅಸ್ವಾತಂತ್ರ್ಯ ಶೃಂಖಲೆಯಿಂದ ಬಿಡುಗಡೆ ಹೊಂದಬೇಕೆಂದು ಆ ಶತಮಾನದ ಕೊನೆಯ ಭಾಗದಲ್ಲಿ ವಿಶೇಷ ಪ್ರಯತ್ನನಡೆದು ಯುದ್ಧವಾಗಿ, ಕೊನೆಗೆ ಉತ್ತರ ಅಮೆರಿಕದ ಮಧ್ಯಭಾಗದಲ್ಲಿ ಈಗಿನ ಅಮೆರಿಕದ ಸಂಯುಕ್ತ ಸಂಸ್ಥಾನ (United States of America) ವೆಂಬ ಪ್ರಾಂತವು ಏರ್ಪಟ್ಟಿತು. ಈ ಪ್ರಾಂತವು, ಪರಕೀಯರ ಆಡಳಿತದಲ್ಲಿ ಇದ್ದಾಗ ಯಾವ ಸ್ಥಿತಿಯಲ್ಲಿದ್ದಿತು. ಸ್ವಾತಂತ್ರ್ಯ ಸ್ಥಿತಿಯಲ್ಲಿ ಎಷ್ಟುಮಟ್ಟಿಗೆ ಬೆಳೆದು ಜಗತ್ತಿನ ರಾಷ್ಟ್ರಗಳಲ್ಲೆಲ್ಲಾ ವಿದ್ಯೆ, ಐಶ್ವರ್ಯ, ನಾಗರಿಕತೆ, ಕೈಗಾರಿಕೆ, ವ್ಯಾಪಾರ ಮುಂತಾದುವುಗಳಲ್ಲಿ ಎಷ್ಟುಮಟ್ಟಿನ ಅಭಿವೃದ್ಧಿ ಹೊಂದಿ ಮೇಲೆನಿಸಿದೆ ಎಂಬುದನ್ನು ವಿಚಾರಮಾಡುವುದಾದರೆ, ಆಶ್ಚರ್ಯವೆನ್ನಿಸುವುದು. ಜನಾಂಗದ ಬೆಳವಣಿಗೆಗೆ, ಇತರ ಎಲ್ಲಾ ಸಾಧನಗಳಿಗಿಂತಲೂ, ಸ್ವಾತಂತ್ರ್ಯವೇ ಮುಖ್ಯವಾದುದು-ಆವಶ್ಯಕವಾದುದು ಎಂಬ ವಿಚಾರವು ಗೋಚರಕ್ಕೆ ಬರುವುದು.

ಯೂರೋಪುಖಂಡದ ನಿವಾಸಿಗಳು ಬಹು ಸಾಹಸಿಗಳು. ಈಗ್ಗೆ ನಾಲ್ಕೈದು ಶತಮಾನಗಳ ಹಿಂದಿನ ಮಾತು! ತಮ್ಮ ದೇಶದಲ್ಲಿ ಜನಸಂಖ್ಯೆ ಹೆಚ್ಚಾಗಿ, ಜೀವನಕ್ಕೆ ತೊಂದರೆಯಾಯಿತೆಂದು ತಿಳಿದೊಡನೆಯೇ ಪೃಥ್ವಿಯ ಮತ್ತಾವ ಭಾಗದಲ್ಲಿ ತಮಗೆ ಅನುಕೂಲವಾದ ಸ್ಥಳ ದೊರೆಯುವುದೆಂದು ಹುಡುಕಿಕೊಂಡು ಹೊರಟರು. ಹಾಗೆ ಹೊರಟ ಅವರಲ್ಲಿ ಒಬ್ಬೊಬ್ಬನಿಗೂ ಉಂಟಾದ ಕಷ್ಟನಷ್ಟಗಳಿಗೆ ಮಿತಿಯೇ ಇಲ್ಲ. ಆದರೂ ಆ ಧೀರರು ಅವುಗಳಿಗಾಗಿ ಅಂಜಿ ತಮ್ಮ ಪ್ರಯತ್ನಗಳಿಂದ ಎಂದೂ ವಿಮುಖರಾಗಲಿಲ್ಲ. ಈ ಪ್ರಯತ್ನದಲ್ಲೇ ಅನೇಕರಿಗೆ ಪ್ರಾಣಾಪಾಯಗಳೂ ಒದಗಿದುವು. ಆದರೇನು! ಹಾಗೆ ಆ ಮಹತ್ಕಾರ್ಯಗಳಿಗಾಗಿ ಪ್ರಯತ್ನಿಸಿ ಪ್ರಾಣಬಿಟ್ಟಮಹನೀಯ ವ್ಯಕ್ತಿಗಳ ಪದಚಿಹ್ನೆಗಳನ್ನೇ ಅನುಸರಿಸಿ ನಡೆದು ಇತರರು ಆ ಕಾರ್ಯಗಳನ್ನು ಕೊನೆಗಾಣಿಸಿದರು. ೧೫ನೆಯ ಶತಮಾನದ ಕೊನೆಯ ಭಾಗ

ದಲ್ಲಿ ಕೊಲಂಬಸನೆಂಬಾತನು ಅಮೆರಿಕಾಖಂಡವನ್ನು ಕಂಡುಹಿಡಿದನು. ವಾಸ್ಕೋಡಿಗಾಮನೆಂಬಾತನು, ಹಿಂದೂ ದೇಶಕ್ಕೆ ಮಾರ್ಗವನ್ನು ಕಂಡು ಹಿಡಿದನು. ಇತರ ಅನೇಕ ಧೀರರು ವಿಸ್ತಾರವಾದ ಮಹಾಸಾಗರಗಳಲ್ಲಿ ಸಂಚರಿಸಿ ಅವರಿಗೆ ಅಜ್ಞಾತವಾಗಿದ್ದ ಅನೇಕ ಭೂ ಪ್ರದೇಶಗಳನ್ನು ಕಂಡು ಹಿಡಿದರು. ಉತ್ತರಧ್ರುವ ದಕ್ಷಿಣಧ್ರುವ ಪ್ರಾಂತಗಳಲ್ಲೂ ವಾಸ ಯೋಗ್ಯವಾದ ಭೂಪ್ರದೇಶಗಳಿವೆಯೋ ಎಂದು ಅನೇಕ ಮಂದಿ ಧೈರ್ಯಸ್ಥರಾದ ನಾವಿಕರು ಈಗಲೂ ಪ್ರಯತ್ನ ನಡೆಸಿದ್ದಾರೆ.

ಹೀಗೆ ವಿಶೇಷ ಪ್ರಯತ್ನಪಟ್ಟು, ಯಾವ ದೇಶೀಯರು ಯಾವ ನೂತನ ಭೂ ಪ್ರದೇಶವನ್ನು ಕಂಡುಹಿಡಿದರೆ ಅದು ಆ ದೇಶೀಯರ ಸ್ವತ್ತಾಗಿ ಭಾವಿಸಲ್ಪಡುತ್ತದೆ. ಅದು ವಾಸಯೋಗ್ಯವಾದ, ಫಲವತ್ತಾದ ಪ್ರದೇಶವೆಂದು ಗೊತ್ತಾದೊಡನೆಯೇ, ಇತರ ದೇಶಗಳವರೂ ಆ ಸ್ಥಳಕ್ಕೆ ಹೋಗಿ ವ್ಯವಸಾಯ ಪಶುಪಾಲನೆ ಮುಂತಾದುವುಗಳನ್ನು ಮಾಡಿಕೊಂಡು ವಾಸಮಾಡಲಾರಂಭಿಸುತ್ತಾರೆ. ತಮಗೆ ಜನ್ಮವಿತ್ತ ದೇಶದಲ್ಲಿ, ಕ್ಷಾಮಬಾಧೆಯಾಗಲಿ, ಕ್ಷುದ್ರರೋಗೋಪದ್ರವವಾಗಲೀ ಪ್ರಬಲಿಸಿ ಜೀವನ ನಡೆಯುವುದು ಕಷ್ಟವಾದಾಗ್ಗೆ ಮನುಷ್ಯನು ಜನ್ಮಭೂಮಿಯ ಅಭಿಮಾನವನ್ನು ತೊರೆದು ದೇಶಾಂತರಕ್ಕೆ ಹೋಗಿ ನೆಲೆಸುವನು. ಯೂರೋಪು ಖಂಡದಲ್ಲಿ ಜನಸಾಂದ್ರತೆಯು ವಿಶೇಷವಾಗಿ, ಜೀವನೋಪಾಯ ಸಾಗುವುದು ವಿಶೇಷ ಕಷ್ಟವೆನ್ನಿಸಿದಾಗ್ಗೆ, ಆ ದೇಶೀಯರು. ಮೇಲೆ ಹೇಳಿದಂತೆ ಕಂಡುಹಿಡಿಯಲ್ಪಟ್ಟ ವಿವಿಧ ಪ್ರಾಂತಗಳಿಗೆ ಹೋಗಿ ಅಲ್ಲೇ ನೆಲೆಸಿ, ಅದನ್ನೇ ಸ್ವದೇಶವೆಂದುಕೊಳ್ಳತೊಡಗಿದರು.

ಹಾಗೆ ಹೊರಟವರಲ್ಲಿ ಪ್ಯೂರಿಟನ್ನರೆಂಬುವರು, ಹದಿನೇಳನೆಯ ಶತಮಾನದಲ್ಲಿ ಅಮೆರಿಕಾ ದೇಶದಲ್ಲಿ ನೆಲೆಸಿದರು. ನಮ್ಮ ಕಥಾನಾಯಕನ ಪೂರ್ವಿಕರೂ ಆ ಕಾಲದಲ್ಲಿ ಹೊರಟುಬಂದು ನೆಲೆಸಿದವರೇ! ಅವರ ಪ್ರಾರಂಭದ ವಾಸಸ್ಥಳವನ್ನು ಈಗ ಮಸಾಚುಸೆಟ್ಸ್ ಎಂದು ಕರೆಯುತ್ತಾರೆ. ಆದರೆ ಅವರು ಬಹುಕಾಲ ಆ ಸ್ಥಳದಲ್ಲೇ ನಿಲ್ಲುತ್ತಿರಲಿಲ್ಲ. ಅಲ್ಲಿದ್ದ ಹುಲ್ಲು ಸೊಪ್ಪು ಬೇಟೆಯ ಮೃಗಪಕ್ಷಿಗಳು ಮುಂತಾದ ಸಾಮಗ್ರಿಗಳು ತೀರಿದು

ವೆಂದರೆ, ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸಾಗುತ್ತಿದ್ದರು. ಅಮೆರಿಕಾದಲ್ಲಿ ಸ್ವಾತಂತ್ರ್ಯಯುದ್ಧವು ನಡೆಯುತ್ತಿದ್ದಾಗ ಎಂದರೆ ೧೮ನೆಯ ಶತಮಾನದ ಕೊನೆಯ ಭಾಗದಲ್ಲಿ ಲಿಂಕನನ ಪಿತಾಮಹನು ಕೆಂಟಕಿ ಎಂಬ ಪ್ರಾಂತಕ್ಕೆ ಹೋಗಿ ವಾಸಿಸಿದ್ದನು.

ಅವನು ವಾಸಿಸಿದ್ದ ಪ್ರಾಂತವೆಲ್ಲವೂ ಆಗ ಘೋರಾರಣ್ಯವಾಗಿದ್ದಿತು. ಮುಗಿಲು ಮುಟ್ಟುವಂತೆ ಉನ್ನತವಾದ ಮರಗಳು, ಆ ಅರಣ್ಯಪ್ರಾಂತವನ್ನು ಪ್ರವೇಶಿಸಿದವರೇ ಇರಲಿಲ್ಲ. ಅಲ್ಲೊಬ್ಬರಲ್ಲೊಬ್ಬರಂತೆ ಬಹು ವಿರಳವಾಗಿ ವಾಸಿಸಿದ್ದ ಕೆಲಕುಟುಂಬದವರು. ತಮ್ಮ ಸುತ್ತುಮುತ್ತಲಿನ ಮರಗಳನ್ನು ಕಡಿದು ಭೂಮಿಯನ್ನು ಹಸನುಗೊಳಿಸಿಕೊಳ್ಳುತ್ತಿದ್ದರು. ಪ್ರೆಸಿಡೆಂಟ್ ಲಿಂಕನನ ತಾತನೂ, ಎಲ್ಲರಂತೆಯೇ ತನ್ನ ಕುಟುಂಬದ ವಾಸಕ್ಕಾಗಿ, ಮರದ ದಿಮ್ಮಿಗಳಿಂದ ಒಂದು ಮನೆಯನ್ನು ಕಟ್ಟಿಕೊಂಡು, ವ್ಯವಸಾಯಕ್ಕಾಗಿ ಸರ್ಕಾರದಿಂದ ಸ್ವಲ್ಪಭೂಮಿಯನ್ನು ಪಡೆದುಕೊಂಡನು. ಆ ಕಾಲದಲ್ಲಿ ಅಲ್ಲಿ ರೆಡ್ ಇಂಡಿಯನ್ನರೆಂಬ ಕಾಡುಜನರು ವಿಶೇಷವಾಗಿದ್ದರು. ಹೊಸದಾಗಿ ಬಂದು ತಮ್ಮ ವಾಸಸ್ಥಳವನ್ನು ಆಕ್ರಮಿಸಿಕೊಳ್ಳುತ್ತಿದ್ದ ಈ ಪರದೇಶೀಯ ಬಿಳಿಯ ಜನಗಳ ಮೇಲೆ ಸ್ವಾಭಾವಿಕವಾಗಿಯೇ ಆ ರೆಡ್ ಇಂಡಿಯನ್ನರಿಗೆ ವಿಶೇಷ ದ್ವೇಷವುಂಟಾಗಿದ್ದಿತು. ಬಿಳಿಯ ಜನರೂ ಅವರನ್ನು ಕಂಡ ಕಂಡೆಡೆ ಕೊಲ್ಲುತ್ತಿದ್ದರು. ಈ ಕಾರಣದಿಂದ ಪರಸ್ಪರ ಭೀತಿಯೂ ದ್ವೇಷವೂ ನೆಲೆಸಿದ್ದುವು.

ನಮ್ಮ ಕಥಾನಾಯಕನ ತಂದೆಗೆ ಥಾಮಸ್ ಲಿಂಕನ್ ಎಂದು ಹೆಸರು. ಈತನು ಬಾಲ್ಯದಲ್ಲಿ, ತನ್ನ ತಂದೆಯು ಮೇಲೆಹೇಳಿದಂತೆ ಅರಣ್ಯಪ್ರಾಂತದಲ್ಲಿ ನಿರ್ಮಿಸಿದ್ದ ಮರದ ದಿಮ್ಮಿಗಳ ಮನೆಯಲ್ಲೇ ಹುಟ್ಟಿ ಬೆಳೆದವನು. ಆ ಕಾಲದಲ್ಲಿ ಪಾಠಶಾಲೆಗಳಾಗಲೀ ವಿದ್ಯಾಭ್ಯಾಸ ಮಾಡಿಸುವರಾಗಲೀ ಪುಸ್ತಕಗಳಾಗಲೀ ಆ ಸ್ಥಳದಲ್ಲಿ ಇರಲಿಲ್ಲವಾದುದರಿಂದ ಥಾಮಸ್ ಲಿಂಕನನು ನಿರಕ್ಷರ ಕುಕ್ಷಿಯಾಗಿ ಬೆಳೆದನು. ಒಂದಾನೊಂದು ದಿನ ಥಾಮಸನೂ ಆತನ ತಂದೆಯೂ ಮನೆಯ ಸಮೀಪದ ಹೊಲದಲ್ಲಿ ಕೆಲಸಮಾಡು

ತ್ತಿದ್ದರು. ಆಗ, ಪಕ್ಕದ ಪೊದೆಯ ಹಿಂಬದಿಯಲ್ಲಡಗಿದ್ದ ಒಬ್ಬ ರೆಡ್ ಇಂಡಿಯನ್ನನು ಗುಂಡುಹಾರಿಸಿದನು. ಅದು ತಗುಲಿ ತಂದೆಯು ಸತ್ತು ಹೋದನು. ಹೀಗೆ ಸಂಸಾರವು ನಿರ್ಗತಿಕವಾಯಿತು. ವಿಧವೆಯಾದ ಥಾಮಸನ ತಾಯಿಯು ಬೇರೆ ಎಲ್ಲಿಗೆ ಹೋಗಲೂ ಮಾರ್ಗತೋರದಿರಲು ತನ್ನ ಚಿಕ್ಕಚಿಕ್ಕ ಮಕ್ಕಳನ್ನಿಟ್ಟುಕೊಂಡು, ಬಹು ಕಷ್ಟದಿಂದ ಅಲ್ಲೇ ವಾಸ ಮಾಡತೊಡಗಿದಳು. ೧೮೦೬ನೆಯ ವರ್ಷದಲ್ಲಿ ಥಾಮಸನಿಗೆ ವರ್ಜಿನಿಯಾ ದೇಶಸ್ಥಳಾದ ಯುವತಿಯೊಬ್ಬಳೊಂದಿಗೆ ವಿವಾಹವಾಯಿತು. ಮದುವೆ ಯಾದ ತರುವಾಯ ಥಾಮಸ್ ಲಿಂಕನನು ಅಂಥದೇ ಮತ್ತೊಂದು ಮನೆ ಯನ್ನು ನಿರ್ಮಿಸಿಕೊಂಡು ತನ್ನ ಪತ್ನಿಯೊಂದಿಗೆ ಬೇರೆ ವಾಸಿಸಲು ಪ್ರಾರಂ ಭಿಸಿದನು. ಭೂಮಿಯು ಫಲವತ್ತಾಗಿದ್ದುದರಿಂದ ಅವನು ಉತ್ತುಬಿತ್ತಿ ಬೆಳೆಯನ್ನು ಪಡೆದು ದಿನದಿನಕ್ಕೆ ವಿಶೇಷ ತಾಪತ್ರಯವಿಲ್ಲದೆ ಜೀವನ ಸಂಪಾ ದನೆ ಮಾಡಿಕೊಳ್ಳಲು ಶಕ್ತನಾಗಿದ್ದನು.

ಆಗ ಅವರು ವಾಸವಾಗಿದ್ದ ಪ್ರಾಂತಕ್ಕೆ ಕೆಂಟಕಿ ಎಂದು ಹೆಸರು. ಥಾಮಸ್ ಲಿಂಕನನು ತನ್ನ ಪತ್ನಿಯೊಂದಿಗೆ ವಾಸವಾಗಿದ್ದ ಮನೆಯು ಮರದ ಹಲಗೆಗಳಿಂದ ನಿರ್ಮಿತವಾದ ಒಂದು ಕೊಟ್ಟಡಿ ಮಾತ್ರವಾಗಿದ್ದಿತು. ಅದೊಂದು ಕೋಣೆಯೇ, ಆವಶ್ಯಕತೆಯನ್ನು ಅನುಸರಿಸಿ, ಪಾಕಗೃಹವೂ, ಭೋಜನಶಾಲೆಯೂ, ನಡುಮನೆ-ಪಡಸಾಲೆಗಳೂ, ಶಯನಗೃಹವೂ ಆಗಿ ಪರಿಣಮಿಸುತ್ತಿದ್ದಿತು. ಹೊರಗಿನಿಂದ ಬರುತ್ತಿದ್ದ ತಣ್ಣನೆಯ ಬಿರು ಗಾಳಿಯನ್ನು ತಡೆಯಲು ಆ ಮನೆಗೆ ಒಂದು ಕದವಾದರೂ ಇರಲಿಲ್ಲ. ಬದ ಲಾಗಿ ದೊಡ್ಡದಾದ ಒಂದು ಮೃಗದ ಚರ್ಮವು ನೇತಹಾಕಲ್ಪಟ್ಟಿರು ತ್ತಿತ್ತು. ಗಾಳಿಬೆಳಕುಗಳಿಗಾಗಿ ಆ ಮನೆಗೆ ಕಿಟಕಿಗಳು ಇರಲೂ ಅವ ಕಾಶವಿರಲಿಲ್ಲ. ಗೋಡೆಗೆ ಪ್ರತಿಯಾಗಿ ಇದ್ದ ಮರದ ಹಲಗೆಗಳ ಮಧ್ಯೆ ಕೊರೆದುಮಾಡಿದ್ದ ಒಂದು ದೊಡ್ಡರಂಧ್ರವೇ ಕಿಟಕಿಯಂತೆ ಉಪಯೋಗ ವಾಗುತ್ತಿತ್ತು. ಬಿರುಗಾಳಿ ಎದ್ದಾಗ್ಗೆ ಆ ಕಿಂಡಿಯ ಮೂಲಕ ಸು ಯ್ಯೆಂದು ಚಳಿಗಾಳಿಯು ನುಗ್ಗುವುದು. ಬಹು ಚಳಿಯಾದ ದಿನಗಳಲ್ಲಿ ಹಾಗೆ ನುಗ್ಗಿಬರುತ್ತಿದ್ದ ಗಾಳಿಯ ವೇಗವನ್ನು ತಡೆಯುವುದಕ್ಕಾಗಿ ಒಂದು

ಮರದ ತುಂಡನ್ನು ಆ ಕಿಂಡಿಗೆ ಅಡ್ಡಲಾಗಿ ಕಟ್ಟುತ್ತಿದ್ದರು. ಹಾಗೆ ಕಟ್ಟುವಾಗ್ಗೆ ಕತ್ತಲಾಗಿ ಕಣ್ಣೇ ಕಾಣುತ್ತಿರಲಿಲ್ಲ. ಆ ಕೊಠಡಿಯನ್ನು ಮನುಷ್ಯರ ವಾಸಕ್ಕೆ ಯೋಗ್ಯವಾದುದೆಂದು ಹೇಳುವುದಕ್ಕಿಂತಲೂ, ದನ ಕುರಿ ಕುದುರೆಗಳಿಗೆ ಯೋಗ್ಯವಾದ ಸ್ಥಳವೆಂದು ಹೇಳಿದರೆ ಚೆನ್ನಾಗಿ ಒಪ್ಪುತ್ತಿತ್ತು. ಆ ಕುಟುಂಬದವರು ಇಷ್ಟು ಮಟ್ಟಿನ ಸೌಭಾಗ್ಯಸ್ಥಿತಿಯಲ್ಲಿದ್ದಾಗ್ಗೆ ೧೮೦೯ ನೆಯ ಸಂವತ್ಸರದ ಫೆಬ್ರವರಿ ತಿಂಗಳಿನಲ್ಲಿ ಒಂದು ದಿನ ಥಾಮಸ್ ಲಿಂಕನನ ಪತ್ನಿಯಾದ ನ್ಯಾನ್ಸಿ ಹ್ಯಾಂಕ್ಸ್ ಎಂಬಾಕೆಯು ಒಂದು ಪುರುಷ ಶಿಶುವನ್ನು ಹೆತ್ತಳು. ಇಂತಹ ನಿರ್ಗತಿಕರ ಮನೆಯಲ್ಲಿ ಜನಿಸಿ ಇಷ್ಟು ಮಟ್ಟಿನ ದುಃಸ್ಥಿತಿಯಲ್ಲಿ ಬೆಳೆದ ಆ ಶಿಶುವೇ ಮುಂದೆ ಅಮೆರಿಕಾದೇಶದ (ಪ್ರೆಸಿಡೆಂಟ್) ಅಧ್ಯಕ್ಷಪದವಿಗೇರಿದನೆಂದರೆ ಅದು ಆಶ್ಚರ್ಯಕರ ವಿಚಾರವಲ್ಲವೆ?—

ಮೇಲೆ ಹೇಳಿದಂತೆ ಇಷ್ಟು ಅನಾನುಕೂಲತೆಗಳಿದ್ದರೂ, ಮಗುವು ತಾಯಿಯ ಮಡಿಲಲ್ಲಿ ಬೆಚ್ಚಗೆ ಮಲಗಿ ನಿದ್ರಿಸಿ, ಹೊರಗಿನ ಚಳಿಯಿಂದ ಯಾವ ವಿಧವಾದ ಬಾಧೆಯೂ ಇಲ್ಲದೆ ಬೆಳೆಯಿತು. ಚಳಿಗಾಗಿ ಸದಾ ಉರಿಯುತ್ತಿದ್ದ ಬೆಂಕಿಯು ಮಗುವಿಗೊಂದು ನೋಟದ ವಸ್ತುವಾಗಿದ್ದಿತು. ಧಗಧಗನೆಂದು ಉರಿಯುತ್ತಿದ್ದ ಜ್ವಾಲೆಯನ್ನು ಕಂಡು ಮಗುವು ಆಶ್ಚರ್ಯದಿಂದ ನೋಡುವುದು, ಗೋಡೆಯ ಹಲಗೆಗಳ ಸಂದಿನಿಂದ ಸುಯ್ಯೆಂದು ಬೀಸುತ್ತಿದ್ದ ಗಾಳಿಯ ಶಬ್ದವು ಅದಕ್ಕೆ ಕೌತುಕವನ್ನುಂಟು ಮಾಡುವುದು. ಮನೆಯಲ್ಲಿ ಗಡಿಗೆ ಮಡಕೆಗಳೂ, ಒಟ್ಟೆಬರೆಗಳೂ, ಹಾಸಿಗೆ ಹೊದಿಕೆಗಳೂ, ಎಷ್ಟು ಅಲ್ಪಪ್ರಮಾಣದಲ್ಲಿದ್ದುವೆಂಬುದು ಆ ಮಗುವಿಗೇನು ಗೊತ್ತು! ಥಾಮಸ್ ಲಿಂಕನನು, ಹೊತ್ತುಹೊತ್ತಿಗೆ ಬೇಟೆಯಾಡಿ ಮೃಗಮಾಂಸವನ್ನು ತಂದು ಒದಗಿಸುತ್ತಿದ್ದನು. ನ್ಯಾನ್ಸಿಯು ಅದನ್ನು ಬೇಯಿಸಿ, ಆಹಾರವನ್ನು ಸಿದ್ಧಗೊಳಿಸುವಳು. ಮಗುವಿಗೆ ಅಬ್ರಹಾಮ್ ಲಿಂಕನ್ ಎಂದು ಹೆಸರಿಟ್ಟು, ಆ ತಂದೆತಾಯಿಗಳು ಬಹು ಪ್ರೇಮದಿಂದ ಕಾಪಾಡುತ್ತಿದ್ದರು. ಮಗುವನ್ನು ಎತ್ತಿ ಆಡಿಸಲು, ಅದಕ್ಕಿಂತಲೂ ಎರಡು ವರ್ಷಕ್ಕೆ ಹಿರಿಯಳಾಗಿದ್ದ ಸಾರಾ ಎಂಬ ಹುಡುಗಿಯು ಯಾವಾಗಲೂ ಸಿದ್ಧಳಾಗಿದ್ದಳು. ಹೀಗೆ ಅಬ್ರಹಾಮ್ ಲಿಂಕನನು,

ಬಾಲ್ಯದಲ್ಲಿ ಕ್ಷುದ್ರಬಡತನದಲ್ಲೇ ಬೆಳೆದವನಾದಗೂ, ಅದರ ಪರಿಣಾಮವು ಅವನ ಮನಸ್ಸಿಗೆ ತೋರಲು ಅವಕಾಶವಿಲ್ಲದೆ, ಲೋಕದ ಇತರ ಬಾಲಕರಂತೆಯೇ ತಮ್ಮ ಆ ಮನೆಯೇ ಸರ್ವಸ್ವವೂ ಎಂದು ತಿಳಿದು ಸುಖವಾಗಿಯೇ ಇದ್ದನು.



## ಅಧ್ಯಾಯ ೨. ‘ ವಿದ್ಯಾಭ್ಯಾಸ.’

ಥಾಮಸ್ ಲಿಂಕನನ ಕಾಲದಲ್ಲಿ, ಶುದ್ಧ ಅರಣ್ಯಮಯವಾಗಿ, ಜಿಂಗಾಡಾಗಿ ರೆಡ್ ಇಂಡಿಯನರ ವಾಸದಿಂದ ಬಿಳಿಯ ಜನರಿಗೆ ಭಯಂಕರವೆನ್ನಿಸಿದ್ದ ಕೆಂಟಕಿಯು ಆ ಪ್ರಾಂತವು ಕಾಲಕ್ರಮದಲ್ಲಿ ಉತ್ತಮಸ್ಥಿತಿಯನ್ನು ಹೊಂದಸಾಗಿತು. ಆ ಕಾಲದಲ್ಲಿ ಅಮೆರಿಕದ ಸಂಯುಕ್ತ ಸಂಸ್ಥಾನಗಳು ಸಂಖ್ಯೆಯಲ್ಲಿ ಹದಿಮೂರು ಮಾತ್ರವೇ ಇದ್ದುವು. ದಿನದಿನಕ್ಕೆ ಪ್ರಜೆಗಳು ಬೇರೆ ಸ್ಥಳಗಳಿಂದ ಬಂದು ನೆಲೆಸಲು ಆರಂಭಿಸಲಾಗಿ, ಆ ಪ್ರಾಂತವು ಜನಭರಿತವಾಗತೊಡಗಿತು. ೧೮೦೩ರಲ್ಲಿ ಎಂದರೆ ಅಬ್ರಹಾಂ ಲಿಂಕನನು ಜನಿಸುವುದಕ್ಕೆ ಆರು ವರ್ಷಗಳಿಗೆ ಮುಂಚೆ, ಅಮೆರಿಕಾದ ಮೂರನೆಯ ಪ್ರೆಸಿಡೆಂಟಾದ ಥಾಮಸ್ ಜಾಫೆರ್‌ಸನ್ ಎಂಬಾತನು ಮಿಸಿಸಿಪ್ಪಿ ನದಿಗೂ ರಾಕೀ ಪರ್ವತದ ಪಙ್ಕ್ತಿಗೂ ಮಧ್ಯದಲ್ಲಿದ್ದ ಆ ಪ್ರಾಂತವನ್ನೆಲ್ಲ ಫ್ರಾನ್ಸಿನವರಿಂದ ಅಮೆರಿಕಾ ಸರ್ಕಾರಕ್ಕಾಗಿ ಬೆಲೆಗೆ ಪಡೆದನು. ಇದರಿಂದ ಆ ಪ್ರಾಂತ್ಯದ ವ್ಯಾಪಾರವು ವಿಶೇಷ ಅಭಿವೃದ್ಧಿಯಾಗಲು ಅವಕಾಶವೊದಗಿತು. ಆ ಕಾಲದಲ್ಲಿ ರೈಲುರಸ್ತೆಗಳಾಗಲೀ, ಸರಿಯಾದ ಬಂಡಿಯ ರಸ್ತೆಗಳಾಗಲೀ ಇರಲಿಲ್ಲ. ಕಾಲುಹಾದಿಗಳಲ್ಲಿ ಪ್ರಯಾಣವಾಗಲೀ, ಪದಾರ್ಥಗಳನ್ನು ಒಂದೆಡೆಯಿಂದ ಮತ್ತೊಂದೆಡೆಗೆ ಸಾಗಿಸುವುದಾಗಲೀ ಅತಿಶಯ ಕಷ್ಟವಾಗುತ್ತಿತ್ತು. ಆಗ ಇದ್ದ ಮುಖ್ಯವಾದ ಪ್ರಯಾಣ ಸೌಕರ್ಯವೆಂದರೆ, ಜಲಮಾರ್ಗವೊಂದೇ! ಕೆಂಟಕಿಯು ಮೇಲೆ ಹೇಳಿದಂತೆ ಅಮೆರಿಕಾ ಸರ್ಕಾರದ ಸ್ವಾಧೀನಕ್ಕೆ ಬಂದ ತರುವಾಯ ಧನವಂತರಾದ ವರ್ತಕರು ಆ

ಮಾರ್ಗವಾಗಿ ನೂರಾರು ದೋಣಿಗಳಲ್ಲಿ ದಿನವೂ ವಿಶೇಷ ದವಸಧಾನ್ಯಗಳನ್ನು ನ್ಯೂ ಆರ್ಲಿಯನ್ಸ್ ಮುಂತಾದ ಪಟ್ಟಣಗಳಿಗೆ ಕಳುಹಿಸಿ, ಅಲ್ಲಿಂದ ದೇಶಾಂತರಗಳಿಗೆ ರಫ್ತು ಮಾಡುತ್ತಿದ್ದರು.

ಅಬ್ರಹಾಂ ಲಿಂಕನನ ಬಾಲ್ಯದಲ್ಲಿ ಕೆಂಟಕಿಯು ಅಮೆರಿಕಾ ಸರ್ಕಾರದ ಒಂದು ಭಾಗವಾಗಿ ದಿನದಿನಕ್ಕೆ ಅಭಿವೃದ್ಧಿಗೆ ಬರುವ ರಾಷ್ಟ್ರವಾಗಿ ಏರ್ಪಟ್ಟಿತು. ಥಾಮಸ್ ಲಿಂಕನನು ಬಹುಕಾಲದಿಂದಲೂ, ಆ ಕೆಂಟಕಿಯ ಅರಣ್ಯಪ್ರಾಂತದಲ್ಲೇ ವಾಸವಾಗಿದ್ದು ಬೇಸತ್ತಿದ್ದುದರಿಂದ, ಅಬ್ರಹಾಮನು ನಾಲ್ಕು ವರ್ಷಗಳ ಬಾಲಕನಾಗಿದ್ದಾಗ ಆ ಸ್ಥಳದಿಂದ ಹೊರಟು ಒಂದು ತೊರೆಯ ಪಕ್ಕದಲ್ಲಿದ್ದ ನಾಬ್ ಕ್ರೀಕ್ (Knob Creek) ಎಂಬೊಂದು ಪ್ರದೇಶದಲ್ಲಿ ಹಿಂದಿನಂತೆಯೇ ಒಂದು ಕೊಠಡಿಯ ಮನೆಯನ್ನು ಕಟ್ಟಿಕೊಂಡು ನೆಲೆಸಿದನು. ಹಳೆಯ ಮನೆಯಿದ್ದ ಸ್ಥಳದಿಂದ ಹೊಸ ಮನೆಗೆ ಪ್ರಯಾಣವು ಬಹು ಕಷ್ಟವಾಗಿದ್ದರೂ, ಮಾರ್ಗದಲ್ಲಿ ಅವರಿಗೆ ಹೊಸಹೊಸ ಸ್ಥಳಗಳು, ಮೃಗಪಕ್ಷಿಗಳು ಬಯಲಿನಲ್ಲಿ ಮರದ ಕೆಳಗೆ ಕುಳಿತು ಮಾಡುವ ಊಟ ಮುಂತಾದುವು ಆ ಕಷ್ಟವನ್ನು ಗಮನಕ್ಕೆ ತರದೆ ಸುಖದಾಯಕವಾಗಿಯೇ ಪರಿಣಮಿಸಿದ್ದಿತು.

ಅಬ್ರಹಾಮನು ದೃಢಗಾತ್ರನಾಗಿ, ತೇಜಸ್ವಿಯಾಗಿ, ತನ್ನ ವಯಸ್ಸಿನ ಇತರ ಹುಡುಗರಿಗಿಂತಲೂ ಎತ್ತರವಾಗಿ ನೋಟಕ್ಕೆ ಲಕ್ಷಣವಾಗಿದ್ದನು. ಅವನಿಗೆ ಕಥೆಗಳನ್ನು ಕೇಳುವುದರಲ್ಲಿ ಬಹು ಆಸೆ. ದಿನದ ಕೆಲಸಕಾರ್ಯಗಳೆಲ್ಲವೂ ಮುಗಿದುವೆಂದರೆ, ತಾಯಿಯು ತನ್ನಾ ಇಬ್ಬರು ಮಕ್ಕಳನ್ನೂ ಬಳಿಯಲ್ಲಿ ಕುಳ್ಳಿರಿಸಿಕೊಂಡು, ತನಗೆ ತಿಳಿದ ಹಲವು ವಿಚಿತ್ರಕಥೆಗಳನ್ನು ಹೇಳಿ ಅವರ ಮನರಂಜನೆ ಮಾಡುವಳು. ಆಕೆಗೆ ಓದುಬರಹಗಳೂ ಬರುತ್ತಿದ್ದುವು. ಅಬ್ರಹಾಮನಿಗೆ ಆಕೆಯೇ ಪ್ರಾರಂಭಕ್ಕೆ ಅಕ್ಷರಾಭ್ಯಾಸ ಮಾಡಿಸಿದಳು. ಆ ಸ್ಥಳದಲ್ಲಿ ಪಾಠಶಾಲೆ ಮುಂತಾದ ಸೌಕರ್ಯಗಳು ಏರ್ಪಟ್ಟಿರಲಿಲ್ಲ. ಆದರೆ ಯಾವಾಗಲಾದರೂ ಒಬ್ಬ ಸಂಚಾರಿ ಉಪಾಧ್ಯಾಯನು (Wandering School Master) ಆ ಪ್ರಾಂತ ಬಂದು,

ಕೆಲವು ವಾರಗಳೋ ಅಥವ ಕೆಲವು ಮಾಸಗಳೋ ಅಲ್ಲಿ ನಿಂತು ಕಲಿಯುವ ಬಾಲಕ ಬಾಲಿಕೆಯರಿಗೆ ಪಾಠಹೇಳಿ ತರುವಾಯ ಹೊರಟುಹೋಗುವನು. ಆದ್ದರಿಂದ ಆ ಪ್ರಾಂತ್ಯದಲ್ಲಿ ವಾಸಿಸಿದ್ದ ಮಕ್ಕಳಿಗೆ ಕ್ರಮವಿದ್ಯಾಭ್ಯಾಸ ನಡೆಯಲು ಅನುಕೂಲತೆ ಇರಲಿಲ್ಲ. ಅಲ್ಲದೆ, ಅನೇಕ ಮಂದಿ ಬಾಲಕರ ತಂದೆತಾಯಿಗಳೂ ಈ ಲೋಪವನ್ನು ಕುರಿತು ಗಮನಿಸತಕ್ಕವರಾಗಿರಲಿಲ್ಲ. ಅವರಿಗೆ ತಮ್ಮ ಮಕ್ಕಳು ಮರದ ದಿಮ್ಮಿಗಳನ್ನು ಕೆತ್ತಲಿಕ್ಕೂ, ಭೂಮಿಯನ್ನು ಉತ್ತು ಬೆಳೆಮಾಡಲಿಕ್ಕೂ. ಮರದ ದಿಮ್ಮಿಗಳಿಂದ ಮನೆ ಕಟ್ಟುವುದರಲ್ಲಿ ತಮಗೆ ಸಹಾಯ ಮಾಡಲಿಕ್ಕೂ ಕಲಿತರೆ ಸಾಕೆಂಬುದೇ ಅಪೇಕ್ಷೆಯಾಗಿದ್ದಿತು. ಹೆಣ್ಣುಮಕ್ಕಳಿಗೆ ಅಡಿಗೆ ಮಾಡಲಿಕ್ಕೂ, ಮನೆಯನ್ನು ಚೊಕ್ಕಟವಾಗಿಟ್ಟುಕೊಳ್ಳಲಿಕ್ಕೂ ಬಂದರೆ ಸಾಕು ಎಂಬುದು ಅವರ ಪರಮಾವಧಿ ಇಷ್ಟವಾಗಿದ್ದಿತು. ಆದರೆ ಅಬ್ರಹಾಮನ ತಾಯಿಯ ವಿಚಾರವೇ ಬೇರೆ. ಆಕೆಯು ಗಾಂಭೀರ್ಯದೆಸೆಯಲ್ಲಿ ಹುಟ್ಟಿ ಬೆಳೆದವಳಾಗಿದ್ದುದರಿಂದ ತನ್ನ ಮಕ್ಕಳು ವಿದ್ಯಾವಂತರಾಗಬೇಕೆಂದು ಅಪೇಕ್ಷೆಯುಳ್ಳವಳಾಗಿ, ಆ ನಾಬ್ ಕ್ರೀಕ್ ಪ್ರಾಂತಕ್ಕೆ ಉಪಾಧ್ಯಾಯನು ಬಂದಾಗಲೆಲ್ಲಾ ತನ್ನ ಮಕ್ಕಳನ್ನು ಆತನ ಬಳಿಗೆ ತಪ್ಪದೆ ಕಳುಹಿಸುತ್ತಿದ್ದಳು. ಒಂದು ಬಾರಿ ಹಾಗೆ ಬಂದ ಉಪಾಧ್ಯಾಯನು, ಕೇವಲ ಎರಡು ಎರಡೂವರೆ ತಿಂಗಳು ಮಾತ್ರವೇ ಇದ್ದನು. ಆಗ ಅಬ್ರಹಾಮನಿಗೆ ಇನ್ನೂ ಐದು ವರ್ಷ ವಯಸ್ಸು ಮಾತ್ರ. ಆದರೂ ಆ ಅನುಕೂಲ ಸಂಧಿಯನ್ನು ಕಳೆದುಕೊಳ್ಳಬಾರದೆಂದು ಸಾಧ್ವಿ ನ್ಯಾನ್ಸಿಯು ತನ್ನ ಮಗನನ್ನು ಆತನ ಬಳಿಗೆ ಕಳುಹಿಸದಳು. ಉಪಾಧ್ಯಾಯನ ಬಳಿಯಲ್ಲಿ ಎಲ್ಲಾ ವಯಸ್ಸಿನ ಬಾಲಕರು ಕುರಿಮಂದೆಯಂತೆ ಸೇರುತ್ತಿದ್ದರಾಗಿ, ಆತನು ಯಾರಿಗೂ ಏನೂ ಹೇಳಿಕೊಡಲು ಸಾಧ್ಯವಾಗುತ್ತಿರಲಿಲ್ಲ. ಅಥವ ಹೆಚ್ಚಾಗಿ ಹೇಳಿಕೊಡುವುದೇನು? ಆತನಿಗೇ ವಿಶೇಷವಾದ ಭಾಷಾ ಜ್ಞಾನವಿರುತ್ತಿರಲಿಲ್ಲ. ಆತನು ಆ ಕಾಲದಲ್ಲಿ ಹೇಳಿಕೊಡುತ್ತಿದ್ದ ಮುಖ್ಯವಿಷಯವೆಂದರೆ ಪದಗಳಲ್ಲಿನ ಅಕ್ಷರ ಸಂಯೋಜನ (Spelling) ಮಾತ್ರ. ಆ ಚಿಕ್ಕವಯಸ್ಸಿನಲ್ಲೇ ಅಬ್ರಹಾಂ ಲಿಂಕನನು ತನ್ನತರಗತಿಯ ಎಲ್ಲರಿಗಿಂತಲೂ ಉತ್ಕೃಷ್ಟ ವಿದ್ಯಾರ್ಥಿಯೆನ್ನಿಸಿಕೊಂಡನು. ಅವನು ಅನೇಕ ಮಂದಿ ಹುಡುಗರಿಗಿಂತಲೂ ಚಿಕ್ಕವನಾಗಿದ್ದನಾದರೂ

ಇತರರಿಗೆ ಮನೆಯಲ್ಲಿ ತಾಯಿಯಿಂದ ಹೇಳಿಸಿಕೊಂಡು ಕಲಿವ ಸೌಕರ್ಯ ವಿರಲಿಲ್ಲವಾದುದರಿಂದ ಅವನು ಬಹುಸುಲಭವಾಗಿಯೇ ಎಲ್ಲರಿಗಿಂತ ಹೆಚ್ಚಾಗಿ ಕಲಿಯಲೂ ಚೆನ್ನಾಗಿ ಪಾಠಮಾಡಲೂ ಅವಕಾಶವಿದ್ದಿತು. ಎಷ್ಟೆಷ್ಟು ದೊಡ್ಡಪದಗಳಿದ್ದರೆ ಅವುಗಳ ಅಕ್ಷರ ಸಂಯೋಜನವನ್ನು ಬಾಯಿಪಾಠ ಮಾಡುವುದನ್ನು ಅಷ್ಟಷ್ಟುಮಟ್ಟಿಗೆ ಹೆಚ್ಚಾಗಿ ಅಬ್ರಹಾಮನು ಮೆಚ್ಚಿ ಕೊಂಡು ಆಸಕ್ತಿಯಿಂದಲೂ ಶ್ರದ್ಧೆಯಿಂದಲೂ ಪಾಠಮಾಡುತ್ತಿದ್ದನು. ಚಿಕ್ಕವಯಸ್ಸಿನವನಾಗಿದ್ದರೂ, ಅವನು ಎತ್ತರವಾಗಿ, ಬಲವಾಗಿ, ಧೈರ್ಯ ಶಾಲಿಯಾಗಿ, ನೀತಿಪರನಾಗಿ, ಸ್ಪಷ್ಟವಾದಿಯಾಗಿ ಇದ್ದನು. ಬಲಶಾಲಿಯಾ ಗಿದ್ದನಾದರೂ ತನಗಿಂತಲೂ ಚಿಕ್ಕವರನ್ನೂ, ಬಲಹೀನರನ್ನೂ ಎಂದೂ ಪೀಡಿಸುತ್ತಿರಲಿಲ್ಲ.

ಮೊದಲನೆಯ ಬಾರಿಬಂದ ಉಪಾಧ್ಯಾಯನು ಆ ಸ್ಥಳದಲ್ಲಿ ಬಹುಕಾಲ ನಿಲ್ಲಲಿಲ್ಲ. ಆ ಸ್ಥಳದ ವಾಸವೂ, ಆ ತನ್ನ ಉದ್ಯೋಗವೂ ಅತಿಶಯ ಬೇ ಸರ ತೋರಲು, ಆತನು ಬಹು ಶೀಘ್ರವಾಗಿಯೇ ಅಲ್ಲಿಂದ ಹೊರಟು ನಡೆ ದನು. ಅಪೂರ್ವವಾಗಿ ಏರ್ಪಟ್ಟಿದ್ದ ಪಾಠಶಾಲೆಯು ಹೀಗೆ ಕೊನೆಗಂಡಿತು. ಕೆಲವು ತಿಂಗಳುಗಳು ಕಳೆಯಲು ಮತ್ತೊಬ್ಬ ಉಪಾಧ್ಯಾಯನು ಬಂದನು. ಪಾಠಶಾಲೆಯು ಪುನಃ ಆರಂಭವಾಯಿತು. ಅನೇಕ ಮಂದಿ ಬಾಲಕರು, ಹಿಂದಿನ ಉಪಾಧ್ಯಾಯನ ಬಳಿ ಕಲಿತಿದ್ದುದನ್ನೆಲ್ಲ ಆತನೊಂದಿಗೇ ಕಳುಹಿಸಿ ಬಿಟ್ಟಿದ್ದರು. ಆದರೆ ಅಬ್ರಹಾಮನ ವಿಚಾರವು ಹಾಗಿರಲಿಲ್ಲ. ಅವನು ಹಿಂದೆ ಕಲಿತಿದ್ದುದನ್ನೆಲ್ಲಾ ದಿನವೂ ಮನೆಯಲ್ಲಿ ಹೇಳಿಕೊಳ್ಳುತ್ತಾ ದೃಢ ಪಡಿಸಿಕೊಂಡಿದ್ದನು. ಮಾತ್ರವಲ್ಲ, ಮುಂದೆ ಹೆಚ್ಚುಹೆಚ್ಚಾಗಿ ಕಲಿಯ ಬೇಕೆಂಬ ಅಪೇಕ್ಷೆಯಾದರೂ ಅವನಲ್ಲಿ ವಿಶೇಷವಾಗಿತ್ತು. ಆದರೇನು, ಒಟ್ಟಿನಮೇಲೆ ಆತನಿಗೆ ನಡೆದ ಈ ಬಗೆಯ ಶಿಕ್ಷಣವೆಂದರೆ ಒಂದು ವರ್ಷ ಕ್ಕಿಂತಲೂ ಕಡಮೆಯಾಗಿಯೇ ಇದ್ದಿತು.

ಬೇರೆಬೇರೆ ಸ್ಥಳಗಳಿಂದ ಬಂದು ಸೇರಿದ ಜನರಿಂದ ಕೆಂಟಕಿಯು ದಿನ ದಿನಕ್ಕೆ ಜನಭರಿತವಾಗ ತಾಗಿತ್ತು. ಹೆಚ್ಚಿನ ವ್ಯಾಪಾರಾದಿಗಳಿಗೆ ಅವಕಾಶ

ವುಂಟಾಗಿ, ಅಲ್ಲಿಯ ಜನರಲ್ಲಿ ಹಲವರು ಪುಷ್ಟರಾಗಿದ್ದರು. ಒಂದಿಗೇ ಆಗ ಪದ್ಧತಿಯುಳ್ಳಿದ್ದಂತೆ, ಒಬ್ಬೊಬ್ಬ ಜಮೀನುದಾರನೂ ಹಲವು ಮಂದಿ ಗುಲಾಮರನ್ನು ತನ್ನ ಸೇವೆಗಾಗಿ ಇಟ್ಟುಕೊಂಡಿರುತ್ತಿದ್ದನು, ಆಗ ಅಲ್ಲಿ ಆಚರಣೆಯಲ್ಲಿದ್ದಂತೆ ಗುಲಾಮರನ್ನು ಇಟ್ಟುಕೊಳ್ಳದಿದ್ದವನು ಒಂದು ಗಣ್ಯವಾದ ಒಕ್ಕಲೆಂಬ ಭಾವನೆಯೇ ಇರಲಿಲ್ಲ. ಅಂತಹ ಸ್ಥಳದಲ್ಲಿ ನಿರ್ಧನನಾಗಿ ವಾಸಿಸುವುದು ಸ್ವೇಚ್ಛಾ ಪ್ರವೃತ್ತಿಯ ಥಾಮಸ್ ಲಿಂಕನನಿಗೆ ಸರಿತೋರಲಿಲ್ಲ. ಅಲ್ಲದೆ, ಇಂಡಿಯಾನಾ ಪ್ರಾಂತವು ಬಹು ಫಲವತ್ತಾದ ಕ್ಷೇತ್ರಗಳಿಂದಲೂ, ಮೃಗಸಮೂಹದಿಂದ ಕೂಡಿದ ಕಾಡುಗಳಿಂದಲೂ, ವಿಸ್ತಾರವಾದ ಹುಲ್ಲುಗಾವಲುಗಳಿಂದಲೂ ವಿರಾಜಿಸುತ್ತಿದೆಯೆಂಬ ವರ್ತಮಾನ ತಿಳಿದು ಆತನ ಮನಸ್ಸನ್ನು ಆಕರ್ಷಿಸಿತು. ಥಾಮಸ್ಸನು ಒಡನೆ ಆ ಪ್ರಾಂತಕ್ಕೆ ಹೋಗಬೇಕೆಂದು ನಿಶ್ಚಯಮಾಡಿದನು.

ಆತನು ಅತ್ಯುತ್ಸಾಹದಿಂದ ಕೆಲಸಕ್ಕೆ ತೊಡಗಿ ಶೀಘ್ರಕಾಲದಲ್ಲೇ ಒಂದು ಚಿಕ್ಕದೋಣಿಯನ್ನು ತಯಾರುಮಾಡಿದನು. ಅದರಲ್ಲಿ ತನ್ನ ಆಯುಧಗಳನ್ನೂ, ಕೆಲವು ವಿಸ್ಕಿ ಪೀಪಾಯಿಗಳನ್ನೂ ಇಟ್ಟುಕೊಂಡು ಓಹಿಯೋ ನದಿಯಮೇಲೆ ಪ್ರಯಾಣಮಾಡಿದನು. ಕೆಲವು ದೂರ ಹೋಗುವುದರೊಳಗಾಗಿಯೇ ಒಂದು ಅಪಾಯವೊದಗಿ, ದೋಣಿಯು ತಲೆಕೆಳಗಾಗಿ ಅವನ ಪದಾರ್ಥಗಳೆಲ್ಲವೂ ನೀರ ಪಾಲಾಗುವುದರಲ್ಲಿದ್ದಿತು. ಆದರೆ ಧೈರ್ಯಶಾಲಿಯಾದ ಆತನು ಆ ಕಷ್ಟನಷ್ಟಗಳಿಗೆ ಅಂಜದೆ ಎಲ್ಲವನ್ನೂ ರಕ್ಷಿಸಿಕೊಂಡು ದಡವನ್ನು ಸೇರಿ, ಆ ಪ್ರಾಂತದ ಅನುಭವವನ್ನು ಕೊಡುವ ಯಾವ ಮನುಷ್ಯನಾದರೂ ಅಲ್ಲಿ ತನಗೆ ದೊರೆಯಬಹುದೋ ಎಂದು ಹುಡುಕಲಾರಂಭಿಸಿದನು. ಸ್ವಲ್ಪ ದೂರದಲ್ಲೇ ಅಂತಹ ಒಬ್ಬ ಮನುಷ್ಯನು ದೊರೆತು ಥಾಮಸನಲ್ಲಿದ್ದ ವಿಸ್ಕಿಯನ್ನೆಲ್ಲಾ ಕೊಂಡುಕೊಂಡು ಆ ಪ್ರಾಂತದ ಪರಿಚಯವನ್ನೂ ತಿಳಿಸಿದನು. ಥಾಮಸನು ಬಹುಸಂತೋಷದಿಂದ, ಅಲ್ಲಿಯ ಕಾಡನ್ನು ಹೊಕ್ಕು ತನ್ನ ವಾಸಕ್ಕೆ ಯೋಗ್ಯವಾದ ಸ್ಥಳವನ್ನು ಚುನಾಯಿಸಿಕೊಳ್ಳಲು ಮುಂದರಿದು ಹುಡುಕಲಾರಂಭಿಸಿದನು. ಕೆಲವು ಮೈಲುಗಳ ದೂರ ಪ್ರಯಾಣಮಾಡುವುದರೊಳಗಾಗಿಯೇ ಪಿಜನ್ ಕ್ರೀಕ್ ಎಂ

ಬೊಂದು ತೊರೆಯು ದೊರೆಯಿತು. ಆದರ ದಂಡೆಯಲ್ಲಿದ್ದ ಮನೋಹರ ವಾದ ಪ್ರಾಂತವು ತನ್ನವಾಸಕ್ಕೆ ಯೋಗ್ಯವಾದುದೆಂದು ನಿರ್ಧರಿಸಿ, ಅಲ್ಲಿ ತನ್ನಗುರುತನ್ನಿಟ್ಟು, ಅದನ್ನು ತನ್ನ ಸ್ವಾಧೀನಕ್ಕೆ ಕೊಳ್ಳಬೇಕೆಂದು ಅಲ್ಲಿಂದ ಎಪ್ಪತ್ತುಮೈಲು ದೂರವಿದ್ದ ಸರ್ಕಾರಿಯ ಕಚೇರಿಗೆ ನಡೆದು ತನ್ನಲ್ಲಿದ್ದಷ್ಟು ಹಣವನ್ನು ಕಟ್ಟಿ, ಆ ಭೂಮಿಯನ್ನು ತನ್ನ ಹೆಸರಿಗೆ ಖಾತೇ ಮಾಡಿಸಿಕೊಂಡು, ಹಿಂದಿರುಗಿ ತನ್ನ ಹೆಂಡಿರು ಮಕ್ಕಳಿದ್ದ ನಾಬ್ ಕ್ರೀಕ್ ಬಳಿಗೆಬಂದನು.

ಅವನು ಹೊರಟವೊದಲು ಅವನ ಕುಟುಂಬದವರು ಬಹು ಕಷ್ಟ ಕ್ಕೊಳಗಾಗಿ ಕಾಲಯಾಪನೆ ಮಾಡುತ್ತಿದ್ದರು. ಆದರೆ ಚಿಕ್ಕವಯಸ್ಸಿನವ ನಾದರೂ ಧೈರ್ಯಶಾಲಿಯೂ ದೃಢಗಾತ್ರನೂ ಆಗಿದ್ದ ಅಬ್ರಹಾಮನೇ ಬೇಟೆಯಿಂದ ಮೃಗಪಕ್ಷಿಗಳನ್ನು ಹಿಡಿದುತಂದು ಕೊಡುತ್ತಲೂ, ಕಟ್ಟಿಗೆ ಕಡಿದು ಹಾಕುತ್ತಲೂ, ನೀರು ತಂದು ಕೊಡುತ್ತಲೂ ಹೀಗೆ ತನ್ನ ತಾಯಿಗೆ ಅನೇಕ ರೀತಿಯಿಂದ ಸಹಾಯ ಮಾಡುತ್ತಿದ್ದನು. ಥಾಮಸ್ ಲಿಂಕನನು ಬಂದೊಡನೆಯೇ ಆ ಹೊಸ ಸ್ಥಳಕ್ಕೆ ಪ್ರಯಾಣವಾಡಬೇಕೆಂಬುದು ನಿಶ್ಚಯ ವಾಯಿತು. ಒಡನೆ ಎರಡು ಕುದುರೆಗಳನ್ನು ತಂದು ಅವುಗಳ ಮೇಲೆ ತಮ್ಮ ಪದಾರ್ಥಗಳನ್ನೆಲ್ಲ ಹೇರಿ ಹೊರಟರು. ಪ್ರಯಾಣವು ಬಹು ಕಷ್ಟದಿಂದ ಸಾಗಿತು. ಆದರೂ ಹೊರಟಮೇಲೆ ಗೊತ್ತಾದ ಒಂದು ಸ್ಥಳವನ್ನು ಸೇರ ಲೇ ಬೇಕಲ್ಲವೆ? ಥಾಮಸ್ ಲಿಂಕನನು ದೀರ್ಘ ಪ್ರಯಾಣಮಾಡಿ, ಹಿಂದೆ ತಾನು ನೋಡಿ ಬಂದಿದ್ದ ಪಿಜನ್ ಕ್ರೀಕ್ ನದೀತೀರದಲ್ಲಿನ ತನ್ನ ಸ್ವಂತ ಕ್ಷೇತ್ರವನ್ನು ಸೇರಿದನು. ಅಲ್ಲಿಯ ದಟ್ಟವಾದ ಕಾಡೂ, ಮೃಗಪಕ್ಷಿಗಳ ಹಿಂಡೂ ಆ ಚಿಕ್ಕಮಕ್ಕಳಿಗೆ ಭೀತಿಜನಕವಾಗಿದ್ದುವು. ಆದರೆ ಥಾಮಸ್ ಲಿಂಕನನು ಅಲ್ಲೇ ಒಂದು ಮನೆಯನ್ನು ಕಟ್ಟಿ ವಾಸಮಾಡಬೇಕೆಂದು ನಿರ್ಧ ರಿಸಿದ್ದನಾದುದರಿಂದ, ಆತನ ಆ ನಿಶ್ಚಯದೆದುರಿಗೆ ಯಾವ ಅಡಚಣೆಯೂ ಅಡ್ಡವಾಗಿ ಬರಲಿಲ್ಲ.

ತಂದೆ ಮಕ್ಕಳಿಬ್ಬರೂ ಕಾಡಿನಿಂದ ಮರಗಳನ್ನು ಕಡಿದುತಂದು, ಮನೆಯನ್ನು ಕಟ್ಟುವ ಪ್ರಯತ್ನನಡೆಸಿದರು. ಆಗ ಅಬ್ರಹಾಮನಿಗೆ ಎಂಟು

ವರ್ಷ ವಯಸ್ಸು. ಆದರೂ, ಪ್ರಕೃತಿಯ ನಿಕಟ ಸಹವಾಸದಲ್ಲೇ ಬೆಳೆದ
ಅವನು ಒಳ್ಳೆಯ ಬಲಶಾಲಿಯಾದ ಬಾಲಕನಾಗಿದ್ದುದರಿಂದ ತನ್ನ ಶಕ್ತಿ
ಮೀರಿ ತಂದೆಗೆ ಸಹಾಯ ಮಾಡುತ್ತಿದ್ದನು. ಕೆಲವು ದಿನಗಳಲ್ಲೇ ಹಿಂದಿನ
ದಕ್ಕಿಂತಲೂ ದೊಡ್ಡದಾದ ಮನೆಯೊಂದು ಕಟ್ಟಲ್ಪಟ್ಟು, ಅವರ ವಾಸಕ್ಕೆ
ಯೋಗ್ಯವಾಯಿತು. ಈ ಹೊಸ ಮನೆಯಲ್ಲಿ ಥಾಮಸನು ಹೆಂಡತಿ ಮಕ್ಕ
ಳೊಂದಿಗೆ ಸುಮಾರು ಎರಡು ವರ್ಷಕಾಲ ವಾಸಮಾಡಿದನೆಂಬ ವೇ
ಳೆಗೆ ಆ ಕುಟುಂಬಕ್ಕೆ ಒಂದು ಮಹತ್ಸಂಕಟವು ಬಂದೊದಗಿತು. ಆಗ ಆ
ಪ್ರಾಂತದಲ್ಲಿ ಪ್ರಬಲವಾಗಿದ್ದ ಬಿಳಿಯ ರೋಗವೆಂಬ ಒಂದು ಬಗೆಯ
ಕ್ಷಯಕ್ಕೆ ಥಾಮಸ್ ಲಿಂಕನನ ಪತ್ನಿಯು ಈಡಾದಳು. ಗಂಡನೂ ಮಕ್ಕ
ಳೂ ಮಾಡಿದ ಉಪಚಾರಾದಿಗಳೊಂದೂ ಉಪಯೋಗಕ್ಕೆ ಬಾರದೆ, ಮುಂದೆ
ಕೆಲವು ದಿನಗಳಲ್ಲೇ ಆಕೆಯು ಮೃತ್ಯುವಶಳಾದಳು. ಮಕ್ಕಳು ಪರದೇಶಿ
ಗಳಾದರು. ಮುಂದೇನು-ಚೆನ್ನಾಗಿ ನೆರಳು ಬೀಳುತ್ತಿದ್ದ ಒಂದು ಮರದ
ಬುಡದಲ್ಲಿ ಆಕೆಯ ದೇಹವನ್ನು ಸಮಾಧಿಮಾಡಿದರು.

ಆ ಕಾಲದಲ್ಲಿ ನಿರ್ಜನ ಪ್ರದೇಶವಾಗಿದ್ದ ಆ ಪ್ರಾಂತದಲ್ಲಿ, ಮತಪ್ರಚಾ
ರಕ ಉಪದೇಶಿಗಳು ವಿಶೇಷವಾಗಿ ಸಂಚರಿಸುತ್ತಿರಲಿಲ್ಲ. ಅಬ್ರಹಾಮನು
ತನ್ನ ಪ್ರಿಯಮಾತೆಯು ಸತ್ತ ಒಂದು ವರ್ಷಕಾಲದೊಳಗಾಗಿಯಾದರೂ,
ಒಬ್ಬ ಉಪದೇಶಿಯನ್ನು ಬರಮಾಡಿಕೊಂಡು, ಆಕೆಯ ಮೃತದೇಹವು
ಸಮಾಧಿಯಾದ ಸ್ಥಳದಲ್ಲಿ ಆತನಿಂದ ಆಕೆಯ ಆತ್ಮಕೃಪ್ತ್ಯರ್ಥವಾಗಿ ಶಾಂತಿ
ವಚನವನ್ನು ಹೇಳಿಸಬೇಕೆಂದು ಸಂಕಲ್ಪಿಸಿ ಒಂದು ಕಾಗದ ಬರೆದನು. ಆ
ಕಾಗದಕ್ಕೆ ಪ್ರತ್ಯುತ್ತರವೂ ಬಂದಿತು. ತರುವಾಯ ಕೆಲವು ದಿನಗಳೊಳ
ಗಾಗಿಯೇ, ಉಪದೇಶಿಯೂ ಬಂದು, ಮೃತಳ ಸದ್ಗುಣ ಸನ್ನಡತೆಗಳನ್ನು
ವರ್ಣಿಸಿ ಆಕೆಯ ಆತ್ಮಕ್ಕೆ ಶಾಂತಿಯನ್ನು ಕೋರಿದನು. ಮಾತೃಭಕ್ತ
ನಾದ ಅಬ್ರಹಾಮನಿಗೆ ಅದು ಬಹು ಸಮಾಧಾನವನ್ನುಂಟು ಮಾಡಿತು.

ಈ ಕಷ್ಟಪರಂಪರೆಯಲ್ಲೂ ಅಬ್ರಹಾಮನು ದಿನವೂ ತನ್ನ ಓದು
ಬರೆಹಗಳನ್ನು ಮಾನಸಿಕ ಮಾಡದೆ ಸಾಧ್ಯವಾದಷ್ಟು ಮಟ್ಟಿಗೆ ಅದನ್ನು ಅಭಿ

ವೃದ್ಧಿ ಪಡಿಸಿಕೊಳ್ಳುತ್ತಲೇ ಇದ್ದನು. ಅವನ ಬಳಿ ಆಗ ಇದ್ದ ಪುಸ್ತಕಗಳೆಂದರೆ, ಕೇವಲ ಮೂರು ಮಾತ್ರ. ಬೈಬಲೊಂದು, ಈಸೋಪನ ನೀತಿಕಥೆಗಳ ಪುಸ್ತಕವೊಂದು, ಪಿಲ್‌ಗ್ರಿಮ್ಸ್ ಪ್ರೋಗ್ರೆಸ್ ಎಂಬ ಗ್ರಂಥವೊಂದು. ಈ ಮೂರು ಗ್ರಂಥಗಳೂ ಅವನಿಗೆ ಮೂರು ಕೋಟಿ ವರಹಗಳ ಬೆಲೆಯುಳ್ಳ ಅಮೌಲ್ಯನಿಧಿಗಳೆಂಬ ಭಾವನೆಯಿದ್ದಿತು. ಅಬ್ರಹಾಮನು ತನ್ನ ಕೆಲಸಕಾರ್ಯಗಳಲ್ಲಿ ಸ್ವಲ್ಪಮಾತ್ರ ಅವಕಾಶ ದೊರೆತರೆ, ಅಷ್ಟುಕಾಲವನ್ನೂ ವ್ಯರ್ಥಮಾಡದೆ, ಆ ಗ್ರಂಥಗಳನ್ನು ಪಾಠಮಾಡುತ್ತಿದ್ದನು. ಹೀಗಾಗಿ ಆ ಮೂರು ಗ್ರಂಥಗಳ ಬಹುಭಾಗವು ಆತನಿಗೆ ಕಂಠಸ್ಥವಾಗಿ ಬರುತ್ತಿದ್ದಿತು. ಅತಿಶಯ ವಾಚನಾಭಿರುಚಿಯುಳ್ಳವನಾಗಿದ್ದ ಅವನಿಗೆ ಮುಂದೆ ಒಂದು ದಿನ ಹೆನ್ರಿಕ್ಲೇ ಎಂಬಾತನ ಜೀವನ ಚರಿತ್ರೆಯೊಂದು ಲಭಿಸಿತು. ಅದನ್ನು ಓದುತ್ತಾ ಓದುತ್ತಾ ಅವನ ಆಶ್ಚರ್ಯವೂ ಅಧಿಕವಾಯಿತು. ಒಂದಿಗೇ ಮಹಾಪುರುಷರ ಜೀವನ ಚರಿತ್ರೆಗಳನ್ನು ಓದುವ ವಿಷಯದಲ್ಲಿ ವಿಶೇಷ ಪ್ರೇಮವುಂಟಾಯಿತು. ತರುವಾಯ ಆತನ ನೆರೆಹೊರೆಯಲ್ಲಿ ವಾಸಿಸುತ್ತಿದ್ದ ಒಬ್ಬಾತನ ಬಳಿಯಲ್ಲಿದ್ದ ಜಾರ್ಜ್ ವಾಷಿಂಗ್ಟನನ ಚರಿತ್ರೆಯು ದೊರೆಯಿತು. ಅಮೆರಿಕಾ ದೇಶದ ಮೊದಲನೆಯ ಪ್ರೆಸಿಡೆಂಟಾದ ಆತನ ಅಮೌಲ್ಯ ಚರಿತ್ರೆಯನ್ನು ಅಬ್ರಹಾಮನು ಅನ್ನ ನೀರುಗಳನ್ನು ಬಿಟ್ಟು ಓದಿ ಮುಗಿಸಿದನು. ಆ ವೇಳೆಗೆ ಆ ಚರಿತ್ರೆಯ ಮತ್ತೊಬ್ಬ ಗ್ರಂಥಕರ್ತನು ಇನ್ನೂ ವಿಸ್ತಾರವಾಗಿ ಬರೆದಿದ್ದಾನೆಂಬ ವರ್ತಮಾನವು ತಿಳಿಯಿತು. ಒಡನೆ ಹೊರಟು ಬಹು ಕಷ್ಟಪಟ್ಟು ಅದನ್ನು ಸಂಗ್ರಹಿಸಿ, ಓದಲು ಪ್ರಾರಂಭಿಸಿ ದೀಪದಲ್ಲಿ ಎಣ್ಣೆಯು ಮುಗಿದು ಆರುವವರೆಗೂ ಕುಳಿತನು. ತರುವಾಯ ಅದನ್ನು ಅಲ್ಲೇ ಇದ್ದ ಮರದ ಹಲಗೆಯ ಒಂದು ಪೊಟರೆಯಲ್ಲಿಟ್ಟು ಮಲಗಿದನು. ರಾತ್ರೆ ವಿಶೇಷ ಮಂಜು ಸುರಿದು ಪುಸ್ತಕವು ಸಂಪೂರ್ಣ ನೆನೆದು ಹೋಯಿತು. ಪ್ರಾತಃಕಾಲ ಎದ್ದೊಡನೆಯೇ ಪುಸ್ತಕಕ್ಕೆ ಪ್ರಾಪ್ತವಾದ ಆ ದುರವಸ್ಥೆಯನ್ನು ನೋಡಿ ಅವನಿಗೆ ಬಹು ವ್ಯಸನವೂ ಭಯವೂ ಉಂಟಾದುವು. ಅದನ್ನು ಸ್ವಂತಗಾರನ ಬಳಿಗೆ ಕೊಂಡೊಯ್ದು, ಅಕಸ್ಮಾತ್ತಾಗಿ ಪ್ರಾಪ್ತವಾದ ಆ ಅನಾಹುತವನ್ನು ಕುರಿತು ಬಹು ವ್ಯಸನದೊಂದಿಗೆ ತಿಳಿಸಿದನು. ಆತನು ಕೋಪ

ಗೊಂಡು ಲಿಂಕನನನ್ನು ಗದರಿಸಿದನಾದರೂ, ಲಿಂಕನನು ತಪ್ಪು ತನ್ನದಾದುದರಿಂದ ಅದನ್ನು ಸಮಾಧಾನದಿಂದ ಸಹಿಸಿಕೊಂಡು, ಯಾವುದಾದರೊಂದು ಬಗೆಯಿಂದ ಆತನ ಸೇವೆಮಾಡಿ ತನ್ನ ತಪ್ಪಿನಿಂದ ಉಂಟಾದ ನಷ್ಟವನ್ನು ನೇರಿಸಿಕೊಡುತ್ತೇನೆಂದು ಬೇಡಿಕೊಂಡನು. ಮೂರು ದಿನ ಹಗಲು ಹುಲ್ಲು ತಂದು ಹಾಕಬೇಕೆಂದು ತೀರ್ಮಾನವಾಯಿತು. ಲಿಂಕನನು ಮನಸ್ಸಿನಲ್ಲಿ ಸ್ವಲ್ಪವೂ ಕಳಂಕವಿಲ್ಲದೆ ಹಾಗೆಯೇ ಮಾಡಿದನು. ಅಬ್ರಹಾಮನ ವಿನಯ ವಿಧೇಯತೆಗಳಿಗೆ ಸುಪ್ರೀತನಾದ ಆ ಗೃಹಸ್ಥನು, ಹಾಗೆ ಕೆಟ್ಟುಹೋಗಿದ್ದ ಆ ಗ್ರಂಥವನ್ನು ಅವನಿಗೇ ಕೊಟ್ಟುಬಿಟ್ಟನು. ಅದನ್ನು ಹೀಗೆ ತನ್ನದಾಗಿ ಪಡೆದ ಅಬ್ರಹಾಮನ ಆನಂದಕ್ಕೆ ಪಾರವೇ ಇರಲಿಲ್ಲ. ಈ ವಾಷಿಂಗ್ಟನ್ನನ ಜೀವನ ಚರಿತ್ರೆಯನ್ನು ಮೇಲೆಮೇಲೆ ಓದಿ, ತನ್ನದೇಶೀಯರು ಸ್ವಾತಂತ್ರ್ಯವನ್ನು ಸಾಧಿಸುವುದಕ್ಕಾಗಿ, ತಮ್ಮ ತನುಮನಧನಗಳನ್ನು ಹೇಗೆ ಸೂರೆಗೊಟ್ಟರೆಂಬುದನ್ನು ತಿಳಿದು, ಆತನ ಮನಸ್ಸು ಅತಿಶಯ ಆನಂದಗೊಂಡಿತು. ತೀಕ್ಷ್ಣವಾದ ಆತನ ಬುದ್ಧಿಗೆ ಅನೇಕ ವಿಚಾರಗಳು ಸ್ಫುರಿಸಿ ಉತ್ತೇಜನಗೊಳಿಸುತ್ತಿದ್ದುವು.

ಪತ್ನೀವಿಯೋಗವಾದ ಮೇಲೆ ಇಂಡಿಯಾನಾ ಪ್ರಾಂತದ ಹೊಸ ಮನೆಯಲ್ಲಿ ಕೆಲವು ದಿನಗಳು ವಾಸಿಸಿದ್ದ ತರುವಾಯ, ಒಂದಾನೊಂದು ದಿನ ಥಾಮಸ್ ಲಿಂಕನನು ಮನೆಯ ಮಕ್ಕಳಲ್ಲಿ ಯಾರಿಗೂ ಹೇಳದೆಯೇ ಕೆಂಟಕಿ ಪ್ರಾಂತಕ್ಕೆ ಹೊರಟುಹೋದನು. ಆತನು ಎಲ್ಲಿಗೆ ಹೋದನೆಂದು ಯಾರಿಗೂ ತಿಳಿದಿರಲಿಲ್ಲ. ಮುಂದೆ ಕೆಲವು ದಿನಗಳೊಳಗಾಗಿ ಒಬ್ಬ ಹೆಂಗಸನ್ನು ಜೊತೆಗೆ ಕರೆತಂದನು. ಆಕೆಯು ತಮ್ಮ ತಾಯಿಯಾಗಿ ಬಂದಳೆಂಬ ಸಂಗತಿಯು ತಿಳಿದು ಹುಡುಗರಿಗೆ ಪರಮಾನಂದವಾಯಿತು. ಆ ಸ್ತ್ರೀಯು ಸುಗುಣಶೀಲಳೂ ದಯಾಮಯಿಯೂ ಆಗಿ ತನ್ನ ಆ ಬಲಮಕ್ಕಳನ್ನು ವಿಶೇಷ ಪ್ರೇಮದಿಂದ ರಕ್ಷಿಸುತ್ತಿದ್ದಳು. ಅಬ್ರಹಾಮನು ಆಕೆಯ ವಿಷಯದಲ್ಲಿ ವಿಶೇಷ ವಿನಯ ವಿಧೇಯತೆಗಳಿಂದ ನಡೆದುಕೊಳ್ಳುತ್ತಾ, ಆಕೆಯ ಆಜ್ಞೆಯನ್ನು ಒಡನೆ ನಡೆಯಿಸುತ್ತಾ ಅಚ್ಚುಮೆಚ್ಚಾಗಿದ್ದನು. ತರುವಾಯ ಮನೆಯ ಕೆಲಸಕಾರ್ಯಗಳ ಗೊಂದಲವು ಸ್ವಲ್ಪಮಟ್ಟಿಗೆ

ಕಡಮೆಯಾಗಲು, ಆತನು ನೆರೆಹೊರೆಯವರಲ್ಲಿದ್ದ ಹಲವು ಗ್ರಂಥಗಳನ್ನು ತಂದು ಅತ್ಯಾಸಕ್ತಿಯಿಂದ ಓದಿ ವಿಶೇಷ ವಿಷಯ ಸಂಗ್ರಹವಮಾಡಿದನು. ಮುಂದೆ ಕೆಲವು ದಿನಗಳಲ್ಲೇ ಅವನಿಗೆ ಷೇಕ್ಸ್‌ಪಿಯರ್ ಮಹಾಕವಿಯ ನಾಟಕಗಳ ಪುಸ್ತಕವೊಂದು ದೊರೆಯಿತು. ಇದನ್ನೂ ಅತ್ಯಾತುರದಿಂದ ಆದ್ಯಂತವಾಗಿ ಓದಿ ಮುಗಿಸಿ, ಹಲವು ಸಂಗತಿಗಳನ್ನು ಬರೆದಿಟ್ಟುಕೊಂಡು ಬಾಯಿಗೆ ಗಟ್ಟಿಮಾಡಿದನು.

ಹೀಗಿರುವಲ್ಲಿ ಅವರ ಮನೆಗೆ ಒಂದು ಒಂದೂವರೆ ಮೈಲು ದೂರದಲ್ಲಿ ಒಂದು ಪಾಠಶಾಲೆಯು ಸ್ಥಾಪನೆಯಾಯಿತು. ಒಡನೆ ಲಿಂಕನನು ಲೇಶಮಾತ್ರವೂ ಸಾವಕಾಶ ಮಾಡದೆ ಅಲ್ಲಿಗೆ ಹೋಗಲು ನಿಶ್ಚಯಿಸಿ, ಸ್ವಲ್ಪ ಕಾಲವನ್ನೂ ವ್ಯರ್ಥಗೊಳಿಸದೆ ಅಲ್ಲಿ ದೊರೆಯಲವಕಾಶವಿದ್ದಷ್ಟೂ ಅಭ್ಯಾಸ ಮಾಡಿದನು. ಪಾಠದ ವೇಳೆಯು ಮುಗಿದು ಹೊಲದಲ್ಲಿ ನೇಗಿಲು ಹಿಡಿದು ಕೆಲಸ ಮಾಡುವಾಗ ಅವನು ತನ್ನ ಪಾಠಗಳನ್ನು ಸ್ಮರಿಸಿಕೊಳ್ಳುತ್ತಾ ಜ್ಞಾಪಕ ಶಕ್ತಿಯನ್ನು ಹೆಚ್ಚಿಸಿಕೊಳ್ಳುತ್ತಿದ್ದನು.

ಒಂದು ದಿನ ನ್ಯಾಯಸ್ಥಾನದಲ್ಲಿ ನಡೆಯುತ್ತಿದ್ದ ಮೊಕದ್ದಮೆಯ ವಿಚಾರಣೆಯನ್ನು ನೋಡತಕ್ಕಂತಹ ಒಂದು ಅವಕಾಶವು ಅವನಿಗೆ ಒದಗಿತು. ಅದರಲ್ಲಿ ಅಪರಾಧಿಯ ಪಕ್ಷವನ್ನು ವಹಿಸಿ ವಾದಿಸುತ್ತಿದ್ದ ಕೆಂಟಕಿಯ ಒಬ್ಬ ನ್ಯಾಯವಾದಿಯ ವಾಕ್ಪ್ರೌಢಿಮೆಯು, ಹದಿನೇಳು ವರ್ಷ ವಯಸ್ಸಿನ ಅಬ್ರಹಾಮನಿಗೆ ಪರಮಾಶ್ಚರ್ಯವನ್ನುಂಟುಮಾಡಿತು. ಬಾಯಿಯುಳ್ಳ ಮನುಷ್ಯನು ಪ್ರಪಂಚದಲ್ಲಿ ತನ್ನ ಮನಸ್ಸಿನಲ್ಲಿದ್ದ ವಿಚಾರವನ್ನು ಸ್ಪಷ್ಟವಾಗಿ ಜನಗಳಿಗೆ ತಿಳಿಸುವ ಈ ಅಮೌಲ್ಯ ಸಾಧನದಿಂದ ಹಲವು ಕಾರ್ಯಗಳನ್ನು ಸಾಧಿಸಲು ಸಾಧ್ಯವುಂಟೆಂದು ಆತನಿಗೆ ಮನವರಿಕೆಯಾಯಿತು. ತರುವಾಯ ಲಿಂಕನನು ಅವಕಾಶ ದೊರೆತಾಗಲೆಲ್ಲ ಉಪನ್ಯಾಸ ಮಾಡುವುದನ್ನು ಅಭ್ಯಸಿಸತೊಡಗಿದನು. ಅನೇಕ ಸಂದರ್ಭಗಳಲ್ಲಿ ತನ್ನ ಉಪನ್ಯಾಸವನ್ನು ಕೇಳುವವರು ಇರಬೇಕೆಂಬ ಆವಶ್ಯಕವೂ ಅವನಿಗಿರಲಿಲ್ಲ. ಒಂದು ನ್ಯಾಯಸ್ಥಾನವನ್ನು ಕಲ್ಪಿಸಿಕೊಂಡು, ಅದರಲ್ಲಿ ನ್ಯಾಯಾಧಿಪತಿಯೂ,

ಫಿರ್ಯಾದಿ ಅಪರಾಧಿಗಳ ನ್ಯಾಯವಾದಿಗಳೂ ತಾನೇ ಆಗಿ, ಸಂದರ್ಭಾನುಸಾರ ಉಭಯಪಕ್ಷಗಳಿಂದಲೂ ತಾನೇ ವಾದಿಸುತ್ತಾ, ಕೊನೆಗೆ ನ್ಯಾಯಾಧಿಪತಿಯ ಸ್ಥಾನದಿಂದ ಕೊಡಬೇಕಾದ ತೀರ್ಮಾನವನ್ನು ನಿಶ್ಚಯಿಸಿ ಹೇಳುತ್ತಿದ್ದನು. ಹೀಗೆ ಆತನು ಎಷ್ಟು ಬಡವನೂ, ಕ್ರಮ ವಿದ್ಯಾಭ್ಯಾಸಕ್ಕೆ ತಕ್ಕ ಅನುಕೂಲತೆಯಿಲ್ಲದ ಕುಗ್ರಾಮವಾಸಿಯೂ ಆಗಿದ್ದರೂ, ಸ್ವಯಂ ಪರಿಶ್ರಮದಿಂದ ಹೀಗೆ ವಿಶೇಷ ಜ್ಞಾನಲಾಭವನ್ನು ಹೊಂದಿ, ಮುಂದೆ ತನ್ನ ಜೀವಿತದಲ್ಲಿ ಸಾಧಿಸಿದ ಮಹತ್ಕಾರ್ಯಕ್ಕೆ ತಕ್ಕ ಯೋಗ್ಯತೆಯನ್ನು ಸಂಪಾದಿಸಿ ಕೊಳ್ಳುತ್ತಿದ್ದನು.



## ಅಧ್ಯಾಯ ೩. 'ಬ್ಲಾಕ್ ಹಾಕ್ ದಂಗೆ'

ವಿದ್ಯಾಭ್ಯಾಸವು ಈ ಬಗೆಯಿಂದ ಸಾಗುತ್ತಿದ್ದ ಕಾಲದಲ್ಲಿ ಅವನು ಇತರ ವಿಚಾರಗಳಲ್ಲಿ ಸೋಮಾರಿಯಾಗಿರಲಿಲ್ಲ. ತಂದೆಯೊಂದಿಗೆ ಹೊಲಗದ್ದೆಗಳಲ್ಲಿ ವ್ಯವಸಾಯ ಮಾಡುವುದು, ಮನೆಗಾಗಿ ಕಟ್ಟಿಗೆ ಕಡಿದು ತಂದು ಒದಗಿಸುವುದು, ನೀರು ಸೇದಿ ತಂದು ಹಾಕುವುದು ಮುಂತಾದ ಕೆಲಸಗಳನ್ನೆಲ್ಲಾ ಉಚ್ಚ ನೀಚವೆಂಬ ಭಾವನೆಯಿಲ್ಲದೆ ಮಾಡುತ್ತಾ, ಅನೇಕ ವೇಳೆಯಲ್ಲಿ ತನ್ನ ಬಲತಾಯಿಯ ಕೆಲಸಕಾರ್ಯಗಳಲ್ಲೂ ನೆರವಾಗುತ್ತಿದ್ದನು. ಆ ವೇಳೆಗೆ ಹದಿನೇಳು ಹದಿನೆಂಟು ವರ್ಷಗಳ ಪ್ರಾಯಸ್ಥನಾಗಿ, ದೀರ್ಘದೇಹಿಯಾಗಿ, ದೃಢಾಂಗನಾಗಿದ್ದ ಅಬ್ರಹಾಮನಿಗೆ ಇನ್ನು ಮನೆಯ ಬಳಿಯ ಪ್ರಾಂತವನ್ನು ಬಿಟ್ಟು ಹೊರಕ್ಕೆ ಹೋಗಿ ಪ್ರಪಂಚವನ್ನು ನೋಡಬೇಕು ಎಂಬ ಅಪೇಕ್ಷೆಯುಂಟಾಯಿತು. ಒಡನೆ ಒಂದು ದೋಣಿಯನ್ನು ಕಟ್ಟಿ ಅದರಲ್ಲಿ ತಮ್ಮ ಕ್ಷೇತ್ರಗಳಲ್ಲಿ ಬೆಳೆದ ಪದಾರ್ಥಗಳನ್ನು ತುಂಬಿಕೊಂಡು ಪಟ್ಟಣಗಳ ಪ್ರಾಂತಕ್ಕೆ ಹೊರಟನು. ಅಲ್ಲಿ ಅವನು ಪದಾರ್ಥಗಳನ್ನು ವಿಕ್ರಯಿಸಿ ದುಡ್ಡು ಸಂಪಾದಿಸಿದುದೇ, ಅವನು ನಾಣ್ಯವೆಂಬ ವಸ್ತುವು ಪ್ರಪಂಚದಲ್ಲಿದೆ ಎಂದು ತಿಳಿವುದಕ್ಕೆ ಮೊದಲು. ಅವನಿಗೆ, ಆಗಲೇ

ಲೋಕದಲ್ಲಿ ದ್ರವ್ಯಾರ್ಜನೆ ಎಂಬ ಕೆಲಸವೂ ಒಂದು ಉಂಟೆಂದು ಮನ ವರಿಕೆಯಾದುದು. ಹುಟ್ಟಿದಾಗಿನಿಂದ ಕೂಪಕೂರ್ಮದಂತೆ ಇದ್ದ ಅವನು ಈಗ ಪಟ್ಟಣದಲ್ಲಿ ಜನಸಮೂಹವನ್ನೂ, ಜನರ ಚಟುವಟಿಕೆಯನ್ನೂ, ಅವರ ಬಟ್ಟೆಬರೆಗಳು, ನಡೆನುಡಿಗಳು ಮುಂತಾದುವನ್ನೂ ಕಂಡು ಆಶ್ಚರ್ಯ ಪಟ್ಟು, ತಾನೂ ಆಗಾಗ ಹಾಗೆ ಪಟ್ಟಣಗಳನ್ನು ಸಂದರ್ಶಿಸಿ ಏಕೆ ದ್ರವ್ಯ ಸಂಪಾದನೆ ಮಾಡಬಾರದು ಎಂದು ಯೋಚಿಸಿಕೊಂಡನು.

ಹೀಗೆ ಒಂದು ಸಾರಿ ಹೊರಟು ಸ್ವಂತವಾಗಿ ವ್ಯಾಪಾರ ಮಾಡಿಕೊಂಡು ಹಿಂದಿರುಗಿದ ತರುವಾಯ, ಅವನ ವ್ಯಾಪಾರ ಬಿಟ್ಟಂತಾಯಿತು. ಎರಡ ನೆಯ ಬಾರಿ ಜಂಟಿ, ಎಂಬಾತನಿಗೆ ಸಹಾಯಕನಾಗಿ ಪದಾರ್ಥಗಳನ್ನು ವಿಕ್ರ ಯಿಸಲು ನ್ಯೂ ಆರ್ಲಿಯನ್ಸ್ ಎಂಬ ಪಟ್ಟಣಕ್ಕಾಗಿ ಹೊರಟನು. ಬಲ ಶಾಲಿಯಾದ ಅಬ್ರಹಾಮನು ತಾನೇ ಆ ದೊಡ್ಡ ದೋಣಿಯನ್ನು ನಡೆಯಿಸಿ ಕೊಂಡು, ಸುತ್ತಮುತ್ತಲಿನ ವನಪ್ರಾಂತದ ಅಪೂರ್ವ ದೃಶ್ಯಗಳನ್ನೂ ನಂದನೋದ್ಯಾನಗಳಂತಿದ್ದ ಗದ್ದೆ ತೋಟಗಳನ್ನೂ ಕಂಡು ಪರಮಾನಂದ ದಿಂದ ಕೇಕೆಹಾಕುತ್ತಾ, ಬಹು ಸಂಭ್ರಮದಿಂದ ಪ್ರಯಾಣಮಾಡಿದನು. ಅವರ ಪ್ರಯಾಣದಲ್ಲಿ ಓಹಿಯೋ ನದೀಪ್ರಾಂತದ ಹಲವು ಊರಗಳವರು, ಅವರನ್ನು ಅಲ್ಲಲ್ಲಿ ಸಂಧಿಸಿ, ಅವರ ಯೋಗಕ್ಷೇಮವನ್ನು ವಿಚಾರಿಸಿದರು. ಅಬ್ರಹಾಮನೂ ಅವರೊಂದಿಗೆ ಸ್ನೇಹಪ್ರೇಮಗಳಿಂದ ಸಂಭಾಷಿಸುತ್ತಾ ಅಲ್ಲಲ್ಲಿ ತಮ್ಮ ಸರಕುಗಳನ್ನು ವಿಕ್ರಯಿಸುತ್ತಾ ಮುಂದರಿಸಿದನು. ಹೀಗೆ ಆ ಓಹಿಯೋ ನದಿಯಮೇಲೆ ಪ್ರಯಾಣವನ್ನು ಸಾಗಿಸಿ, ಮಿಸಿಸಿಪ್ಪೀ ನದಿಯ ದಕ್ಷಿಣ ಪ್ರಾಂತವನ್ನು ಸೇರುವ ಮುಂಚೆಯೇ ಅವರ ಪದಾರ್ಥ ಗಳೆಲ್ಲವೂ ಮಾರಿಕೆಯಾಗಿ ಹೋದುದರಿಂದ ಅವರು ನ್ಯೂ ಆರ್ಲಿಯನ್ಸ್ ವರೆಗೆ ಹೋಗಬೇಕಾದ ಆವಶ್ಯಕವೇ ಉಂಟಾಗಲಿಲ್ಲ. ಸರಕುಗಳೂ ವಿಶೇಷ ಲಾಭಕ್ಕೆ ವಿಕ್ರಯವಾದುದರಿಂದ ಅವರು ಬರಿದಾದ ದೋಣಿಯನ್ನು ಪುನಃ ಪ್ರವಾಹಕ್ಕೆದುರಾಗಿ ನಡೆಯಿಸಿಕೊಂಡು ಹೋಗುವ ಕಷ್ಟವೇತಕ್ಕೆಂದು ಅದನ್ನೂ ಅಲ್ಲೇ ಲಾಭಕ್ಕೆ ಮಾರಿಬಿಟ್ಟು ತರುವಾಯ ಹೊಗೆಯ ಜಹಜಿನಲ್ಲಿ ಕುಳಿತು ಪ್ರಯಾಣಮಾಡಿದರು. ಆ ಪ್ರಯಾಣ ಕಾಲದಲ್ಲಿ ಜಹಜಿನ

ಕ್ಯಾಪ್ಟನನು ಅಬ್ರಹಾಮನ ಭವ್ಯಾಕೃತಿಯನ್ನೂ, ಮುಖದಲ್ಲಿ ಕಂಡು ಬರುತ್ತಿದ್ದ ಧೈರ್ಯ-ವೀರ್ಯಗಳ ತೇಜಸ್ಸನ್ನೂ ಕಂಡು ತನ್ನಲ್ಲಿ ಉದ್ಯೋಗಕ್ಕೆ ನಿಲ್ಲೆಂದು ಕೇಳಿದನು. ಆದರೆ ಅಬ್ರಹಾಮನು, ತಾನು ಇನ್ನೂ ತಂದೆಯ ಅಧೀನದಲ್ಲಿ ಇರತಕ್ಕವನಾದುದರಿಂದ ಸ್ವತಂತ್ರವಾಗಿ ಹಾಗೆ ಮಾಡಲು ಸಾಧ್ಯವಿಲ್ಲವೆಂದು ಹೇಳಿದನು.

ಈ ಪ್ರಯಾಣದಲ್ಲಿ ಅಬ್ರಹಾಮು ಲಿಂಕನನ ದೃಷ್ಟಿಗೋಚರವಾದ ಒಂದು ವಿಚಾರ ಮಾತ್ರ ಎಂದಿಗೂ ಮರೆಯದಂತಹ ಪರಿಣಾಮವನ್ನು ಅವನ ಮನಸ್ಸಿನ ಮೇಲೆ ಉಂಟುಮಾಡಿತು. ಜಹಜಿನಲ್ಲಿ ಧನವಂತರ ವಿಕ್ರೀತ ದಾಸರಾಗಿ, ಪಶುಗಳಿಗಿಂತಲೂ ನೀಚರಾಗಿ ಎಣಿಸಲ್ಪಟ್ಟು, ದುಡಿಯುತ್ತಿದ್ದ ಗುಲಾಮರ ಕಷ್ಟದ ದೃಶ್ಯವು ಆತನ ಕರುಳನ್ನು ಮರುಗಿಸಿತು. 'ಅಕ್ಕಟಾ, ಇದೇನೀ ಅನ್ಯಾಯವು. ಮನುಷ್ಯನು ಪಶುಗಳಿಗಿಂತಲೂ ಕೀಳೆಂಬ ಈ ಭಾವನೆಗೂ ಪ್ರಪಂಚದಲ್ಲಿ ಅವಕಾಶವುಂಟೆ? ಪಶುಗಳಿಗೆ ಜೀತವಿಲ್ಲ. ಅವುಗಳಿಗಾದರೂ ಈ ದುರ್ದೈವಿ ಮನುಷ್ಯ ಪ್ರಾಣಿಗಳಿಗಿಂತ ಹೆಚ್ಚಿನ ಸ್ವಾತಂತ್ರ್ಯವುಂಟಲ್ಲ. ಈ ಬಡ ಪ್ರಾಣಿಗಳು ಹುಟ್ಟಿ ಬೆಳೆದುದೆಲ್ಲಿ! ಇವರ ದೇಹಾನುಬಂಧಿಗಳೆಲ್ಲಿ? ಇವರನ್ನು ಒಬ್ಬನು ಒಂದು ಬಾರಿ ಕೊಂಡನೆಂದರೆ ತೀರಿತಲ್ಲಾ! ಈ ಹತಭಾಗ್ಯನು ತಮ್ಮ ತಂದೆತಾಯಿ ಮಕ್ಕಳು ಅಣ್ಣತಮ್ಮಂದಿರು ಅಕ್ಕತಂಗಿಯರು ಮುಂತಾದ ಯಾರನ್ನೂ ಪುನಃ ಎಂದೆಂದಿಗೂ ನೋಡುವ ಆಸೆಯೇ ಇಲ್ಲದೆ ಮೂಕಪ್ರಾಣಿಗಳಂತೆ ಈ ಧನವಂತರೆಂಬ ರಾಕ್ಷಸರ ಅಧೀನರಾಗಿ ಎಲ್ಲಿಗೆಂದರಲ್ಲಿಗೆ ಹೋಗಟ್ಟು, ಮಿತಿಯಿಲ್ಲದ ಕಷ್ಟಕ್ಕೆ ಒಳಪಡುವರಲ್ಲ. ಇವರ ಕಷ್ಟಕ್ಕೆ ತಕ್ಕ ಫಲವೇನು! ಅಕ್ಕಟಾ, ಒಬ್ಬೊಬ್ಬನು ಇಬ್ಬರು ಮೂವರ ಹೊರೆಯನ್ನು ಬಲವಂತದಿಂದ ಬೆನ್ನು ಮುರಿವಂತೆ ಹೊರಬೇಕಾಗಿದೆಯಲ್ಲಾ! ಇದೆಂತಹ ಘಾತುಕಕಾರ್ಯ? ಭಗವಂತನು ಮಾನವ ಪ್ರಾಣಿಗಳೆಲ್ಲರನ್ನೂ ಸಮಾನವಾಗಿ ಸೃಷ್ಟಿಸಿಲ್ಲವೆ? ಅದರಲ್ಲಿ ಒಬ್ಬನು ಮತ್ತೊಬ್ಬನಿಗೆ ಗುಲಾಮನಾಗಿ, ಪಶುಪ್ರಾಯನಾಗಿ-ವಿಕ್ರೀತ ದಾಸನಾಗಿ ಬಿದ್ದಿರುವುದು ಯಾವ ನ್ಯಾಯ? ಪರಮಾನ್ಯಾಯ ಪರಮಾನ್ಯಾಯ. ಇದು ಭಗವಾನನ ದೃಷ್ಟಿಯಲ್ಲಿ ಅಗಾಧ ದ್ರೋಹಕರ

ಕಾರ್ಯ! ಎಂಬ ಮುಂತಾದ ಯೋಚನೆಗಳು ಆತನ ಮನಸ್ಸಿನಲ್ಲಿ ಉಂಟಾದುವು. ದಯಾಭರಿತ ಹೃದಯನಾದ ಆತನ ಕಣ್ಣುಗಳಿಂದ ನೀರು ಧಾರಾಕಾರವಾಗಿ ಸುರಿಯಿತು.—'ಅಕ್ಕಟಾ, ಈ ದುರ್ದೈವಿಗಳು ಲೇಶಮಾತ್ರವೂ ಪ್ರತಿಫಲವನ್ನರಿಯದ ಈ ಕಾರ್ಯಕ್ಕಾಗಿ ಅಸಹನೀಯವಾದ ಕಷ್ಟಪಡುವರಲ್ಲಾ! ಈ ದಾಸ್ಯದ ದುರ್ವಿಧಿಯನ್ನು ತಪ್ಪಿಸಿ, ಈ ಬಡಪ್ರಾಣಿಗಳೂ ಇತರ ಮನುಷ್ಯರಂತೆಯೇ, ತಮ್ಮ ತಮ್ಮ ಅನುಬಂಧಿಗಳೊಂದಿಗೆ ಸುಖ ಸಂತೋಷಗಳಿಂದ ವಾಸಿಸುವಂತೆ ಅನುಕೂಲಪಡಿಸುವುದು ಸಾಧ್ಯವೇ! ಏನಾದರಾಗಲಿ, ಈ ಜನರನ್ನು ದಾಸ್ಯದಿಂದ ಬಿಡುಗಡೆ ಮಾಡಿಸಲು ನನ್ನ ಶಕ್ತ್ಯಾನುಸಾರ ಶ್ರಮಪಡಲೇಬೇಕು. ಸಾಧ್ಯವಿರುವಷ್ಟು ಪ್ರಯತ್ನ ಮಾಡಲೇಬೇಕು' ಎಂದು ಅಂದು ನಿಶ್ಚಯಮಾಡಿಕೊಂಡನು.

ಅಬ್ರಹಾಮ್ ಲಿಂಕನನು ಈರೀತಿ ನಿಶ್ಚಯಮಾಡಿಕೊಂಡಾಗ ಅವನು ಚಿಕ್ಕ ಹುಡುಗನಲ್ಲ. ಇಪ್ಪತ್ತು ವರ್ಷ ವಯಸ್ಸಿನ ಸಮರ್ಥನಾದ ಯುವಕನಾಗಿದ್ದನು. ಆರಡಿ ನಾಲ್ಕಂಗುಲ ಎತ್ತರವಾಗಿ ಭವ್ಯಾಕಾರದಿಂದ ಯಾವ ಕೆಲಸವೆಂದರೆ ಅದಕ್ಕೆ ನುಗ್ಗಲು, ಉತ್ಸಾಹ ಧೈರ್ಯ ಸಾಹಸಗಳನ್ನು ಗಳಿಸಿ ತಕ್ಕ ಯೋಗ್ಯತೆಯುಳ್ಳವನಾಗಿದ್ದನು. ಮಾತ್ರವಲ್ಲ, ಇತರರಂತಲ್ಲದೆ ಸ್ವಯಂ ಪರಿಶ್ರಮದಿಂದ ವಿಶೇಷ ಜ್ಞಾನಸಂಗ್ರಹ ಕಾರ್ಯವನ್ನೂ ಮಾಡಿದ್ದನು. ಅಲ್ಲದೆ, ಅವನ ಸ್ನೇಹಪರತೆ, ಮೃದು-ನುಡಿ, ನಯ ವಿನಯಗಳು, ಋಜು ಸ್ವಭಾವ, ಕಷ್ಟಪಡುವವರನ್ನು ಕಂಡರೆ ಎದೆ ಕರಗುವಿಕೆ, ಯಾವುದಾದರೊಂದು ವಿಷಯವನ್ನು ವರ್ಣಿಸಿ, ಕೇಳುವವರಿಗೆ ಹೃದಯಂಗಮವಾಗಿರುವಂತೆ ಹೇಳುವ ವಾಕ್ಕೌಶಲ, ಹಸನ್ಮುಖ, ಎಂತಹ ಉದ್ವೇಗಕರ ವಿಷಯವನ್ನಾದರೂ, ಸವಿನುಡಿಗಳಿಂದ ವಿನೋದಕರವಾದ ಹಾಸ್ಯಮಯ ಮಾತುಗಳಿಂದ ವರ್ಣಿಸಿ ಹೇಳುವಂತಹ ಸೊಬಗು, ಈ ಮುಂತಾದುವು ಆತನು ಮುಂದೆ ಮಹತ್ವದ ಸ್ಥಾನವನ್ನು ಪಡೆತಕ್ಕವನು ಎಂಬುದನ್ನು ಸೂಚಿಸುತ್ತಿದ್ದುವು. ಒಬ್ಬನು ತನ್ನಮೇಲಿನ ಆಕ್ಷೇಪಕರ ವಿಚಾರವನ್ನಾದರೂ ಅಬ್ರಹಾಮನ ಮಾತುಗಳಿಂದ ಕೇಳಿ, ಉದ್ವೇಗಗೊಳ್ಳದೆ ಸಮಾಧಾನದಿಂದಲೇ ತನ್ನ ತಪ್ಪನ್ನು ಒಪ್ಪಿಕೊಳ್ಳಲು ಸಿದ್ಧನಾಗುವಂತೆ ಅಗಿ

ಹೋಗುವನು. ಆತನು ಯಾವ ವಿಷಯವನ್ನಾದರೂ, ಕಥೆಗಳ-ಗಾದೆಗಳ-ನೀತಿವಾಕ್ಯಗಳ ಉದಾಹರಣೆಗಳಿಂದಲೇ ಸಮರ್ಥಿಸಿ, ಅದಕ್ಕೊಂದು ಹೊಸ ಜೀವವನ್ನೇ ಉಂಟುಮಾಡಿ, ಕೇಳುವವರು ಆಕರ್ಷಿತರಾಗಿ ಆ ವಿಷಯ ವಿಚಾರದಲ್ಲೇ ಮಗ್ನರಾಗುವಂತೆ ಮಾಡಬಲ್ಲವನಾಗಿದ್ದನು. ಚಿಕ್ಕಂದಿನಲ್ಲಿ ಆತನು ಓದಿದ್ದ ಈಸೋಪನ ನೀತಿಕಥೆಗಳೂ, ಪಿಲ್ಗ್ರಿಮ್ಸ್ ಪ್ರೋಗ್ರೆಸ್ ಮುಂತಾದ ನೀತಿಬೋಧಕ ಗ್ರಂಥಗಳ ಜ್ಞಾನವೂ ಆತನ ಮನಸ್ಸಿನಲ್ಲಿ ಅಚ್ಚಳಿಯದೆ ಬೇರೂರಿ ಇದ್ದುದರಿಂದ ಅವನು ಚಿಕ್ಕಬಾಲಕರಿಂದ ಪ್ರೌಢ ಪಂಡಿತರವರೆಗೆ ಯಾರೊಂದಿಗೆ ಸಂಭಾಷಿಸಿದರೂ, ಯುಕ್ತಿಯುಕ್ತವಾದ ಭಾಷಣದಿಂದ, ಅವರನ್ನು ಮೆಚ್ಚಿಸಬಲ್ಲವನಾಗಿದ್ದನು. ಇಷ್ಟು ಮಟ್ಟಿನ ಯೋಗ್ಯತಾಸಂಪನ್ನನಾದ ಆ ಯುವಕಶ್ರೇಷ್ಠನು, ಎದೆಕರಗಿ ಸೃಷ್ಟಿಶ್ರೇಷ್ಠರಾದ ಮನುಷ್ಯರು ಪಶುಗಳಿಗಿಂತಲೂ ಕೀಳು ದರ್ಜೆಯಲ್ಲಿ ಕಾಣಲ್ಪಡುತ್ತಿದ್ದುದನ್ನು ಕಂಡು, ಕೇವಲ ಸಂತಾಪಪಟ್ಟು ಹೃತ್ಪೂರ್ವಕವಾಗಿ ಮಾಡಿಕೊಂಡ ನಿಶ್ಚಯವು, ಆತನ ಜೀವಿತ ಧ್ಯೇಯವಾಗಿ ಉಳಿದು, ಆತನಿಂದ ಆ ಮಹತ್ಕಾರ್ಯವನ್ನು ನೆರವೇರಿಸಲು ಸಹಾಯಕವಾಗದೆ ಇದ್ದೀತೆ ?

ಎರಡನೆಯ ಬಾರಿಯ ಪ್ರಯಾಣದಿಂದ ಈ ಅನುಭವವನ್ನು ಪಡೆದು, ಅಬ್ರಹಾಮನು, ಮನಸ್ಸಿನ ಅಂತರ್ಯದಲ್ಲೇ ಅಡಗಿ ದಿನದಿನಕ್ಕೆ ಕೊರೆದುಕೊಂಡು ಹೋಗುತ್ತಿದ್ದ ಈ ವಿಚಾರದ ಚಿಂತೆಯಿಂದ ಆವೃತನಾಗಿ ಹಿಂದಿರುಗಿ ಮನೆಗೆ ಬಂದು ಸೇರಿದನು. ಮುಂದೆ ಕೆಲವು ದಿನಗಳಲ್ಲೇ ತಂದೆಯಾದ ಥಾಮಸ್ ಲಿಂಕನನು, ಆ ಸ್ಥಳದಿಂದ ಬೇರೊಂದು ಸ್ಥಳಕ್ಕೆ ತಮ್ಮ ವಾಸಸ್ಥಾನವನ್ನು ಬದಲಾಯಿಸಬೇಕೆಂದು ಉದ್ದೇಶಿಸಿದನು. ಸರಿ! ಮುಂದೆ ಕೇಳುವುದೇನು ? ಒಡನೆ, ಪಾತ್ರೆಪದಾರ್ಥಗಳನ್ನೆಲ್ಲ ಗಂಟುಕಟ್ಟಿ ಎಲ್ಲರೂ ಹೊರಟರು. ಸಂಸಾರವು ಹಿಂದಿಗಿಂತಲೂ ಬೆಳೆದಿದ್ದಿತು. ಮೊದಲಿದ್ದವರಲ್ಲದೆ, ಈಗ ಹೊಸ ಹೆಂಡತಿಯ ಮೊದಲ ಗಂಡನ ಇಬ್ಬರು ಮಕ್ಕಳೂ ಇದ್ದರು. ಅಬ್ರಹಾಮನ ಅಕ್ಕನಾದ ಸಾರಳಿಗೆ ಈಚೆಗೆ ವಿವಾಹವಾಗಿದ್ದಿತಾದರೂ ಅವಳು ಮೃತಳಾಗಿದ್ದಳು. ಥಾಮಸ್ ಲಿಂಕನನು, ಈ ಕು

ಟುಂಬದೊಂದಿಗೆ ಪ್ರಯಾಣಮಾಡಿ ಇಲಿನ್ವಾ ಎಂಬ ಸ್ಥಳಕ್ಕೆ ನಡೆದನು. ಅಲ್ಲೂ ತಂದೆಮಕ್ಕಳು ಅಗಾಧ ಪರಿಶ್ರಮಮಾಡಿ, ಮೊದಲಿನಂತೆಯೇ ಒಂದು ಮನೆಯನ್ನು ನಿರ್ಮಿಸಿಕೊಂಡು. ಅದಕ್ಕೆ ಸುತ್ತಲೂ ಬೇಲಿಯನ್ನು ಹಾಕಿ ಸುರಕ್ಷಿತ ಪಡಿಸಿದರು. ಇಲಿನ್ವಾಕ್ಕೆ ಬಂದು ನಿಂತಮೇಲೆ ಅಬ್ರಹಾಮನು ಇನ್ನು ತಾನು ಸ್ವತಂತ್ರವಾಗಿ ಸಂಪಾದನೆಗೆ ತೊಡಗಬೇಕಾದ ಕಾಲವು ಪ್ರಾಪ್ತವಾಯಿತೆಂದುಕೊಂಡನು. ಆತನ ಸೌಜನ್ಯವೂ ಸ್ನೇಹಮಯ ಸ್ವಭಾವವೂ ಅವನಿಗೆ ಯಾರನ್ನೂ ಹೊಸಬರೆನ್ನಿಸದೆ ಎಲ್ಲರಲ್ಲೂ ಬಳಕೆಯನ್ನು ಉಂಟುಮಾಡಿಕೊಡುತ್ತಿದ್ದಿತು. ಇಂತಹ ಸರಳ ಸ್ವಭಾವದ ಸಮರ್ಥನಾದ ಯುವಕನಿಗೆ ಕೆಲಸವು ಸಿಕ್ಕುವುದೊಂದು ದುರ್ಲಭವೇ! ಅದೇ ಸ್ಥಳದ ಒಬ್ಬ ವರ್ತಕನು, ತನ್ನ ಪದಾರ್ಥಗಳನ್ನು ನ್ಯೂ ಆರ್ಲಿಯನ್ಸ್ ಪಟ್ಟಣಕ್ಕೆ ಕೊಂಡೊಯ್ದು ವಿಕ್ರಯಮಾಡಿಕೊಂಡು ಬರಬೇಕಾದ ಕೆಲಸವನ್ನು ಅವನಿಗೆ ವಹಿಸಿದನು. ಅವನೊಂದಿಗೆ ಈ ಬಾರಿ ಡೆನ್ನಿಸ್ ಹ್ಯಾಂಕ್ಸ್ ಎಂಬೊಬ್ಬನೂ ಅವನ ಬಲತಾಯಿಯ ಮಗನೊಬ್ಬನೂ ಪ್ರಯಾಣಮಾಡಿದರು. ದಿನಗೂಲಿಯೂ, ಭತ್ಯವೂ, ಲಾಭ ಬಂದಲ್ಲಿ ಅದರಲ್ಲಿ ಪ್ರತಿಯೊಬ್ಬನಿಗೂ ಇಪ್ಪತ್ತು ಡಾಲರುಗಳ ಬಹುಮಾನವೂ ಸಲ್ಲತಕ್ಕದ್ದೆಂದು ಏರ್ಪಾಟಾಯಿತು. ಅಬ್ರಹಾಮನು ತನ್ನ ಹೊಸ ಉದ್ಯೋಗದಲ್ಲಿ ಅತ್ಯುತ್ಸಾಹಗೊಂಡು ಪ್ರಯಾಣ ಮಾಡಿದನು.

ವ್ಯಾಪಾರವು ಬಹು ಉತ್ತಮ ರೀತಿಯಿಂದಲೇ ನಡೆದು ಲಾಭದಾಯಕವಾಯಿತು. ಆದರೆ, ಅಬ್ರಹಾಮನ ಹೃದಯದಲ್ಲಿ ಅಡಗಿದ್ದ ಗುಲಾಮರ ದಾಸ್ಯ ಸಂಬಂಧವಾದ ಚಿಂತೆಯು ಮಾತ್ರ ಈ ಬಾರಿ ವಿಶೇಷವಾಗಿ ಬೆಳೆಯಿತು. ಹಿಂದೆ ನೋಡಿದಾಗ ಪಶುಗಳಂತೆ ಅವರು ಕಷ್ಟಪಡುತ್ತಿದ್ದರು ಮಾತ್ರ. ಆದರೆ ಈ ಬಾರಿ, ಅಕ್ಕಟಾ, ಆ ದೃಶ್ಯವನ್ನು ಏನೆಂದು ವರ್ಣಿಸುವುದು. ಅವರು ಕೆಲಸಮಾಡುವಲ್ಲಿ ಲೇಶಮಾತ್ರ ಸಾವಕಾಶವಾಯಿತೆಂದರೆ, ಹೆಂಗಸರು ಗಂಡಸರೆಂಬ ಭೇದವಿಲ್ಲದೆ, ಅವರ ಬೆನ್ನ ಮೇಲೂ, ಪಿರ್ರೆಗಳ ಮೇಲೂ ಕೈಕಾಲ್ಗಳ ಮೇಲೂ, ತಲೆಗಳ ಮೇಲೂ ಕೊರಡೆಯ ಪೆಟ್ಟುಗಳು ಬೀಳುವುವು. ಮಾತ್ರವಲ್ಲ, ಈ ಬಾರಿ ಅಬ್ರ

ಹಾಮನು ಅವರು ನಿರ್ಜೀವ ವಸ್ತುಗಳೋ ಎಂಬಂತೆ ಹರಾಜಿನಲ್ಲಿ ವಿಕ್ರಯವಾಗುವುದನ್ನೂ ನೋಡಿದನು. ಹಾಗೆ ಒಬ್ಬನು ವಿಕ್ರೀತನಾದನೆಂದರೆ ಅವನು ತನ್ನ ಆತ್ಮೀಯರನ್ನು ಪುನಃ ಎಂದಿಗೂ ಕಾಣಲು ಮಾರ್ಗವಿಲ್ಲವಲ್ಲಾ ಎಂಬ ವ್ಯಸನದಿಂದ ಗೋಳಾಡುತ್ತಾ, ಅಳುತ್ತಿದ್ದುದನ್ನು ಕೇಳುವ ಸಂಕಟವು, ಅಬ್ರಹಾಮನ ಮೃದುಹೃದಯವನ್ನು ಭೇದಿಸುತ್ತಿದ್ದಿತು. ಅತ್ಯಂತ ಪರಿತಾಪಕರವಾದ ಆ ದೃಶ್ಯವು ಧನವಂತರ ರಾಕ್ಷಸ ಸ್ವಭಾವವೆಂತಹುದೆಂಬುದನ್ನು ಅವನಿಗೆ ಚೆನ್ನಾಗಿ ಪ್ರದರ್ಶಿಸಿತು. ಅವನು ಕಣ್ಣುಗಳಿಂದ ಧಾರಾಳವಾಗಿ ಜಲಧಾರೆಯನ್ನು ಸುರಿಸುತ್ತಾ—'ದೇವಾ, ಈ ದುರ್ದೈವಿಗಳನ್ನು ಈ ಬಂಧನದಿಂದ ಬಿಡಿಸುವ ಸುಯೋಗವು ನನಗೆ ಲಭ್ಯವಾಗುವುದೇ?' ಎಂದು ಸಂಕಟಪಟ್ಟು ಹಲುಬಿಕೊಳ್ಳುವನು.

ನ್ಯೂ ಆರ್ಲಿಯನ್ಸಿನಿಂದ ಹಿಂದಿರುಗಿ ಬಂದಮೇಲೆ ಸುಪ್ರೀತನಾದ ಆ ವ್ಯಾಪಾರಿಯಿಂದಲೇ ಸಮೀಪದ ನ್ಯೂಸೇಲಂ ಎಂಬ ಒಂದು ಹಳ್ಳಿಯಲ್ಲೇ ಮಳಿಗೆಯನ್ನಿಟ್ಟು ವ್ಯಾಪಾರ ಮಾಡಬೇಕಾದ ಉದ್ಯೋಗವು ಅಬ್ರಹಾಮನಿಗೆ ವಹಿಸಲ್ಪಟ್ಟಿತು. ಅವನು ಬಹು ಸಂತೋಷದಿಂದ ಆ ಕಾರ್ಯವನ್ನೂ ಕೈಕೊಂಡು, ಆ ಗ್ರಾಮಸ್ಥರ ಪ್ರೀತಿಗೆ ಪಾತ್ರನಾಗಿ ಪ್ರಾಮಾಣಿಕತೆಯಿಂದ ವ್ಯಾಪಾರ ಮಾಡತೊಡಗಿದನು. ಅವನ ಮಳಿಗೆಗೆ ವ್ಯಾಪಾರಕ್ಕಾಗಿ ಬಂದವರು ದೊಡ್ಡವರು ಚಿಕ್ಕವರೆಂಬ ಭೇದವಿಲ್ಲದೆ ತಮ್ಮ ದುಡ್ಡಿಗೆ ತಕ್ಕಷ್ಟು ಉತ್ತಮವಾದ ಸರಕನ್ನು ಪಡೆಯಬಹುದು ಎಂಬ ನಂಬಿಕೆಯು ಎಲ್ಲರಿಗೂ ಉಂಟಾಯಿತು. ಅಬ್ರಹಾಮನು ಪ್ರಾಮಾಣಿಕನು. ಮನೋವಾಕ್ಕಾಯಗಳಲ್ಲಿ ಪರಿಶುದ್ಧನಾದವನು. ಲಾಭೋದ್ದೇಶದಿಂದ ಸುಳ್ಳು ಹೇಳುವವನಲ್ಲ ಎಂಬ ವಿಶ್ವಾಸವೂ ಉಂಟಾಯಿತು. ಎಲ್ಲರೂ ಅವನ ಬಳಿಗೆ ಹೆಚ್ಚು ಹೆಚ್ಚಾಗಿ ಬರತೊಡಗಿದರು. ಅವನ ವ್ಯಾಪಾರವೂ, ಒಂದಿಗೇ ಲಾಭವೂ ದಿನದಿನಕ್ಕೆ ಅಧಿಕರಿಸತೊಡಗಿತು. ಆತನ ಪ್ರಾಮಾಣಿಕತೆಗೆ ಮೆಚ್ಚಿ ಆ ಗ್ರಾಮಸ್ಥರೆಲ್ಲರೂ ಅವನನ್ನು ಪ್ರಾಮಾಣಿಕನಾದ ಅಬ್ರಹಾಂ (Honest Abe) ಎಂಬ ಬಿರುದಿನಿಂದ ಕರೆಯಸಾಗಿದರು. ಪ್ರಾಮಾಣಿಕತೆಯಿಂದ ನಡೆದರೆ, ಯಾವ ಉದ್ಯೋಗ ತಾನೇ ಲಾಭದಾಯಕವಾ

ಗದು? ಯಾವನು ತಾನೇ ಜನಗಳ ಪ್ರೀತಿ ವಿಶ್ವಾಸಗಳಿಗೆ ಪಾತ್ರನಾಗಲಾರನು?

ಅಬ್ರಹಾಮನು ಪಡೆದ ಜನರ ಈ ವಿಶ್ವಾಸವು, ಅವನ ಅಭಿವೃದ್ಧಿಯಿಂದ ನಷ್ಟಪಟ್ಟ ಇತರ ಕೆಲವರು ವ್ಯಾಪಾರಿಗಳಿಗೆ ಸಹನೆಯಾಗಲಿಲ್ಲ. ಅವರು ಕೆಲವರು ಪುಂಡರಿಗೆ ಪ್ರೋತ್ಸಾಹಕೊಟ್ಟು, ಅಬ್ರಹಾಮನನ್ನು ಪೀಡಿಸುವ ಉದ್ಯೋಗಕ್ಕೆ ಅವರನ್ನು ಪ್ರೇರಿಸಿದರು. ಅವರು ತನ್ನ ವಿಷಯದಲ್ಲಿ ಯಾವ ಭಾವನೆಯಿಂದ ವರ್ತಿಸುತ್ತಾರೆಂಬುದನ್ನು ತಿಳಿದ ಅಬ್ರಹಾಮನು ಅವರಿಗೆ ಅವರ ಮಾರ್ಗದಿಂದಲೇ ಪ್ರತ್ಯುತ್ತರ ಕೊಡಬೇಕೆಂದು ಸಂಕಲ್ಪಿಸಿದನು. ಅವರು ತಮ್ಮಲ್ಲಿ ಬಹು ಬಲಶಾಲಿಯಾದ ಒಬ್ಬನನ್ನು ಚುನಾಯಿಸಿ ಅವನನ್ನು ಅಬ್ರಹಾಮನ ಮೇಲೆ ಮಲ್ಲಯುದ್ಧಕ್ಕೆ ಬಿಟ್ಟರು. ಅಬ್ರಹಾಮನು ಹಿಂದೆಗೆಯದೆ ಎದುರಿಸಿ ನಿಂತು ತನ್ನ ಎದುರಾಳಿಯನ್ನು ನೆಲಕ್ಕೆ ಕೆಡಹಿ ಮಣ್ಣುಮುಕ್ಕಿಸಿದನು. ಅವನ ದೇಹಬಲವು ಎಷ್ಟುಮಟ್ಟಿನದೆಂಬುದರ ಪರೀಕ್ಷೆಯು ಈ ಮೂಲಕವಾಗಿ ಆಗಲು, ತರುವಾಯ ಅವನೊಂದಿಗೆ ಮಲ್ಲಯುದ್ಧವನ್ನು ಮಾಡಿದ ಅರ್ಮ್‌ಸ್ಟ್ರಾಂಗ್ ಎಂಬುವನು ಅವನ ಪರಮ ಮಿತ್ರನಾದನು. ಅಬ್ರಹಾಮನು ಹೇಗೆ ಪ್ರಾಮಾಣಿಕನೋ, ಹೇಗೆ ಸಜ್ಜನನೋ, ದುಷ್ಟರ ದೌರ್ಜನ್ಯವನ್ನು ಎದುರಿಸಿ ಅಡಗಿಸುವಲ್ಲಿ ಹಾಗೆಯೇ ಬಲಿಷ್ಠನೂ, ವಜ್ರಮುಷ್ಟಿಯುಳ್ಳವನೂ ಎಂದು ಅವರಿಗೆ ಚೆನ್ನಾಗಿ ಮನವರಿಕೆಯಾಯಿತು.

ನ್ಯೂಸೇಲಂಗೆ ಬಂದನಂತರ ಅಬ್ರಹಾಮನಿಗೆ ಕೆಲಸವು ಹೆಚ್ಚಿತಾದರೂ ಅವನು ಎಂದಿನಂತೆ ತನ್ನ ವಿದ್ಯಾಭ್ಯಾಸವನ್ನು ಅಭಿವೃದ್ಧಿಪಡಿಸಿಕೊಳ್ಳುತ್ತಲೇ ಇದ್ದನು. ಆಗಾಗ್ಗೆ ವಾರ ಪತ್ರಿಕೆಗಳನ್ನು ಕೊಂಡು ಓದುತ್ತಿದ್ದನು. ವ್ಯಾಕರಣ ವಿಚಾರದಲ್ಲಿ ಹಲವು ಅಂಶಗಳನ್ನು ಅರಿತನು. ಹೀಗೆ ಸರ್ವದಾ, ತನ್ನ ಮನಸ್ಸನ್ನು ಗ್ರಂಥ ವ್ಯಾಸಂಗದಲ್ಲೇ ತೊಡಗಿಸಿ ಜ್ಞಾನ ಭಂಡಾರವನ್ನು ಬೆಳೆಸಿಕೊಳ್ಳುತ್ತಿದ್ದನು.

ನ್ಯೂಸೇಲಂನ ಅಂಗಡಿಯಿಂದ ವಿಶೇಷ ಲಾಭವು ಉತ್ಪನ್ನವಾಗದಿದ್ದುದು ಅದರ ಯಜಮಾನನಿಗೆ ನಿರುತ್ಸಾಹವನ್ನುಂಟುಮಾಡಿತು.

ಒಡನೆ ಅವನು ಅದನ್ನು ಮುಚ್ಚಿಬಿಡತಕ್ಕದೇ ಉತ್ತಮವೆಂದು ಯೋಚಿಸಿದನು. ಅಬ್ರಹಾಮನಿಗೆ ಈ ಮೂಲಕವಾಗಿ ದೊರೆತಿದ್ದ ಒಂದು ಉದ್ಯೋಗವು ತಪ್ಪಿಹೋಗಲು ಮುಂದೇನು ಮಾಡಬೇಕೆಂಬ ಯೋಚನೆಯು ಮೊದಲಾಯಿತು. ಬಿಳಿಯ ಜನರು ಮಿಸಿಸಿಪ್ಪೀ ನದಿಯನ್ನು ದಾಟಿ, ಪೂರ್ವದಲ್ಲಿ ರೆಡ್ ಇಂಡಿಯನ್ನರೆಂಬ ಮೂಲನಿವಾಸಿಗಳ ಸ್ವಾಸ್ಥ್ಯವೋ ಎಂಬಂತಿದ್ದ ಪ್ರದೇಶಗಳಿಂದಲೆಲ್ಲ ಅವರನ್ನು ದೂರಕ್ಕೆ ದೂರಕ್ಕೆ ಅಟ್ಟುತ್ತಾ ಬಂದುದರಿಂದ ಅವರಲ್ಲನೇಕರಿಗೆ, ಬಿಳಿಯ ಜನರ ಮೇಲೆ ವಿಶೇಷ ರೋಷವುಕ್ಕುವಂತಾಗಿದ್ದಿತು. ಸ್ವಲ್ಪಸ್ವಲ್ಪವಾಗಿ ಆ ರೆಡ್ ಇಂಡಿಯನ್ನರು ಸ್ಥಳ ಕೊಡುತ್ತ ಕೊಡುತ್ತ ಬಂದಂತೆಲ್ಲ, ಬಿಳಿಯ ಜನರೂ ಅವರನ್ನು ತಳ್ಳುತ್ತ ತಳ್ಳುತ್ತ ಕೊನೆಗೆ ಇಲ್ಲಿನ್ವಾಯಿಸ್ ಎಂಬ ಪ್ರಾಂತದ ಉತ್ತರಕ್ಕಿರುವ ಪ್ರದೇಶವನ್ನೆಲ್ಲಾ ಬಿಳಿಯ ಜನರಿಗಾಗಿಯೇ ಬಿಟ್ಟುಕೊಟ್ಟು, ಮಿಸಿಸಿಪ್ಪೀ ನದಿಯ ಪಶ್ಚಿಮ ಭಾಗದ ಸ್ವಲ್ಪ ಪ್ರದೇಶ ಮಾತ್ರವನ್ನು ರೆಡ್ ಇಂಡಿಯನ್ನರು ಇಟ್ಟುಕೊಳ್ಳತಕ್ಕುದೆಂದು ಒಂದು ಕರಾರನ್ನು ಹುಟ್ಟಿಸಿದರು. ಆ ಕರಾರಿಗೆ ರೆಡ್ ಇಂಡಿಯನ್ನರ ಹಲವು ಮಂದಿ ಮುಖ್ಯಸ್ಥರು ಒಪ್ಪಿ ಹಸ್ತಾಕ್ಷರ ಹಾಕಿ ಬಲವಂತದಿಂದ ತಮ್ಮ ಸಮ್ಮತಿಯನ್ನು ಕೊಟ್ಟರು ಆದರೆ ಮೂಲನಿವಾಸಿಗಳ ಸ್ವಾತಂತ್ರ್ಯಕ್ಕೆ ಸರ್ವನಾಶಕರವಾದ ಈ ಸಂಧಿಯು ಬ್ಲಾಕ್ ಹಾಕ್ ಎಂಬೊಬ್ಬ ಮುಖ್ಯಸ್ಥನಿಗೆ ಸಮಾಧಾನ ತೋರಲಿಲ್ಲ. ಒಡನೆ ಅವನು ತನ್ನೊಂದಿಗೆ ಅನೇಕರನ್ನು ಕಟ್ಟಿಕೊಂಡು, ಈ ಬಿಳಿಯರನ್ನು ಅಡಗಿಸುತ್ತೇನೆಂದು ದಂಗೆಯೆದ್ದನು. ಹಲವರ ಮನೆಗಳಿಗೆ ಬೆಂಕಿ ಹಚ್ಚಿದನು. ದನಕರುಗಳನ್ನು ಅಪಹರಿಸಿದನು ಪೈರುಪಚ್ಚೆಗಳನ್ನು ಧ್ವಂಸಮಾಡಿದನು. ಅವನನ್ನು ಅಡಗಿಸದಿದ್ದರೆ ತಮ್ಮ ಬಾಳ್ವೆಗೇ ಅಪಾಯವೆಂದು ಎಲ್ಲರಿಗೂ ಮನದಟ್ಟಾಯಿತು. ಒಡನೆ ಅಲ್ಲಲ್ಲಿ ಸ್ವಯಂಸೇವಕರ ದಾಣ್ಯಗಳು ಏರ್ಪಾಟಾದುವು. ಆಗ ತಾನೆ ಅಂಗಡಿಯ ಉದ್ಯೋಗವು ತಪ್ಪಿಹೋಗಿ ನಿರುದ್ಯೋಗಿಯಾಗಿ ನಿಂತಿದ್ದ ಅಬ್ರಹಾಮನು ಒಡನೆ ಈ ಸ್ವಯಂಸೇವಕ ಸೈನ್ಯಕ್ಕೆ ಸೇರಿದನು. ಆರು ಅಡಿ ನಾಲ್ಕಂಗುಲ ಉನ್ನತವಾಗಿ, ಕಬ್ಬಿಣದ ಕೊಡತಿಗಳಂತೆ ಬಲವಾಗಿದ್ದ ತೋಳುಗಳಿಂದ ಕೂಡಿ ಭೀಮನಂತಿದ್ದ ಅತನನ್ನು ಕಂಡು ಸೈನಿಕರೆಲ್ಲರೂ ಆತನೇ ತಮ್ಮ ಸರದಾರ (Captain)

ನಾಗಬೇಕೆಂದು ಘೋಷಿಸಿಕೊಂಡರು. ಅಬ್ರಹಾಮನಿಗೆ ತನ್ನ ಸ್ಥಾನವು ಬಹು ಮೆಚ್ಚಿಗೆಯಾಯಿತು.

ಆತನ ನ್ಯಾಯಪಕ್ಷಪಾತತೆಯನ್ನೂ, ಅಪಾಯ ಸಂದರ್ಭಗಳಲ್ಲಿ ಲೇಶ ಮಾತ್ರವೂ ಕುಂದದೆ ಇಮ್ಮಡಿಗೊಳ್ಳುತ್ತಿದ್ದ ಆತನ ಧೈರ್ಯಸಾಹಸಗಳನ್ನೂ ಪ್ರದರ್ಶಿಸುವ ಒಂದು ವಿಚಾರವು ಆಗ ನಡೆಯಿತು. ಇನ್ನೂ ದಂಗೆಯು ಸಂಪೂರ್ಣವಾಗಿ ಅಡಗಿರಲಿಲ್ಲ. ಅಷ್ಟರಲ್ಲಿ ಒಂದು ದಿನ ಒಬ್ಬ ರೆಡ್ ಇಂಡಿಯನ್ನನು ಅನ್ನನೀರುಗಳನ್ನು ಕಾಣದೆ, ಬಳಲಿ ಬೆಂಡಾಗಿ ಸಾಯುವಂತಾಗಿ ಬಿಳಿಯ ಸೈನಿಕರಿದ್ದ ಠಾಣ್ಯದೊಳಗೆ ತತ್ತರಿಸಿಕೊಂಡು ಬಂದುಬಿದ್ದನು. ಅವನನ್ನು ಕಂಡೊಡನೆಯೇ-ಕೊಲ್ಲಿರಿ-ಕೊಲ್ಲಿರಿ ಎಂದು ಕೂಗುತ್ತಾ ಬಿಳಿಯ ಸೈನ್ಯದ ಸ್ವಯಂಸೇವಕರು ತಮ್ಮ ಕೋವಿಗಳನ್ನು ಎತ್ತಿಹಿಡಿದರು. ಪ್ರಾಣಭಯದಿಂದ ತಕ್ಕಳಿಸುತ್ತಿದ್ದ ಆ ದುರ್ದೈವಿಯು, ಒಂದು ಕಾಗದವನ್ನು ತೋರಿಸಿ,—'ಸೈನ್ಯಾಧಿಪತಿ ಜನರಲ್ ಕ್ಯಾಸ್ಟ್ ಎಂಬಾತನು ರಕ್ಷಣಾಪತ್ರವನ್ನು ಕೊಟ್ಟಿದ್ದಾನೆ. ನಾನು ಬಿಳಿಯ ಜನರ ಶತ್ರುವಲ್ಲ. ನನ್ನನ್ನು ಕಾಪಾಡಿ' ಎಂದು ಬೇಡಿಕೊಂಡನು. ಆದರೂ ಅವನನ್ನು ಉಳಿಸದೆ ಕೊಂದುಬಿಡಬೇಕೆಂದು ಎಲ್ಲರೂ ಆರ್ಭಟಿಸುತ್ತಿದ್ದರು. ಆ ವೇಳೆಯಲ್ಲಿ ಲಿಂಕನನು ಆ ದುರ್ದೈವಿಯ ಅವಸ್ಥೆಯನ್ನು ಕಂಡು ಅವನನ್ನು ಕಾಪಾಡಲೆಣಿಸಿ, ಎದ್ದು ಬಂದು ಎಲ್ಲರ ಕೈಗಳಲ್ಲಿನ ಕೋವಿಗಳನ್ನೂ ಕಿತ್ತುಕೊಂಡು—'ಜೋಕೆ, ಅವನ ಮೈಮೇಲೆ ಕೈಮಾಡಿದರೆ ನಿಮ್ಮ ಪರಿಣಾಮವು ನೆಟ್ಟಗಾಗಲಿಕ್ಕಿಲ್ಲ.' ಎಂದು ಗರ್ಜಿಸಿ ತಡೆದನು. ರೌದ್ರಾವೇಶದಿಂದ ಭಯಂಕರನಾಗಿ ಕಾಣುತ್ತಿದ್ದ ಆತನನ್ನು ನೋಡಿ, ಆತನಿಗೆ ವಿರೋಧವಾಗಿ ನಡೆಯಲು ಯಾರಿಗೂ ಧೈರ್ಯವಾಗಲಿಲ್ಲ. ಲಿಂಕನನ ಧೈರ್ಯವು ಆ ಬಡಪ್ರಾಣಿಯ ಜೀವವನ್ನುಳಿಸಿತು. ಮುಂದೆ ಕೆಲವು ದಿನಗಳೊಳಗಾಗಿ, ಬ್ಲಾಕ್‌ಹಾಕ್‌ನನ್ನೂ ಹಿಡಿದು ಪ್ರೆಸಿಡೆಂಟನ ಬಳಿಗೆ ಹಿಡಿತಂದರು. ದಂಗೆಯು ಅಡಗಿಸಲ್ಪಟ್ಟಿತು. ಅಬ್ರಹಾಮನು ಪುನಃ ನ್ಯೂಸೇಲಂಗೆ ಹಿಂದಿರುಗಿದನು.



## ಅಧ್ಯಾಯ ೪. 'ವಿವಾಹ.'

ಭಗವಂತನು ಈ ಲೋಕ ಜೀವಿತದಲ್ಲಿ ಒಂದೊಂದು ವ್ಯಕ್ತಿಯನ್ನು ನಿಮಿತ್ತವಾಗಿ ಕೈಕೊಂಡು, ಅವನ ಮೂಲಕ ಒಂದೊಂದು ಕೆಲಸವನ್ನು ಮಾಡಿಸಿ ಬಿಡುತ್ತಾನೆ. ಭಗವದಿಷ್ಟದಲ್ಲಿ ಯಾವ ಕೆಲಸವು ನೆರವೇರಬೇಕೆಂದಿರುವುದೋ ಅದರ ಸಿದ್ಧತೆಗೆ ಬೇಕಾದ ಅನುಕೂಲತೆಗಳೆಲ್ಲವೂ ಅವನಿಗೆ ದೊರೆಯುತ್ತಾ ಹೋಗುವುವು. ಪ್ರತಿಕೂಲಗಳಾದ ವಿಚಾರಗಳೆಲ್ಲವೂ ತಮ್ಮ ಮಟ್ಟಿಗೆ ತಾವೇ ನಿವಾರಣೆಯಾಗುತ್ತಾ ಹೋಗಿ, ಎಂತೂ ಆ ವ್ಯಕ್ತಿಗೆ ಆ ಕಾರ್ಯಸಿದ್ಧತೆಗೆ ಆವಶ್ಯಕವಾದ ಸಂಪೂರ್ಣ ಅನುಭವವೂ ದೊರೆತು, ಅವನ ಮೂಲಕ ಆದೊಂದು ಕಾರ್ಯವ ನೆರವೇರಿದಂತೆ ಪ್ರಪಂಚಕ್ಕೆ ತೋರಲು ಅವಕಾಶವಾಗುವುದು. ಹೀಗೆ ಆದ ಕಾರ್ಯವನ್ನು ಕುರಿತು ಅಲ್ಪಜ್ಞರು ತಾವೇ ಅದನ್ನು ಮಾಡಿದುದೆಂದೂ ತಮ್ಮಂತಹ ಪ್ರಾಜ್ಞರೂ, ಶೂರರೂ ಮತ್ತೊಬ್ಬರಿಲ್ಲವೆಂದೂ ಹೆಮ್ಮೆಗೊಳ್ಳುವರು. ಆದರೆ ಭಗವತ್ಪರ ಚಿತ್ತವೃತ್ತಿಯುಳ್ಳವನು ಹಾಗೆ ಎಲ್ಲಕ್ಕೂ ತಾನೇ ಕಾರಣಕರ್ತನು, ಎಲ್ಲವೂ ತನ್ನ ಪ್ರಯತ್ನದಿಂದಲೇ ದೊರೆತುದು ಎಂದು ಹೆಮ್ಮೆಗೊಳ್ಳದೆ, ಕಾಲಾನುಸಾರವಾಗಿ ನಡೆದು, ಮನಸ್ಸಿಗೆ ಪ್ರೇರಣೆಯಾದಂತೆ ಆಚರಿಸಿ, ಒಳ್ಳೆಯದು ಕೆಟ್ಟದು, ಶುಭ ಅಶುಭ, ಲಾಭ ನಷ್ಟ ಮುಂತಾದ ಎಲ್ಲವೂ ಭಗವದಿಚ್ಛೆಯಿಲ್ಲದೆ ಪ್ರಾಪ್ತಿಸದೆಂದು ತಿಳಿದು, ಬಂದುದನ್ನು ನಿರ್ಮಲ ಮನಸ್ಸಿನಿಂದ ಅನುಭವಿಸಿ ದೇವರೇ ದಿಕ್ಕೆಂದು ಇರುವನು. ದೇವರು ಹೀಗೆ ತನ್ನ ಮೇಲೆಯೇ ಅವಲಂಬಿಸಿ ಕೊಂಡಿರುವವರನ್ನು ಕೈಬಿಡುವನೇ !

ನ್ಯೂಸೀಲಂಗೆ ಬಂದಮೇಲೆ, ಯಾವ ಗೊತ್ತಾದ ಒಂದು ಉದ್ಯೋಗವೂ ಇಲ್ಲದೆ, ಕೆಲವುಕಾಲ ಈತನು ಸುಮ್ಮನಿರಬೇಕಾಯಿತು. ಈತನು ಈ ಹಿಂದೆ ನಡೆದಿದ್ದ ಯುದ್ಧದಲ್ಲಿ ಮಾಡಿದ್ದ ಪರಿಶ್ರಮಕ್ಕಾಗಿ ಜನಗಳು ಮೆಚ್ಚಿ ಈತನನ್ನು ಬಹುವಾಗಿ ಹೊಗಳಿದ್ದರು. ಇದರಿಂದ ಈ ಬಾರಿ ನಡೆಯಲಿದ್ದ ಪ್ರತಿನಿಧಿ ಚುನಾವಣೆಯಲ್ಲಿ, ತಾನೂ ಒಬ್ಬ ಉಮೇದುವಾರನಾಗಿ ಏಕೆ ನಿಲ್ಲಬಾರದೆಂದು ಯೋಚಿಸಿದನು. ಆದರೆ ಈತನು ಹೊರಗೆ ಪ್ರಯಾಣ

ವಾಗಿ ಹೋಗಿದ್ದು, ಚುನಾವಣೆಗೆ ಹತ್ತು ದಿವಸಗಳ ಮುಂಚಿತವಾಗಿ ಮಾತ್ರವೇ ನ್ಯೂಸೇಲಂಗೆ ಬಂದಿದ್ದನು. ಇತರ ಉಮೇದುವಾರರು, ತಮ್ಮ ಪಕ್ಷದಲ್ಲಿ ಜನರು 'ವೋಟು' ಕೊಡಬೇಕೆಂಬುದಕ್ಕಾಗಿ ವಿಶೇಷ ಪ್ರಯತ್ನಮಾಡಿದ್ದರು. ಅಬ್ರಹಾಮನಿಗೆ ಹಾಗೆ ಪ್ರಯತ್ನಿಸಲು ಅವಕಾಶವೇ ಇರಲಿಲ್ಲ. ಆತನು ಸುಮ್ಮನೆ ತಾನೂ ಉಮೇದುವಾರನಾಗಿದ್ದೇನೆಂದು ತಿಳಿಸಿದುದೆಷ್ಟೋ ಅಷ್ಟುಮಾತ್ರವೇ! ಮತ್ತು, ಅವಕಾಶ ದೊರೆತಾಗ ಅಲ್ಲಲ್ಲಿ ನಿಂತು, ತಾನು ಮಾಡಬೇಕೆಂದಿದ್ದ ಕೆಲಸಗಳನ್ನೂ ಪ್ರಜಾಹಿತ ಸಾಧಕವಾದ ತನ್ನ ಉದ್ದೇಶಗಳನ್ನೂ ಕುರಿತು ಉಪನ್ಯಾಸ ಮಾಡುತ್ತಿದ್ದನು. ಹೀಗೆ ನಡೆದ ಎಂಟು ಹತ್ತು ದಿನಗಳಿಗೆಲ್ಲ ಚುನಾವಣೆ ನಡೆದು ಆತನಿಗೆ ೨೦೭ ಓಟುಗಳು ಬಂದುವು. ಚುನಾವಣೆಗೆ ನಿಂತಿದ್ದ ಇಬ್ಬರಲ್ಲಿ ಆತನಿಗೇ ಹೆಚ್ಚು ಓಟುಗಳು ಬಂದಿದ್ದರೂ, ಆತನಿಗೆ ಪ್ರತಿನಿಧಿ ಸ್ಥಾನವು ಕೊಡಲ್ಪಡಲಿಲ್ಲ. ಇದರಿಂದ ಅಬ್ರಹಾಮನಿಗೆ ಆಶಾಭಂಗವಾಗಲಿಲ್ಲ. ಆದರೆ ಪ್ರಜೆಗಳಿಗೆ ತನ್ನಲ್ಲಿ ಎಷ್ಟುಮಟ್ಟಿನ ಅಭಿಮಾನವಿದೆಯೆಂಬುದರ ಪರೀಕ್ಷೆಯು ಈ ಮೂಲಕ ಆಯಿತೆಂದು ತಿಳಿದುಕೊಂಡನು.

ಹೀಗೆ ರಾಜಕೀಯ ವಿಚಾರದಲ್ಲಿ ಪ್ರವೇಶಿಸಿ ಕೆಲಸ ಮಾಡತೊಡಗಿದ ಮೇಲೆ, ಆತನು ಹಿಂದೆ ಕೊಡಲಿಯನ್ನು ಹಿಡಿದು ಮರ ಕಡಿಯುವುದು, ಗುದ್ದಲಿ ಹಿಡಿದು ಅಗೆಯುವುದು ಮುಂತಾದ ಕೆಲಸಗಳನ್ನು ಮಾಡುತ್ತಿದ್ದಂತೆಯೇ ಕೈಕೆಲಸ ಮಾಡಿಕೊಂಡಿರುವುದು ಸಮಂಜಸ ತೋರಲಿಲ್ಲ. ವ್ಯಾಪಾರ ಮಾಡುವುದು ಉತ್ತಮವೆನ್ನಿಸಿತು. ಒಂದು ಮಳಿಗೆಯನ್ನು ಕೊಂಡು ಅಲ್ಲಿ ಅಂಗಡಿಯಿಟ್ಟನು. ಅದರಲ್ಲಿ ಲಾಭ ಬರದಿದ್ದುದು ಮಾತ್ರವಲ್ಲ; ಅಂಗಡಿಯು ಕೆಲದಿನಗಳ ಮೇಲೆ ಮುಚ್ಚಿಹೋಗಿ ತಲೆಯಮೇಲೆ ಸಾಲ ಬೇರೆ ಹೊತ್ತಿತು. ತರುವಾಯ ನ್ಯಾಯಶಾಸ್ತ್ರ ಗ್ರಂಥಗಳನ್ನು ಪೂರ್ತಿಯಾಗಿ ಓದಿ 'ಲಾಯರ್' ಆಗುವುದು ತನ್ನ ಸ್ವಭಾವಕ್ಕೆ ತಕ್ಕ ವೃತ್ತಿಯೆಂದು ತೋರಿತು. ಅವರಿವರಲ್ಲಿ ಕೆಲಪುಸ್ತಕಗಳನ್ನು ತೆಗೆದುಕೊಂಡು ಓದಿ, ನ್ಯಾಯಾಸ್ಥಾನಗಳಿಗೆ ಹೋಗಿ ತನ್ನ ಕಕ್ಷಿಗಾರರ ಪರವಾಗಿ, ನಿರ್ಭಯವಾಗಿ, ನ್ಯಾಯಸಮ್ಮತವಾಗಿ ವಾದಿಸಿದನು. ಈ ಉದ್ಯೋಗವು ತನ್ನ ವಾಗ್ಮಿತೆ

ಯನ್ನು ಅಭಿವೃದ್ಧಿಗೊಳಿಸಲು ಒಂದು ಉತ್ಕೃಷ್ಟ ಸಾಧನವೆಂದು ಆತನಿಗೆ ತೋರಿತು. ಮಾತ್ರವಲ್ಲ, ಆತನು ಆ ಉದ್ಯೋಗದ ಮೂಲಕ ದೊರೆತ ಸುಸಂಧಿಯನ್ನು ಅಪವ್ಯಯ ಮಾಡದೆ, ತನ್ನ ಕಕ್ಷಿಗಾರರಿಗೆ ನ್ಯಾಯ ದೊರೆ ವಂತೆ ವಿಶೇಷ ಪರಿಶ್ರಮ ಮಾಡುತ್ತಿದ್ದನು. ಮೊಕದ್ದಮೆಯು ಅನ್ಯಾಯ ವಾದುದು ಎಂದು ತೋರಿದರೆ ಅದರ ಮೂಲಕ ಎಷ್ಟು ದ್ರವ್ಯಲಾಭವಾಗು ವಂತಿದ್ದರೂ ಅದನ್ನು ಎಂದಿಗೂ ಹಿಡಿಯುತ್ತಿರಲಿಲ್ಲ. ನ್ಯಾಯರೀತಿಯಲ್ಲೇ ವಾದಿಸಿ, ಜಯ ಸಂಪಾದನೆ ಮಾಡುತ್ತಿದ್ದುದು ಆತನ ಉದ್ದೇಶವಾಗಿದ್ದಿ ತಲ್ಲದೆ, ತನ್ನ ಪಕ್ಷವು ಗೆಲ್ಲಬೇಕೆಂದು ಎಂದೂ ಸುಳ್ಳುಸಾಕ್ಷಿಗಳನ್ನು ತಯಾರಿಸುತ್ತಿರಲಿಲ್ಲ. ತರುವಾಯ ಕೆಲವು ದಿನಗಳವರೆಗೆ ಆ ಊರಿನ ಟಪ್ಪಾಲಾಫೀಸಿನಲ್ಲಿ ಪೋಸ್ಟ್‌ಮಾಸ್ತರ ಕೆಲಸವೂ ದೊರೆತು, ಪತ್ರಿಕೆಗಳ ನ್ನೋದಿ ಹೊರಗಿನ ಸಂಗತಿಗಳನ್ನು ಗ್ರಹಿಸಲೂ ವಿಶೇಷ ಅವಕಾಶವೊದಗಿತು.

೧೮೩೪ರಲ್ಲಿ ಲಿಂಕನನು ಮತ್ತೊಂದು ಬಾರಿ ನಡೆದ ಪ್ರತಿನಿಧಿ ಚುನಾವಣೆಗೆ ನಿಂತು ಜಯಶೀಲನಾದನು. ಅಂದು ತನ್ನ ಸ್ವಭಾವಕ್ಕೆ ತಕ್ಕ ಸ್ಥಾನವು ದೊರೆಯಿತೆಂದು ಆತನು ಬಹು ಸಮಾಧಾನಪಟ್ಟುಕೊಂಡು, ಸಭೆ ಯಲ್ಲಿ ಚರ್ಚಿಸಬೇಕಾದ ಸಂಗತಿಗಳನ್ನು ತನ್ನ ಮನಸ್ಸಿನಲ್ಲೇ ಚೆನ್ನಾಗಿ ಮಥಿಸಿ ಮಥಿಸಿ, ತನ್ನ ಅಭಿಪ್ರಾಯಗಳನ್ನು ನಿರ್ಧರಿಸಿಕೊಂಡು, ತರುವಾಯ ಸಭೆಯಲ್ಲಿ ಯುಕ್ತಿಯುಕ್ತವಾದ ನ್ಯಾಯಸಮ್ಮತವಾದ ಮಾತುಗಳಿಂದ ಸ್ಪಷ್ಟಗೊಳಿಸುತ್ತಿದ್ದನು. ತನ್ನ ಮನಸ್ಸಿನ ಅಭಿಪ್ರಾಯಗಳಂಥವೆಂ ಬುದನ್ನು ತನ್ನನ್ನು ಚುನಾಯಿಸಿದವರೆಲ್ಲರಿಗೂ ತಿಳಿಸಲೋಸುಗ ಆತನು, ಬೇರೆ ಬೇರೆ ಸ್ಥಳಗಳಿಗೂ ಸಂಚರಿಸಿ ಉಪನ್ಯಾಸ ಮಾಡುತ್ತಿದ್ದನು. ಆ ಸಂದರ್ಭಗಳಲ್ಲೆಲ್ಲ, ದಿನದಿನಕ್ಕೆ ಹೆಚ್ಚಿ ಹೋಗುತ್ತಿದ್ದ ಗುಲಾಮರ ದುಸ್ಥಿತಿ ಯನ್ನು ಕುರಿತೂ, ಈ ದಾಸ್ಯಪದ್ಧತಿಯ ನಿವಾರಣೆಯನ್ನು ಕುರಿತೂ, ಜನಗಳಿಗೆ ವಿಶೇಷವಾಗಿ ಬೋಧಿಸುವುದನ್ನು ಮರೆಯುತ್ತಿರಲಿಲ್ಲ. ಅದನ್ನು ಕೇಳಿದವ ರೆಲ್ಲರೂ, ಅದು ನ್ಯಾಯಸಮ್ಮತವಾದುದೆಂದು ಒಪ್ಪುತ್ತಿದ್ದರು. ಒಂದು ಕಡೆ ಸ್ವಾರ್ಥಸಾಧಕರು, ಕಾನೂನುಗಳನ್ನು ರಚಿಸಿ ಅವುಗಳ ಬೆಂಬಲದಿಂದ ನೀಗ್ರೋ ಜನಗಳ ದಾಸ್ಯಪದ್ಧತಿಯನ್ನು ಸ್ಥಿರಗೊಳಿಸಲು ಪ್ರಯತ್ನಿಸು

ತ್ತಿದ್ದರೆ, ಮತ್ತೊಂದು ಕಡೆ ಅಬ್ರಹಾಮನೂ, ಆತನ ಸ್ನೇಹಿತನಾದ ಡಾನ್ ಸ್ಟೋನ್ ಎಂಬಾತನೂ, ಅದನ್ನು ನಿರ್ಮೂಲಿಸಿದರೆ ಮಾತ್ರವೇ, ನಾವು ನಾಗರಿಕರೆಂಬ ಮಾತಂತಿರಲಿ—ಮನುಷ್ಯರೆಂಬ ಸ್ಥಾನಕ್ಕಾದರೂ ಯೋಗ್ಯರೆನ್ನಿಸಿಕೊಳ್ಳುವೆವು ಎಂದು ವಾದಿಸಿ, ಸರ್ಕಾರಕ್ಕೆ ಒಂದು ಅರ್ಜಿಯನ್ನು ಬರೆದುಕೊಂಡರು. ಅದರಿಂದ ಒಡನೆಯೇ ಹೆಚ್ಚಿನ ಪ್ರಯೋಜನವಾಗದಿದ್ದರೂ, ಆತನು ಮುಂದಾದರೂ ದೀನರಾದ ಆ ಮಾನವ ಪ್ರಾಣಿಗಳ ಜೀವಿತವನ್ನು ಉತ್ತಮಗೊಳಿಸುವಲ್ಲಿ ಸ್ಥಿರ ಸಂಕಲ್ಪವುಳ್ಳವನೆಂಬುದನ್ನು ಅದು ವ್ಯಕ್ತಪಡಿಸುತ್ತಿದ್ದಿತು.

ಲಾಯರ್ ಆಗಿ ಕೆಲಸಮಾಡತೊಡಗಿದ ಮೇಲೆ ಅಬ್ರಹಾಂ ಲಿಂಕನನು ಜೀವನಕ್ಕಾಗಿ ಕಷ್ಟಪಡಬೇಕಾಗಿರಲಿಲ್ಲ. ಆಗ ಆತನು, ನ್ಯೂಸೇಲಮ್ಮನ್ನು ಬಿಟ್ಟು ಇಲಿನಾಯ್ ಸಂಸ್ಥಾನಕ್ಕೆ ಪ್ರಯಾಣಮಾಡಿ, ಅದರ ಮುಖ್ಯ ಪಟ್ಟಣವಾದ ಸ್ಪ್ರಿಂಗ್ ಫೀಲ್ಡ್ ಎಂಬ ಸ್ಥಳದಲ್ಲಿ ನೆಲೆಸಿದನು. ಆ ಊರು ದಿನದಿನಕ್ಕೆ ಪ್ರಾಮುಖ್ಯತೆಗೆ ಬರುತ್ತಿದ್ದಿತು. ಅಲ್ಲಿ ಆ ಪ್ರಾಂತದ ನ್ಯಾಯವಿಧಾಯಕ ಸಭೆಯೂ ನೆರೆಯುತ್ತಾ ಅದರ ಗೌರವವನ್ನು ಹೆಚ್ಚಿಸುತ್ತಿದ್ದಿತು. ಮುಂದೆ ಅಧ್ಯಕ್ಷಪದವಿಯನ್ನೇರುವವರೆಗೂ ಆತನು ಅಲ್ಲೇ ವಾಸಿಸಿದನು.

ಅಬ್ರಹಾಂ ಲಿಂಕನನು ಬಹು ಉದಾರ ಸ್ವಭಾವದವನಾಗಿದ್ದರೂ, ಅವನು ಹೆಂಗಸರೊಂದಿಗೆ ವಿಶೇಷ ಮಾತುಕಥೆಗಳಲ್ಲಿ ಬೆರೆಯಲು ಇಚ್ಛಿಸುತ್ತಿರಲಿಲ್ಲ. ಸಚ್ಛೀಲತೆಯುಳ್ಳ ಸ್ತ್ರೀಯರೊಂದಿಗೆ ಮಾತನಾಡಲು ಅಭ್ಯಂತರವಿಲ್ಲದಿದ್ದರೂ, ಅವರ ಮಧ್ಯದಲ್ಲಿ ವಿಶೇಷವಾಗಿ ಬೆರೆದು ನಗುತ್ತಾ ಕಳೆಯುತ್ತಾ ಇರುವುದು ಆತನಿಗೆ ಸೇರದು. ೧೮೪೦ ರ ಸುಮಾರಿನಲ್ಲಿ ಸ್ಪ್ರಿಂಗ್ ಫೀಲ್ಡಿನಲ್ಲೇ ವಾಸಿಸಿದ್ದ ಮಿಸ್. ಮೇರಿ ಟಾಡ್ ಎಂಬಾಕೆಯು, ಲಿಂಕನನ ಪ್ರಸಿದ್ಧಿಯನ್ನೂ ಕೀರ್ತಿಯನ್ನೂ, ಸಚ್ಛೀಲ ಸ್ವಭಾವವನ್ನೂ ಕೇಳಿ ಆತನನ್ನು ಕೈಹಿಡಿಯಲುದ್ದೇಶಿಸಿದಳು. ಅವರಿವರಿಗೆ ಪ್ರೇಮ ಸಂಭಾಷಣೆಗಳಿಗೆ ಪ್ರಾರಂಭವಾಗಿ ಅನುರಾಗವು ಬೆಳೆಪಟ್ಟಿತು. ಈ ಮಧ್ಯೆಯೊಂದುವೇಳೆ ಈ ಸ್ನೇಹಾನುರಾಗಗಳಿಗೆ ವಿಘ್ನವೊದಗಿತಾದರೂ, ತರುವಾಯ ಅದು ಪರಿ

ಹಾರವಾಗಿ, ಅದೇ ಸಂವತ್ಸರದಲ್ಲಿಯೇ ವಿವಾಹವೂ ನಡೆಯಿತು. ಮಿಸೆಸ್ ಲಿಂಕನ್ನಳು ಪತಿಯ ಚಿತ್ತವೃತ್ತಿಯೆಂಥದೆಂಬುದನ್ನು ಶೀಘ್ರವಾಗಿ ಗ್ರಹಿಸಿಕೊಂಡಳು. ಆಕೆಯು ಪ್ರಸನ್ನಚಿತ್ತವುಳ್ಳವಳೂ, ಬುದ್ಧಿವಂತಳೂ ಮೃದುಭಾಷಿಣಿಯೂ ಆದುದರಿಂದ ಲಿಂಕನನ ಸಂಸಾರಭಾರವು ಅವನಮೇಲೆ ಬೀಳದೆ, ಅತನು ಇತರ ಕಾರ್ಯಗಳನ್ನು ಗಮನಿಸಿಕೊಂಡಿರಲು ಹೆಚ್ಚು ವಿರಾಮ ದೊರೆವಂತಾಯಿತು. ಮದುವೆಯಾದಮೇಲೆ ಆ ದಂಪತಿಗಳು ಗ್ಲೋಬ್ ಟ್ಯಾವರ್ನ ಎಂಬೊಂದು ಹೋಟೇಲಿನಲ್ಲಿ ತಮ್ಮ ವಾಸಕ್ಕಾಗಿ ಸ್ಥಳವನ್ನು ಚುನಾಯಿಸಿಕೊಂಡರು. ಹುಟ್ಟಿದಂದಿನಿಂದಲೂ ಹುಚ್ಚು ಹುಡುಗನಂತೆ ಒರಟೊರಟು ಜೀವನದಲ್ಲೇ ಬೆಳೆದು ಬಂದ ಲಿಂಕನನು ವಿವಾಹಮಾಡಿಕೊಂಡು ಗೃಹಸ್ಥನಾಗಿ, ಗೌರವಸ್ಥನಾಗಿ, ಇನ್ನು ಮುಂದೆ ಜೀವಿತದಲ್ಲಿ ತನ್ನ ಅತಿ ಮುಖ್ಯ ಕಾರ್ಯವೇನು ಎಂಬುದನ್ನು ಕುರಿತು ಯೋಚಿಸಲು ಮೊದಲು ಮಾಡಿದನು.



**ಅಧ್ಯಾಯ ೫ ' ರಾಷ್ಟ್ರೀಯ ಸಭಾಧ್ಯಕ್ಷತೆ.**

ಸ್ವಾರ್ಥಸಾಧನಾಪೇಕ್ಷೆಯಲ್ಲಿ ಮುಳುಗಿದವನು, ರಾಷ್ಟ್ರಸೇವಕನ ವೇಷದಿಂದ ಪ್ರಜೋಪಕಾರ ಮಾಡುತ್ತೇನೆಂದು ಮುಂದೆ ಬಂದರೆ ಅವನಿಂದ ಲೋಕಕ್ಕೆ ಮೇಲುಂಟಾಗುವುದಕ್ಕಿಂತಲೂ ಕೇಡೇ ಹೆಚ್ಚಾಗಿ ಆಗುವುದು. ರಾಷ್ಟ್ರಸೇವಕನಿಗೆ ತಾನು ತನ್ನ ಜೀವಿತದಲ್ಲಿ ಸಾಧಿಸಬೇಕಾದ ಕಾರ್ಯವೇನು ಎಂಬುದರ ವಿಷಯದಲ್ಲಿ ನಿಶ್ಚಯವಾದ ಒಂದು ಅಭಿಪ್ರಾಯವಿರಬೇಕು. ಲಿಂಕನನಿಗೆ ಅಂತಹ ಒಂದು ನಿಶ್ಚಯೋದ್ದೇಶವಿದ್ದಿತು. ಅಮೆರಿಕಾದಲ್ಲಿದ್ದ ದಾಸ್ಯಪದ್ಧತಿಯನ್ನು-ಗುಲಾಮರ ವ್ಯಾಪಾರವನ್ನು ತಪ್ಪಿಸಬೇಕು ಎಂಬುದೊಂದು ಅತನ ಜನ್ಮಧ್ಯೇಯವಾಗಿದ್ದಿತು. ಅತನು ಕೈಕೊಂಡ ಇತರ ಯಾವ ಕೆಲಸವಾದರೂ ಈ ಒಂದು ಉದ್ದೇಶಸಾಧನೆಗೆ ಸಹಾಯವಾಗಿದ್ದಿತಲ್ಲದೆ ಬೇರಲ್ಲ. ಜೀವನೋಪಾಯಕ್ಕಾಗಿ, ಲಾಯರನ

ಕೆಲಸವನ್ನು ಆತನು ಕೈಕೊಂಡನು. ಆದರೆ ಅದರ ಮೂಲಕ ತನ್ನ ಮುಖ್ಯೋದ್ದೇಶ ಸಾಧನೆಗೆ ಅವಶ್ಯಕವಾದ ವಾಗ್ವೈಖರಿಯನ್ನು ಹೆಚ್ಚಿಸಿಕೊಳ್ಳಬೇಕೆಂಬುದು ಅಂತರ್ಯಾಪೇಕ್ಷೆಯಾಗಿದ್ದಿತು. ಸಭೆಗಳಲ್ಲಿ ಪ್ರಾತಿನಿಧ್ಯಕ್ಕಾಗಿ ಪ್ರಯತ್ನಿಸಿದನು. ಆದರೆ ಅದರಿಂದ ತಾನು ಮಹನೀಯನೆನ್ನಿಸಿಕೊಳ್ಳಬೇಕೆಂಬುದಲ್ಲ—ಆ ಮೂಲಕವಾಗಿ ಜನಮತವನ್ನು ತನ್ನ ಉದ್ದೇಶ ಸಾಧನೆಗಾಗಿ ಒಲಿಸಿಕೊಳ್ಳಬೇಕೆಂಬುದೇ ಆತನ ಅಂತರ್ಯ ಅಭಿಲಾಷೆಯಾಗಿದ್ದಿತು. ಹೀಗೆ ಆತನು ಜೀವನೋಪಾಯಕ್ಕಾಗಿ ಯಾವ ಕಾರ್ಯವನ್ನು ಕೈಕೊಂಡಿದ್ದರೂ, ಅದರ ಮೂಲಕ ತನ್ನ ಉದ್ದೇಶಸಾಧನೆಗೆ ಹೇಗೆ ಸಹಾಯ ಒದಗುವುದೆಂಬುದು ಆತನ ದೃಕ್ಪಥದಿಂದ ಮರೆಯಾಗಿರಲಿಲ್ಲ.

೧೮೪೬ನೆಯ ಸಂವತ್ಸರದಲ್ಲಿ ಮತ್ತೊಂದು ವೇಳೆ ಪ್ರಾತಿನಿಧ್ಯಕ್ಕಾಗಿ ಪ್ರಯತ್ನಿಸಿದನು. ಆ ಬಾರಿಯೂ ಆತನಿಗೆ ಹೆಚ್ಚು ಓಟುಗಳು ಬಂದುವು. ಲಿಂಕನನು ವ್ಹಿಗ್ಗರ ಸಂಗಡಕ್ಕೆ ಸೇರಿದವನು. ಡೆಮೊಕ್ರೇಟರು ವ್ಹಿಗ್ಗರಿಗೆ ವಿರೋಧ ಪಕ್ಷದವರು. ೧೮೪೮ನೆಯ ಸಂವತ್ಸರದಲ್ಲಿ ಸೇರಿದ ರಾಷ್ಟ್ರ ಮಹಾ ಸಭೆ (Congress) ಯಲ್ಲಿ, ಕ್ಯಾಲಿಫೋರ್ನಿಯ ಮತ್ತು ನ್ಯೂ ಮೆಕ್ಸಿಕೋ ಪ್ರಾಂತಗಳಲ್ಲಿ ದಾಸ್ಯವನ್ನು ಪೂರ್ತಿಯಾಗಿ ನಿಲ್ಲಿಸಬೇಕೆಂದು ಬರೆದು ಸಭೆಯಲ್ಲಿ ಓದಿದನು. ಅದನ್ನು ದಕ್ಷಿಣ ಸಂಸ್ಥಾನಗಳವರು ವಿರೋಧಿಸಿದರು. ಇನ್ನೂ ಅದನ್ನು ವಿರೋಧಿಸುವ ಪಕ್ಷದವರೇ ಹೆಚ್ಚಾಗಿದ್ದುದರಿಂದ ಅದು ಸೆನೇಟನ್ನು ಪ್ರವೇಶಿಸಿದರೂ ಅಲ್ಲಿ ಜಯ ಹೊಂದಲಿಲ್ಲ. ಗುಲಾಮರ ವ್ಯಾಪಾರಕ್ಕೆ ಲಿಂಕನನ ಲೇಖನ-ಭಾಷಣ ಮುಂತಾದುವುಗಳಿಂದ ಹೀಗೆ ಪ್ರತಿಬಂಧಕಗಳು ಒದಗುತ್ತಿದ್ದಂತೆಲ್ಲಾ ಅದನ್ನು ಸಮರ್ಥಿಸುತ್ತಿದ್ದವರು ಅದನ್ನು ಸ್ಥಿರೀಕರಿಸುವ ವಿಷಯದಲ್ಲಿ ನಡೆಸುತ್ತಿದ್ದ ಪ್ರಯತ್ನಗಳೂ ಅಧಿಕವಾಗುತ್ತಿದ್ದುವು. ಕೆಲವು ದಿನಗಳ ತರುವಾಯ ಕೊಲಂಬಿಯಾ ನಗರದಲ್ಲಿ ಸಭೆ ನಡೆಯಿತು. ಆಗಲೂ ಲಿಂಕನನು,-'ಇದೇನನ್ಯಾಯ ? ಈ ಊರಲ್ಲೇ ಸಭೆಯು ನಡೆಯುತ್ತಿರುವಲ್ಲಿ, ಇಲ್ಲೇ ಗುಲಾಮರನ್ನು ಕೃಮಿಗಳಿಗಿಂತಲೂ,-ಪಶುಗಳಿಗಿಂತಲೂ ಕಡೆಯಾಗಿ ಸಂಕಲೆಯಿಂದ ಬಂಧಿಸಿ ಬೀದಿಗಳಲ್ಲಿ ಎಳೆದುಕೊಂಡು ಹೋಗಲು ಅವಕಾಶವನ್ನು ಕೊಡುವುದು

ಯಾವ ನ್ಯಾಯ?' ಎಂದು ಬಹು ತೀಕ್ಷ್ಣವಾಗಿ ವಾದಿಸಿದನು. ಆ ಪ್ರಾಂತ ದಲ್ಲಿದ್ದ ಗುಲಾಮರೂ, ಅವರಿಂದ ಹುಟ್ಟಿದ ಮಕ್ಕಳೂ ಬಂಧನದಿಂದ ವಿಮುಕ್ತರಾಗಬೇಕೆಂದೂ, ಸರಕಾರವು ಆ ಯಜಮಾನರಿಗೆ ಪರಿಹಾರ ದ್ರವ್ಯವನ್ನು ಕೊಡಬೇಕೆಂದೂ ಈತನು ಆ ಸಭೆಯಲ್ಲಿ ಸಮರ್ಥಿಸಿ ದ್ದನು. ಅದು ದಕ್ಷಿಣದ ಪ್ರತಿನಿಧಿಗಳಿಂದ ಬಹು ಕಠಿಣವಾಗಿ ವಿರೋಧಿ ಸಲ್ಪಟ್ಟು ಬಿದ್ದುಹೋಯಿತು. ಮುಂದೆ ದಕ್ಷಿಣದವರು ದಾಸ್ಯವನ್ನು ಸ್ಥಿರೀಕರಿಸುವ ಅಭಿಲಾಷೆಯುಳ್ಳವರೆಂಬುದು ಸಿದ್ಧವಾಯಿತು. ಸಂ ಯುಕ್ತ ಸಂಸ್ಥಾನದಲ್ಲಿ ದಾಸ್ಯವಿಲ್ಲದಿರುವಂಥದು ಉತ್ತರ ಪ್ರಾಂತ ವೆಂದೂ, ದಾಸ್ಯವಿರುವಂಥದು ದಕ್ಷಿಣ ಪ್ರಾಂತವೆಂದೂ ವಿಂಗಡವಾಗಿ ಬಿಟ್ಟಿತು.

ನ್ಯಾಯ ನಿಷ್ಠುರಿಗೆ, ನ್ಯಾಯರಕ್ಷಣೆಯ ವಿಷಯದಲ್ಲಿ ದೃಷ್ಟಿಯಿರು ವುದಲ್ಲದೆ, ನ್ಯಾಯಮಾರ್ಗವನ್ನು ಮೀರಿದವರು ತನ್ನವರೇ ಪರರೇ ಎಂಬ ವಿಚಾರದಲ್ಲಿ ಪಕ್ಷಪಾತವಿರುವುದಿಲ್ಲ. ಲಿಂಕನನು, ತನ್ನ ಸ್ವಜನರು ದಾಸ್ಯ ವನ್ನು ಸ್ಥಿರಗೊಳಿಸಬೇಕೆಂದು ಪ್ರಯತ್ನಿಸುತ್ತಿದ್ದುದನ್ನು ಕಂಡು—'ಅಕ್ಕ ಟಾ, ಗುಲಾಮರ ಮೇಲೆ ನಮ್ಮವರು ಮಾಡುತ್ತಿರುವ ಈ ಅತ್ಯಾಚಾರ ವನ್ನು ಕಂಡು ನನ್ನ ಹೊಟ್ಟೆಯಲ್ಲಿ ಬೆಂಕಿ ಬಿದ್ದಹಾಗೆ ಆಗುತ್ತದೆ. ನಮ್ಮ ವರು ನಾಗರಿಕತೆಯ ಹೆಸರಿನಲ್ಲಿ ದಿನದಿನಕ್ಕೆ ಬಹು ನೀಚರಾಗುತ್ತಿದ್ದಾರೆ. ನೀಚತನವು ಬಹಳವಾಗಿ ಹೆಚ್ಚುತ್ತಿದೆ. ನಮ್ಮದೊಂದು ಜನಾಂಗವೆಂದು ಹೇಳಿಕೊಂಡು ಪ್ರಾರಂಭಿಸುವ ಕಾಲದಲ್ಲಿ ನಾವು-ಭಗವಂತನಿಂದ ಸೃಷ್ಟ ರಾದವರೆಲ್ಲರೂ ಸ್ವತಂತ್ರರು-ಸಮಾನರು' ಎಂದುಕೊಂಡೆವು. ಈಗಲಾ ದರೋ,-''ನೀಗ್ರೋಗಳನ್ನು ಬಿಟ್ಟು ಮಿಕ್ಕವರೆಲ್ಲರೂ ಸಮಾನರು' ಎನ್ನುತ್ತಿ ದ್ದೇವೆ. ಇದೆಂತಹ ನ್ಯಾಯ! ಸ್ವತಂತ್ರ-ಸ್ವತಂತ್ರವೆಂದು ಬಾಯಲ್ಲಿ ಹೇ ಳುತ್ತ, ಸ್ವಾತಂತ್ರ್ಯಪ್ರೀತಿಯನ್ನು ಕುರಿತು ನಟಿಸುತ್ತಾ ದಾಸ್ಯವನ್ನು ಸಮರ್ಥಿಸುತ್ತಿರುವ ಈ ದೇಶಕ್ಕಿಂತಲೂ, ಸ್ಪಷ್ಟವಾಗಿ ನಿರಂಕುಶತ್ವವನ್ನೇ ಸ್ಥಾಪಿಸುತ್ತಿರುವ ರಷ್ಯಾದೇಶದ ಸ್ಥಿತಿಯು ಮೇಲು, ಏಕೆಂದರೆ ಅಲ್ಲಿ ಈ ಬೂಟಾಟಿಕೆಯಿಲ್ಲ" ಹೀಗೆಂದು ತನ್ನವರ ಆತ್ಮವಂಚನೆಯ ವಿಷಯದಲ್ಲಿ ಆತನು ಸಂಕಟಪಡುತ್ತಿದ್ದನು.

ಈ ಬಾರಿಯು ಆತನ ಪ್ರಾತಿನಿಧ್ಯದ ಅವಧಿಯು ಮುಗಿದು ಹೋಯಿತು. ಮುಂದೆ ಆತನು ಪ್ರತಿನಿಧಿಯಾಗಲಿಲ್ಲ. ಆದರೆ ಅದಕ್ಕಿಂತಲೂ ಉನ್ನತವಾದ ಸ್ಥಾನವು ಆತನಿಗೆ ದೊರೆಯಿತು. ಆತನು ಸೆನೇಟಿನ ಮೆಂಬರಾಗಿ ವ್ಹಿಗ್ಗರ ಸಂಗಡದಿಂದ ಚುನಾಯಿಸಲ್ಪಟ್ಟನು. ಈ ಸುಮಾರಿನಲ್ಲೇ ಜಡ್ಜನಾದ ಡಗ್ಲಸ್ ಎಂಬುವನ ಕಾನ್‌ಸಾಸ್ ನೆಬ್ರೈಸ್ಕ ಮಸೂದೆಯೆಂಬೊಂದು ನ್ಯಾಯಕಟ್ಟವು ಸರ್ಕಾರದಿಂದ ಕಾನೂನಾಯಿತು. ಅದು ಲಿಂಕನನ ಪ್ರಯತ್ನಗಳಿಗೆಲ್ಲಾ ಅತಿಶಯ ಪ್ರಬಲವಾದ ವಿರೋಧ ಸಾಮಗ್ರಿಯೆಂದು ತೋರಿತು. ಅದನ್ನು ಪ್ರತಿಭಟಿಸಲು ಲಿಂಕನನೂ 'ರಿಪಬ್ಲಿಕನ್ ಪಾರ್ಟಿ' ಎಂಬ ಹೆಸರಿನಿಂದ ಒಂದು ಸಂಗಡವನ್ನು ಸ್ಥಾಪಿಸಿ ಅದಕ್ಕೆ ಮುಂದಾಳಾಗಿ ಕೆಲಸಮಾಡಲು ಸಂಕಲ್ಪಿಸಿದನು. ಈ ಸಂಗಡದ ಆಶ್ರಯದಲ್ಲಿ ಲಿಂಕನನು, ಡಗ್ಲಸನು ತಂದ ನಿರ್ಣಯಗಳಿಗೆಲ್ಲ ವಿರೋಧಿಸಿ ಕೆಲಕಾಲ ಹೋರಾಡಿದನು. ದಾಸ್ಯವನ್ನು ಮೆಚ್ಚದಿದ್ದ ರಾಷ್ಟ್ರ (Free State) ಗಳವರಿಗೆ ದಾಸ್ಯವನ್ನು ಸಮರ್ಥಿಸುತ್ತಿದ್ದ (Pro-Slavery) ರಾಷ್ಟ್ರಗಳವರಿಂದ ಬಾಧೆಯು ಹೆಚ್ಚಾಗತೊಡಗಿತು.

೧೮೬೦ನೆಯ ವರ್ಷವು ಸಮೀಪಿಸುತ್ತಿದ್ದಿತು. ಆವರೆಗೆ ಆತನು, ತನಗೆ ದೊರೆತಿದ್ದ ಸೆನೇಟ್ ಮೆಂಬರಿನ ಸ್ಥಾನದಿಂದ ದಾಸ್ಯನಿವಾರಣೆಯ ಪ್ರಶ್ನೆಯನ್ನು ಸಮರ್ಥಿಸಿ ಅನೇಕ ಸ್ಥಳಗಳಲ್ಲಿ ಉಪನ್ಯಾಸ ಮಾಡಿದ್ದನು. ಆತನು ಉಪನ್ಯಾಸಕ್ಕೆ ನಿಂತನೆಂದರೆ ಶ್ರೋತೃಗಳು ಚಿತ್ರಪತ್ರಿಮೆಗಳಂತಾಗಿ, ನಿಶ್ಶಬ್ದವಾಗಿ ಆತನ ಬಾಯಿಂದ ಧಾರಾಕಾರವಾಗಿ ಹೊರಡುತ್ತಿದ್ದ ವಾಕ್ಸರಣಿಯನ್ನು ಕೇಳಿ-'ಸಾಧು-ಸಾಧು' ಎಂದು ಹೊಗಳುತ್ತಿದ್ದರು. ಕೂಪರ್ ಯೂನಿಯನ್ ಎಂಬೊಂದು ಸ್ಥಳದಲ್ಲಿ ಆತನು ಮಾಡಿದ ಉಪನ್ಯಾಸವನ್ನು ಕೇಳಿ ಸಂಭ್ರಾಂತನಾದ ಯೇಲ್ ಕಾಲೇಜಿನ ಪ್ರೊಫೆಸರನೊಬ್ಬನು, ಆತನು ಮಾತನಾಡುವ ರೀತಿಯನ್ನೂ ವಿಚಾರವನ್ನೂ ವಾಗ್ವೈಖರಿಯ ನವೀನ ಪದ್ಧತಿಯನ್ನೂ ಗುರುತು ಹಾಕಿಕೊಂಡು ಹೋಗಿ, ತನ್ನ ಶಾಲೆಯ ವಿದ್ಯಾರ್ಥಿಗಳಿಗೆ, ಮಾದರಿಯ ಉಪನ್ಯಾಸವೆಂದು ಬಹು ಬಗೆಯಿಂದ ಕೊಂಡಾಡಿ ವಿವರಿಸಿದನಂತೆ !

ಮುಂದೆ ಕೆಲವು ದಿನಗಳಲ್ಲೀ ಪ್ರೆಸಿಡೆಂಟನ ಚುನಾವಣೆಯು ನಡೆಯ ಬೇಕಾದ ಕಾಲವೊದಗಿತು. ಲಿಂಕನನ ಪಕ್ಷದವರು, ಚುನಾವಣೆಯಲ್ಲಿ ನೀನೂ ಪ್ರೆಸಿಡೆಂಟ್ ಸ್ಥಾನಕ್ಕೆ ಉಮೇದುವಾರನಾಗಿ ನಿಲ್ಲೆಂದು ಆತನನ್ನು ಬಲವಂತ ಪಡಿಸಿದರು. ಲಿಂಕನನು ತಾನು ಆ ಸ್ಥಾನಕ್ಕೆ ತಕ್ಕ ಯೋಗ್ಯತೆ ಯನ್ನು ಸಂಪಾದಿಸಿಲ್ಲವೆಂದು ಸಂಕೋಚಪಟ್ಟನಾದರೂ ಕೊನೆಗೆ ಸ್ನೇಹಿತರ ಆಸೆಯನ್ನು ನಿರರ್ಥಕ ಮಾಡಲಿಷ್ಟವಿಲ್ಲದೆ, ಚುನಾವಣೆಗೆ ನಿಂತನು. ಆತ ನಂತೆಯೇ ಸಿವರ್ಡ್ ಮತ್ತು ಛೇಸ್ ಎಂಬಿಬ್ಬರು ಉಮೇದುವಾರರೂ ಇದ್ದರು. ಆದರೆ ೨೩೫ ಓಟುಗಳು ಬಂದು ಲಿಂಕನನೇ ಜಯಶಾಲಿಯಾ ದನು. ಈ ಸಮಾಚಾರವು ತಿಳಿದೊಡನೆಯೇ ಸ್ಪ್ರಿಂಗ್ ಫೀಲ್ಡಿನಲ್ಲಿ ಗೌರ ವಾರ್ಥವಾಗಿ ಒಂದು ನೂರು ತೋಪುಗಳಾದುವು. ಜನಗಳ ಉತ್ಸಾಹವು ಮಿತಿಮೀರಿತು. ಎಲ್ಲರೂ ಲಿಂಕನನ ಮನೆಗೆ ನಡೆದು ಆತನನ್ನು ಕಂಡು ಗೌರವಿಸಿದರು. ಲಿಂಕನನಾದರೂ, ಕೇವಲ ವಿನೀತ ಭಾವದಿಂದ ಅವರ ಉಪಕಾರ ಸ್ಮರಿಸಿ ವಂದನೆಗಳನ್ನು ಸಮರ್ಪಿಸಿ ಎಲ್ಲರನ್ನೂ ಗೌರವಿಸಿ ಕಳು ಹಿಸಿದನು. ಕಾಡಿನಲ್ಲಿ ಹುಟ್ಟಿ ಮರದ ದಿಮ್ಮಿಗಳ ಒಂದೇ ಕೊಟ್ಟಡಿಯು ಕ್ಷುದ್ರ ಗುಡಿಸಿಲಿನಲ್ಲಿ-ಹುಚ್ಚುಹುಚ್ಚಾಗಿ ಬೆಳೆದ ತನ್ನ ಮಗನು, ಸುಪ್ರಸಿದ್ಧ ವಕ್ತೃವೆಂದು ಹೆಸರಾಗಿ, ಸಂಯುಕ್ತ ಸಂಸ್ಥಾನವೆಂಬ ಮಹಾ ಪ್ರಬಲ ರಾಷ್ಟ್ರಕ್ಕೆ ಅಧ್ಯಕ್ಷನಾಗಿ-ಜನಗಣ ನಾಯಕನಾದ ಆ ಸುಯೋಗವನ್ನು ನೋಡುವ ಲಭ್ಯವು ಆತನ ತಂದೆಗೆ ಪ್ರಾಪ್ತಿಯಿರಲಿಲ್ಲ. ಆತನು ಈ ಹಿಂ ದೆಯೇ ಎಂಟರ ಲಕ್ಷ್ಮಿನೆಯ ಸಂವತ್ಸರದಲ್ಲೇ, ಮಗನು ಲಾಯರಾಗಿ ಜನ ಗಳ ಗೌರವಕ್ಕೆ ಪಾತ್ರನಾಗಿದ್ದುದನ್ನು ಕಂಡು ಅಷ್ಟುಮಾತ್ರಕ್ಕೇ ಸಂತೋಷ ಪಟ್ಟಿದ್ದನು. ಲಿಂಕನನು, ತನ್ನ ಪದವಿಗೂ ಅಭಿವೃದ್ಧಿಗೂ ವಿದ್ಯಾವಂತ ಳಾದ ತನ್ನ ಮಾತೆಯೇ ಕಾರಣಳೆಂದು ಆಗಾಗ ಸ್ಮರಿಸಿಕೊಳ್ಳುತ್ತಿದ್ದನು.



**ಅಧ್ಯಾಯ ೬.** **'ದಾಸ್ಯ ನಿವಾರಣೆ'**

ಲಿಂಕನನಿಗೆ ಪ್ರೆಸಿಡೆಂಟ್ ಪದವಿಯು ಪ್ರಾಪ್ತವಾದುದು, ದಕ್ಷಿಣ ಸಂಸ್ಥಾನಗಳವರಿಗೆ ವಿಶೇಷ ಅಸಮಾಧಾನಕ್ಕೆ ಕಾರಣವಾಯಿತು. ದಕ್ಷಿಣ

ದವರು-ನೀಗ್ರೋಗಳ ದಾಸ್ಯಪದ್ಧತಿಯನ್ನು ತೆಗೆದು ಹಾಕಬೇಕೆಂದು ಉತ್ತರದ ಸಂಸ್ಥಾನಗಳವರು ಹಟ ಹಿಡಿಯುವರಾದರೆ, ತಾವು ಸಂಯುಕ್ತವಾಗಿದ್ದ ತಮ್ಮ ರಾಜ್ಯಪದ್ಧತಿಯನ್ನೇ ಬದಲಾಯಿಸಿ-ಒಡೆದು ಬೇರೆ ನಿಲ್ಲಲಿಕ್ಕಾದರೂ ಸಿದ್ಧರಾಗುವೆವಲ್ಲದೆ, ಬಿಳಿಯವನ ಗೌರವ ಪದವಿ ದೊಡ್ಡಸ್ತಿಕೆಗಳನ್ನು ರಕ್ಷಿಸಲು ಆಕರವಾದ ಗುಲಾಮರನ್ನು ಇಟ್ಟುಕೊಳ್ಳಲಿಕ್ಕಿರುವ ಸ್ವಾತಂತ್ರ್ಯವನ್ನು ಬಿಟ್ಟುಕೊಡಲಾರೆವೆಂದು ಪ್ರತಿಭಟಿಸತೊಡಗಿದರು. ಈ ಸ್ವಾರ್ಥತೆಯ ಎದುರಿಗೆ ದೇಶಪ್ರೇಮವು ಹಾರಿಹೋಯಿತು. ತಮ್ಮ ಹಿರಿಯರು, ಸ್ವಾತಂತ್ರ್ಯಕ್ಕಾಗಿ ತಮ್ಮ ದೇಹರಕ್ತವನ್ನು ಸುರಿಸಿ, ಅಮೇರಿಕದ ನಿವಾಸಿಗಳಲ್ಲಿ ಅಭೂತಪೂರ್ವವಾಗಿದ್ದ ಐಕಮತ್ಯವನ್ನು ಸ್ಥಾಪಿಸಿದ್ದುದು, ಇಂದು ದಕ್ಷಿಣದ ಕೆಲವು ಮಂದಿ ಪುಂಡರ ಚಳುವಳಿಯಿಂದ ನಾಶವಾಗಿ, ಅಖಂಡವಾಗಿದ್ದ ಒಂದು ಸಾಮ್ರಾಜ್ಯದಲ್ಲಿ ಒಡಕು ಹುಟ್ಟಲು ಅವಕಾಶವಾಯಿತಲ್ಲಾ ಎಂದು ಉತ್ತರ ಭಾಗದವರು ವಿಶೇಷ ಪರಿತಾಪಪಟ್ಟರು. ಆದರೆ ಅವರ ಪರಿತಾಪವು ಸ್ವಾರ್ಥಸಾಧಕರಾದ ದಕ್ಷಿಣದವರ ಮನಸ್ಸನ್ನು ಬದಲಾಯಿಸಲು ಶಕ್ಯವಾಗಿರಲಿಲ್ಲ. ದಿನದಿನಕ್ಕೆ ವಿರೋಧಭಾವವು ಬೆಳೆಯುತ್ತಾ ಹೋಯಿತು. ಪ್ರಜಾ ಸ್ವಾತಂತ್ರ್ಯವನ್ನು ಸ್ಥಾಪಿಸಲಿಕ್ಕಾಗಿಯೇ ಏರ್ಪಟ್ಟುದಾದರೂ, ಸಂಯುಕ್ತ ರಾಜ್ಯಾಧಿಪತ್ಯವು, ಸ್ವೇಚ್ಛಾಚಾರಿಗಳಾದ ಪ್ರಜಾವರ್ಗವನ್ನು ಸ್ವಾಧೀನದಲ್ಲಿಟ್ಟುಕೊಳ್ಳಲು ಶಕ್ತವಾಗದಿದ್ದರೆ, ಅಂತಹ ದುರ್ಬಲವಾದ ಆಡಳಿತಕ್ಕೆ ರಾಜ್ಯಭಾರದ ಗೌರವನಾಮವಾದರೂ ಹೇಗೆ ದಕ್ಕಬಲ್ಲುದು ? ಲಿಂಕನ್ ಮಹಾಶಯನು, ಪ್ರಜಾಸ್ವಾತಂತ್ರ್ಯವೆಂಬ ಪದವು ಎಂತಹ ದುಷ್ಟವಾದ ಅರ್ಥದಲ್ಲಿ ಉಪಯೋಗಿಸಲ್ಪಟ್ಟು, ದುಷ್ಪರಿಣಾಮವನ್ನು ಹೊಂದುತ್ತಿದೆಯೆಂಬುದನ್ನು ಕಂಡು ಬಹು ಸಂತಾಪಪಟ್ಟನು. ವಾಷಿಂಗ್ಟನ್ ಮೊದಲಾದ ಪೂರ್ವಿಕ ಮಹನೀಯರು ಇಂಗ್ಲೆಂಡಿನ ಸಾಮ್ರಾಜ್ಯ ಸರ್ಕಾರದೊಂದಿಗೆ ಹೊಡೆದಾಡಿ ಸ್ವಾತಂತ್ರ್ಯವನ್ನು ಸಂಪಾದಿಸಿದುದಗಲ್ಲ, ಪ್ರತಿಯೊಬ್ಬರೂ ಸ್ವೇಚ್ಛೆಯಾಗಿ ನಡೆಯಲು ಅವಕಾಶವನ್ನು ಕಲ್ಪಿಸಬೇಕೆಂಬುದಲ್ಲ—ದುರ್ಗುಣಗಳನ್ನು ಹೆಚ್ಚಿಸಿ, ದುರಾಚರಣೆಗಳನ್ನು ರಾಜ್ಯದಲ್ಲಿ ಹೆಚ್ಚಿಸಲು ಅವಕಾಶವನ್ನುಂಟು ಮಾಡಬೇಕೆಂಬುದಲ್ಲ-ಎಂದು ಆತನು ತನ್ನ ಉಪನ್ಯಾಸಗಳಲ್ಲಿ ಒತ್ತಿಯೊತ್ತಿ

ಹೇಳಿದನು. ದಕ್ಷಿಣದವರ ಮನಸ್ಸಿನಮೇಲೆ ಅದರಿಂದಲೂ ಯಾವ ಪರಿಣಾಮವೂ ಆಗಲಿಲ್ಲ. ದಿನದಿನಕ್ಕೆ ಪ್ರತ್ಯೇಕವಾಗುವ ವಿಚಾರವು ವಿಸ್ತಾರವಾಗ ತೊಡಗಿತು. ಅದನ್ನು ತಿಳಿದು ಪ್ರೆಸಿಡೆಂಟ್ ಮಹಾಶಯನು ಸದ್ಯಃ ಮತ್ತಾವ ಕೆಲಸವಮಾಡಲು ಅವಕಾಶವಿಲ್ಲದಿದ್ದರೂ, ದಕ್ಷಿಣ ಪ್ರಾಂತದವರಿಗೆ—'ಪ್ರತ್ಯೇಕವಾಗುವುದು ಅಧರ್ಮ-ಅದನ್ನು ನಿರೋಧಿಸಿ, ತನ್ನ ಪ್ರಜೆಗಳನ್ನು ಹದ್ದಿನಲ್ಲಿಡಲು ಸರ್ಕಾರಕ್ಕೆ ಅಧಿಕಾರವುಂಟು' ಎಂಬೊಂದು ಸಂದೇಶವನ್ನು ಕಳುಹಿಸಿದನು. ದಕ್ಷಿಣದವರು ಅದನ್ನು ನಿರಾಕರಿಸಿ ಬಿಟ್ಟರು. ಸರ್ಕಾರವು ಬರಿಯ ಬಾಯಿಮಾತಿನಲ್ಲಿ ಹಾಗೆ ಹೇಳಬಹುದಲ್ಲದೆ-ಅದರ ಕೈಯಲ್ಲಿ ಏನೂ ಸಾಗದು' ಎಂದು ಅವಹೇಳನ ಮಾಡಿಬಿಟ್ಟರು.

ಪ್ರೆಸಿಡೆಂಟನ ಚುನಾವಣೆಯು ನವಂಬರು ತಿಂಗಳಲ್ಲಿ ನಡೆಯಿತಾದರೂ, ಮುಂದೆ ಲಿಂಕನನು, ಅಧಿಕಾರವನ್ನು ಸ್ವೀಕರಿಸುವುದಕ್ಕೆ ಮೂರು ನಾಲ್ಕು ತಿಂಗಳ ಅವಧಿಯಿದ್ದಿತು. ಲಿಂಕನನು ಫೆಬ್ರವರಿ ತಿಂಗಳ ೧೧ನೆಯ ತಾರೀಖಿನಲ್ಲಿ ಸ್ಪ್ರಿಂಗ್ ಫೀಲ್ಡಿನಿಂದ ವಾಷಿಂಗ್ಟನ್ ರಾಜಧಾನಿಯನ್ನು ಸೇರಲಿಕ್ಕಾಗಿ ಪ್ರಯಾಣವಾದನು. ಮಾರ್ಗದಲ್ಲಿ ಪ್ರತಿಯೊಂದು ಊರಿನವರೂ ಆತನನ್ನು ಗುಂಪುಗುಂಪಾಗಿ ಸಂದರ್ಶಿಸಿ ಗೌರವಿಸಿ, ಆತನ ಸಂದೇಶವನ್ನು ಕೇಳಲು ಆತುರಗೊಳ್ಳುತ್ತಿದ್ದರು. ಲಿಂಕನನಾದರೋ-'ಐಕ್ಯಮತ್ಯವನ್ನು ರಕ್ಷಿಸಿಕೊಳ್ಳಬೇಕಾದುದು ಅತ್ಯಗತ್ಯ-ಹಿರಿಯರಿಂದ ಬಹು ಕಷ್ಟಪಟ್ಟು ಸಂಪಾದಿಸಲ್ಪಟ್ಟ ಪ್ರಜಾ ಸ್ವಾತಂತ್ರ್ಯವನ್ನು ಸ್ವಾರ್ಥಸಾಧನೆಗೆ ಬಲಿಕೊಟ್ಟು, ರಕ್ತದ ಕೋಡಿ ಹರಿಯಲು ಅವಕಾಶವನ್ನು ಕಲ್ಪಿಸಬೇಡಿ' ಎಂದು ಒಂದೊಂದು ಸ್ಥಳದಲ್ಲೂ ನುಡಿಯುತ್ತಾ ಪ್ರಯಾಣ ಮಾಡಿದನು. ಮಾರ್ಗದಲ್ಲಿ ಆತನನ್ನು ಖೂನಿ ಮಾಡುವ ಪ್ರಯತ್ನವು ನಡೆಯುತ್ತಿದೆಯೆಂಬ ವರ್ತಮಾನವೂ ತಿಳಿಯಿತು. ಆತನು ಆ ಭಯಂಕರ ವಾರ್ತೆಯನ್ನು ಕೇಳಿದರೂ ಅಂಜಲಿಲ್ಲ.-'ಯಾವಾಗಲೂ ಪ್ರಾಣಭಯದಿಂದ ಸಾಯುತ್ತಿರುವವನು ಯಾವ ಕೆಲಸವನ್ನೂ ಸಾಧಿಸಲಾರನು. ಅದುದಾಗಲಿ, ನನ್ನ ಕರ್ತವ್ಯವನ್ನು ನಾನು ಮಾಡಿಬಿಡುತ್ತೇನೆ' ಎಂದು ನುಡಿದು, ಯಾವ ಬಾಲ್ಟಿಮೋರ್ ಎಂಬ ಊರಿನ ಬಳಿ ಪ್ರಾಣಾಪಾಯಕರವಾದ ಸನ್ನಾಹಗಳು ನಡೆ

ಯುಕ್ತಿವೆಯೆಂದು ಎಲ್ಲರೂ ಶಂಕಿಸಿದ್ದರೋ, ಆ ಊರಿನ ಮಾರ್ಗವಾಗಿಯೇ ಗೊತ್ತಾದ ಕಾಲಕ್ಕಿಂತಲೂ ಒಂದೆರಡು ಗಂಟೆಗಳ ಮುಂಚಿತವಾಗಿಯೇ ರೈಲಿನಲ್ಲಿ ಪ್ರಯಾಣಮಾಡಿ, ರಾತ್ರಿ ಎರಡು ಗಂಟೆಯ ವೇಳೆಯಲ್ಲಿ ರಾಜಧಾನಿ ನಗರವನ್ನು ತಲುಪಿದನು.

ಮಾರ್ಚಿ ನಾಲ್ಕನೆಯ ದಿನ ಪ್ರೆಸಿಡೆಂಟನ ಪ್ರಥಮ ಸಂಭಾಷಣೆಯಾಯಿತು. ಅದರಲ್ಲಿ ಎಲ್ಲಕ್ಕಿಂತಲೂ ಮುಖ್ಯವಾಗಿ,-'ಯಾವ ಸಂಸ್ಥಾನವೂ ಸಂಯುಕ್ತ ರಾಜ್ಯಾಧಿಪತ್ಯವನ್ನು ಬಿಟ್ಟು ಹೋಗಕೂಡದು. ಅದು ಅತಿಶಯ ನ್ಯಾಯ ವಿರುದ್ಧವಾದುದು' ಎಂದು ಹೇಳಿದನು. ಸರ್ಕಾರವು ದುಷ್ಟರ ಪುಂಡಾಟವನ್ನು ಅಡಗಿಸಿ ದೇಶದಲ್ಲಿ ಶಾಂತತೆಯನ್ನೂ ಐಕಮತ್ಯವನ್ನೂ ಸ್ಥಾಪಿಸುವಲ್ಲಿ ತನ್ನ ಕೈಯಲ್ಲಿ ಸಾಧ್ಯವಿರುವಷ್ಟು ಸಾಮರ್ಥ್ಯವನ್ನೂ ಉಪಯೋಗಿಸಬೇಕೆಂಬುದು ಆತನ ಅಭಿಪ್ರಾಯವಾಗಿದ್ದರೂ, ಆತನು ಸಾಮೋಪಾಯದಿಂದಲೇ ಪ್ರಯತ್ನಿಸಿ, ಸಾಧ್ಯವಿದ್ದರೆ ರಕ್ತಪ್ರವಾಹವನ್ನು ತಪ್ಪಿಸಿ ಉತ್ತರ-ದಕ್ಷಿಣ ಪ್ರಾಂತಗಳವರಲ್ಲಿ ಪರಸ್ಪರ ಐಕಮತ್ಯವನ್ನು ಸ್ಥಾಪಿಸಬೇಕೆಂದು ಹೆಣಗಿದನು. ಅದೇ ಉಪನ್ಯಾಸದಲ್ಲೇ ಆತನು-'ನಾವು ಪರಸ್ಪರ ಶತ್ರುಗಳಲ್ಲ-ಮಿತ್ರರು. ನಾವು ಒಬ್ಬರಿಗೊಬ್ಬರು ಶತ್ರುಗಳಾಗಬಾರದು. ಆದರೆ, ಕಾರಣಾಂತರದಿಂದ ಈಗ ಈಯೊಂದು ವೈಷಮ್ಯವು ಉತ್ಪನ್ನವಾಗಿದೆ. ಇಷ್ಟು ಮಾತ್ರಕ್ಕಾಗಿ. ನಾವು ಪ್ರೇಮ ಬಂಧವನ್ನು ಕಿತ್ತೊಗೆದು ಯುದ್ಧಕ್ಕೆ ತೊಡಗುವದು ತಕ್ಕುದಲ್ಲ. ಒಂದು ಮನೆಯವರು ಕಾರಣಾಂತರದಿಂದ ಜಗಳವಾಡಿದರೂ ಉತ್ತರ ಕ್ಷಣದಲ್ಲೇ ಪುನಃ ಒಂದಾಗುವುದಿಲ್ಲವೆ? ನಮ್ಮ ಪೂರ್ವಿಕರು ಐಕಮತ್ಯಕ್ಕಾಗಿ ಎಷ್ಟು ಕಷ್ಟ ಸಹನ ಮಾಡಿದರೆಂಬುದು ನಮ್ಮ ಜ್ಞಾಪಕದಲ್ಲಿರಬೇಕು. ಸ್ವಾತಂತ್ರ್ಯ ಪ್ರಾಪ್ತಿಗಾಗಿ ಅವರು ಪಟ್ಟ ಕಷ್ಟವು ನಮ್ಮ ಲಕ್ಷ್ಯದಲ್ಲಿ ಬಂದಿತಾದರೆ, ಅದನ್ನು ಉಪೇಕ್ಷಿಸಲು ಯಾರಿಗೆ ತಾನೇ ಮನಸ್ಸಾದೀತು' ಎಂದು ನುಡಿದನು.

ಆದರೆ ಆತನ ಈ ಶಾಂತಭಾವವು ಪ್ರಯೋಜನಕ್ಕೆ ಬರಲಿಲ್ಲ. ಜನಗಳು ಯುದ್ಧಕ್ಕಾಗಿ ಬಹಳ ತವಕಿಸುತ್ತಿದ್ದರು. ಲಿಂಕನನಿಗಾದರೋ, ಜನ

ಮನದಲ್ಲಿ ಅಸಮಾಧಾನವನ್ನು ಹೆಚ್ಚಿಸಿ, ರಕ್ತ ಪ್ರವಾಹವನ್ನು ಹರಿಸಿ, ತನ್ಮೂಲಕ ಸ್ಥಾಪಿಸುವುದಾದರೆ ಅದೆಂತಹ ಶಾಂತತೆ ಎಂಬ ಭಾವನೆಯಿದ್ದು ದರಿಂದ ಆತನು ಸಮಾಧಾನದಿಂದಲೇ-ಚೆನ್ನಾಗಿ ಯೋಚಿಸಿಯೇ ಯಾವ ಕಾರ್ಯವನ್ನಾದರೂ ಮಾಡುತ್ತಿದ್ದನಲ್ಲದೆ ದುಡುಕುತ್ತಿರಲಿಲ್ಲ. ಆತನು ದುಡುಕದೆ-ಸಮಾಧಾನವನ್ನು ವಹಿಸಿ ನಡೆಯಲು ಎಷ್ಟು ಅಪೇಕ್ಷಿಸಿದ್ದರೂ, ಬಲವಂತವಾಗಿ ಆತನನ್ನು ಯುದ್ಧರಂಗಕ್ಕೆಳೆವ ಪ್ರಯತ್ನಗಳು ಶತ್ರುಪಕ್ಷದವರಿಂದ ನಡೆದುವು. ಅವರು ಸಮ್‌ಟರ್ ಎಂಬೊಂದು ದುರ್ಗವನ್ನಾಕ್ರಮಿಸಿದರು. ಈ ಯುದ್ಧ ನಡೆವಾಗ ಅವರು ಅಮೆರಿಕದ ಬಾವುಟಕ್ಕೂ ಗುರಿಯಿಟ್ಟು ಗುಂಡು ಹೊಡೆದರು. ಬಾವುಟವು ನೆಲಕ್ಕುರುಳಿತು. ರಾಷ್ಟ್ರಕ್ಕೆ ಮಹಾ ಅಪಮಾನಕರವಾದ ಕೃತ್ಯವೆಂದರೆ, ಅವರ ಬಾವುಟವನ್ನು ಅಪಮಾನಗೊಳಿಸುವುದೇ ಅಲ್ಲವೆ? ಈ ಸಂಗತಿಯು ಎಲ್ಲೆಲ್ಲೂ ಹರಡಿತು. ಉತ್ತರದವರು ಇನ್ನು ತಡೆಯಲಾಗದು ಎಂದುಕೊಂಡರು.

ಆದರೆ, ಏನು ಮಾಡಲು ಸಾಧ್ಯ! ದಕ್ಷಿಣದವರು ಯುದ್ಧವಿದ್ಯೆಯಲ್ಲಿ ಚೆನ್ನಾಗಿ ಪಳಗಿದವರು. ಅವರಲ್ಲಿ ದಕ್ಷರಾದ ಯುದ್ಧವಿಶಾರದರು ಜನರಲ್ ಲೀ, ಮತ್ತು ಜಫರ್‌ಸನ್ ಡೇವಿಸ್ ಎಂಬವರಿದ್ದರು. ಇವರಲ್ಲಿ ಎರಡನೆಯಾತನು ದಕ್ಷಿಣದ ಸಂಸ್ಥಾನಗಳಿಗೆ ಪ್ರೆಸಿಡೆಂಟನೂ ಆಗಿದ್ದನು. ಉತ್ತರದವರಲ್ಲಿ ದಕ್ಷಿಣ ಪ್ರಾಂತಗಳಿಗಿಂತಲೂ ಜನಸಂಖ್ಯೆಯು ವಿಶೇಷವಾಗಿದ್ದರೂ, ಅವರಲ್ಲಿ ಯುದ್ಧವೆಂದರೇನೆಂದು ಅರಿಯದವರೇ ಹೆಚ್ಚು ಮಂದಿಯಿದ್ದರು. ಲಿಂಕನನು ಪ್ರತಿಯೊಂದು ವಿಚಾರವನ್ನೂ ಅಸ್ತಿಭಾರದಿಂದ ಪ್ರಾರಂಭಿಸಬೇಕಾಗಿದ್ದಿತು. ಜನಮನದಲ್ಲಿ ದೇಶಪ್ರೇಮವನ್ನು ತುಂಬಿ, ಅದರ ಮೂಲಕವಾಗಿ ಆತನು ಸೈನ್ಯವನ್ನು ಕಟ್ಟಿ, ಶತ್ರುವನ್ನು ಹಣಿದು, ದೇಶದಲ್ಲಿ ಐಕಮತ್ಯವನ್ನೂ ಸ್ವಾತಂತ್ರ್ಯವನ್ನೂ ಕಾಪಾಡಬೇಕಾಗಿದ್ದಿತು. ಇದಕ್ಕಾಗಿ ಆತನು ಬಹು ಶ್ರಮಪಟ್ಟನು.

ಕೊನೆಗೆ-ನ್ಯಾಯಮಾರ್ಗವನ್ನತಿಕ್ರಮಿಸಿ ದಂಗೆಯೆದ್ದು ರಾಷ್ಟ್ರಘಾತಕ ಕಾರ್ಯದಲ್ಲಿ ತೊಡಗಿದ್ದ ಜನರನ್ನು ಅಡಗಿಸುವುದಕ್ಕಾಗಿ ಎಪ್ಪ

ತ್ತೈದು ಸಹಸ್ರ ಜನಗಳ ಒಂದು ಸೈನ್ಯವನ್ನು ಸಿದ್ಧಗೊಳಿಸಬೇಕಾದುದು
ಅತ್ಯಾವಶ್ಯಕವೆಂದು ತೋರಿತು. ಆ ಬಗ್ಗೆ ಲಿಂಕನನು ಒಂದು ಇಸ್ತಿ
ಹಾರನ್ನು ಹೊರಡಿಸಿದನು. ಜೂನ್ ತಿಂಗಳ ವೇಳೆಗೆ ೩೦.೦೦೦ ಜನರ
ಒಂದು ದಂಡು ಸಿದ್ಧವಾಯಿತು. ಸಮ್ಟರ್ ದುರ್ಗದಲ್ಲಿ ಸಂಭವಿಸಿದ
ಪರಾಜಯವು ಸಂಯುಕ್ತ ಸಂಸ್ಥಾನದ ರಾಜ್ಯಕ್ರಮವನ್ನೇ ಹಾಳುಮಾ
ಡಲು ಯೋಚಿಸಿದ್ದ ದಕ್ಷಿಣದವರನ್ನು ಅಡಗಿಸಬೇಕೆಂಬ ವಿಷಯದಲ್ಲಿ
ಉತ್ತರದವರನ್ನು ಹುರಿದುಂಬಿಸಿತು. ಮೊದಮೊದಲು ಸಂದೇಹಿಸುತ್ತಿ
ದ್ದವರು, ಲಿಂಕನನ ನಿಶ್ಚಯಾಭಿಪ್ರಾಯವನ್ನೂ ಉತ್ತರ ದಕ್ಷಿಣ ಭಾಗ
ಗಳೆರಡನ್ನೂ ಒಂದುಗೂಡಿಸಿ ಶಾಂತಿ ಸ್ಥಾಪನೆ ಮಾಡಬೇಕೆಂದಿದ್ದ ಆತನ
ಇಷ್ಟದಂತೆಯೇ ನಡೆಯಲು ಸಿದ್ಧವಾದರು.

ದೇಶಾಭಿಮಾನದಿಂದ ಪ್ರೇರಿತರಾಗಿ ಮುಂದೆ ಬಂದ ಆ ಸೈನ್ಯವನ್ನು
ಶತ್ರುಸೇನೆಯ ಮೇಲೆ ನಡೆಯಿಸಬಲ್ಲ ವೀರಮಣಿ ಯಾರೆಂದು ಲಿಂಕನನು
ಚಿಂತಿಸಿದನು. ಜನರಲ್ ವಿನ್‌ಫೀಲ್ಡ್ ಸ್ಕಾಟ್ ಎಂಬಾತನು ಉತ್ತಮ
ವರ್ಗದ ಯುದ್ಧವೀರನೇ ಆದರೂ, ಆತನಿಗೆ ಎಪ್ಪತ್ತಕ್ಕೆ ಮೇಲ್ಪಟ್ಟು
ವಯಸ್ಸಾಗಿ ಬಿಟ್ಟಿದ್ದುದರಿಂದ, ಲಿಂಕನನು, ಮಧ್ಯಪ್ರಾಯದ ತೇಜಸ್ವೀ
ರಾಬರ್ಟ್ ಇ ಲೀ ಎಂಬಾತನನ್ನು ಸೈನ್ಯಾಧಿಪತಿಯನ್ನಾಗಿ ಚುನಾಯಿಸಿ
ದನು. ಆದರೆ, ಮುಂದೆ ಕೆಲವು ದಿನಗಳಲ್ಲೇ ವರ್ಜೀನಿಯಾ ಪ್ರಾಂತವು
ದಕ್ಷಿಣದ ಕಡೆ ಸೇರಿಬಿಟ್ಟುದರಿಂದಲೂ, ಲೀಯ ಜನ್ಮಸ್ಥಾನವು ವರ್ಜೀನಿ
ಯಾವೇ ಆದುದರಿಂದಲೂ ಲೀಯು ಒಡನೆ ತನ್ನ ಉದ್ಯೋಗವನ್ನು ಬಿಟ್ಟು
ಬಿಟ್ಟನು. ಒಡನೆ ಆತನಿಗೆ ದಕ್ಷಿಣದವರು ಸರ್ವ ಸೇನಾಧಿಪತ್ಯವನ್ನು ವಹಿಸಿ
ದರು. ದಕ್ಷಿಣ ಮತ್ತು ಉತ್ತರ ಪ್ರಾಂತದವರಿಗೆ ಯುದ್ಧವು ಗೊತ್ತಾಗಿ
ಇಲ್ಲಿಂದ ಪ್ರಾರಂಭವಾಯಿತು. ಉತ್ತರದಲ್ಲಿ ೨,೧೮,೧೧,೪೨೨ ಮಂದಿ
ಬಿಳಿಯವರು ಮತ್ತು ೩,೪೨,೨೧೨ ಗುಲಾಮರು; ದಕ್ಷಿಣದಲ್ಲಿ ೫೧,೧೫,
೭೯೦ ಮಂದಿ ಬಿಳಿಯವರು, ೩೫,೦೮,೧೩೧ ಮಂದಿ ಗುಲಾಮರು, ಹೀಗೆ
ಬಹುತ್ವ ಸಂಖ್ಯೆಯ ಜನಬಲವನ್ನುಂಟಾಗಿದ್ದ ಉತ್ತರದವರೇ ಗೆಲ್ಲಬಹು
ದೆಂದು ಎಲ್ಲರಿಗೂ ನಂಬಿಕೆಯಿತ್ತು. ಆದರೆ, ದಕ್ಷಿಣ ಪ್ರಾಂತದ ಸೈನ್ಯ

ದಲ್ಲಿ ಯುದ್ಧಕಾರ್ಯಗಳಲ್ಲಿ ವಿಶೇಷವಾಗಿ ನುರಿತು ಅನುಭವಶಾಲಿಗಳಾಗಿದ್ದ ಹಲವುಮಂದಿ ಅಧಿಕಾರಿಗಳು ಇದ್ದು ದಕ್ಷತೆಯಿಂದ ನಡೆಯಿಸುತ್ತಿದ್ದರು. ಇದರಿಂದ ಪ್ರಾರಂಭದ ಕೆಲವು ದಿನಗಳವರೆಗೆ ಉತ್ತರ ಭಾಗದವರು, ಅವರನ್ನು ಎದುರಿಸಿ ಬದುಕಬಹುದೇ ಎಂದು ಸಂದೇಹಿಸುವಂತಿದ್ದಿತು. ಅಲ್ಲದೆ, ಹೊರ ದೇಶದವರ ಅಭಿಪ್ರಾಯವಾದರೂ, ಉತ್ತರ ಪ್ರಾಂತದವರ ವಿಷಯದಲ್ಲಿ ಚೆನ್ನಾಗಿರಲಿಲ್ಲ. ಲಿಂಕನನ ಕಾರ್ಯಕ್ರಮಗಳಿಂದ, ಉತ್ತರ ಭಾಗದ ೨೪ ಸಂಸ್ಥಾನಗಳಲ್ಲಿ ಬೆಳೆದ ಹತ್ತಿಯು ಮ್ಯಾಂಚೆಸ್ಟರು ಮತ್ತು ಲ್ಯಾಂಕಾಷೈರುಗಳಿಗೆ ಹೋಗದಂತೆ ತಡೆಬಿದ್ದುದರಿಂದ ಇಂಗ್ಲೆಂಡಿನವರು ಸ್ವಾಭಾವಿಕವಾಗಿಯೇ, ಲಿಂಕನ್‌ನನ್ನೂ ಉತ್ತರ ಭಾಗದವರ ಉದ್ಧಟತನವನ್ನೂ ದೂಷಿಸಿ ದ್ವೇಷಿಸಲಾರಂಭಿಸಿದರು. ಜೂಲೈ ೨೧ನೆಯ ದಿನ ಬುಲ್ ರನ್ ಎಂಬಲ್ಲಿ ಭಯಂಕರ ಯುದ್ಧ ನಡೆಯಿತು. ಮುಂದೆ ಆಗಾಗ್ಗೆ ಅಲ್ಲಲ್ಲಿ ಯುದ್ಧ ನಡೆಯುತ್ತಲೇ ಇದ್ದಿತು. ಯುದ್ಧವು ಹೆಚ್ಚೆಂದರೆ ಎರಡು ಮೂರು ತಿಂಗಳ ಕಾಲದಲ್ಲಿ ಮುಗಿಯಬಹುದೆಂದು ಲಿಂಕನನ ಪಕ್ಷದವರು ಭಾವಿಸಿದ್ದರು. ಆದರೆ ಅದು ಒಂದು ವರ್ಷಕಾಲ ಎಳೆಯಿತು. ಸೈನ್ಯಾಧಿಪತಿಯಾಗಿದ್ದ ಮ್ಯಾಕ್ಲೆಲ್ಲನ್ನನು ದಂಡು ಬೇಕು-ದಂಡು ಬೇಕು ಎಂದು ಮೇಲೆಮೇಲೆ ಕೇಳುತ್ತಲೇ ಇದ್ದನು. ಲಿಂಕನನು ಈ ವೇಳೆಯಲ್ಲಿ ನೀಗ್ರೋಗಳನ್ನು ಸೈನ್ಯದಲ್ಲಿ ಸೇರಿಸಿಕೊಳ್ಳಬಹುದೆಂದು ಆಜ್ಞಾಪಿಸಿದನು. ಇದನ್ನು ಕಂಡು, ದಕ್ಷಿಣದವರು ಮತ್ತೂ ರೇಗಿಬಿದ್ದರು.-'ಏನು ಬಿಳಿಯವರನ್ನು ಕೊಲ್ಲುವುದಕ್ಕೆ ನೀಗ್ರೋಗಳನ್ನು ಸೈನಿಕರನ್ನಾಗಿಸುವುದೇ ?' ಎಂದು ಅವರು ಆಕ್ಷೇಪಿಸಿದರು. ಆದರೆ ಅದರಿಂದ ಏನೂ ಪ್ರಯೋಜನವಾಗಲಿಲ್ಲ. ಲಿಂಕನ್ನನ ಆಜ್ಞೆಯಿಂದ ೧,೩೦,೦೦೦ ಮಂದಿ ನೀಗ್ರೋಗಳು ಸೈನ್ಯಗಳಲ್ಲಿ ಸೇರಿಸಲ್ಪಟ್ಟರು. ಪ್ರಾರಂಭದಲ್ಲಿ ಅವರಿಗೆ ಬಿಳಿಯವರಿಗಿಂತಲೂ ಕಡಮೆ ಸಂಬಳ ಕೊಡುತ್ತಿದ್ದರು. ಆದರೆ ೧೮೬೪ರ ವೇಳೆಗೆ ಅವರಿಗೂ ಬಿಳಿಯ ಜನಗಳಂತೆಯೇ ಸಮಾನ ದರ್ಜೆಯಲ್ಲಿ ಸಂಬಳವನ್ನು ಕೊಡುವಂತೆ ಏರ್ಪಾಟು ಮಾಡಿದನು.

ಒಂದೇ ಜನಾಂಗಕ್ಕೆ ಸೇರಿದ ಎರಡು ಪಕ್ಷಗಳವರಲ್ಲಿ ಪರಸ್ಪರ ವಿರೋಧಭಾವ ಬೆಳೆದು ಬಂದು ಪ್ರಾರಂಭವಾದ ಈ ಯುದ್ಧವು ೧೮೬೪

ನೆಯ ಸಂವತ್ಸರದವರೆಗೂ ನಡೆಯುತ್ತಲೇ ಇದ್ದಿತು. ಒಂದು ಬಾರಿ ಉತ್ತರದವರು ಜಯಹೊಂದುವರು. ಮತ್ತೊಂದು ಬಾರಿ ದಕ್ಷಿಣದವರು ಶತ್ರುಗಳ ಒಂದು ಕೋಟೆಯನ್ನೋ ಅಥವ ಪಟ್ಟಣವನ್ನೋ ಆಕ್ರಮಿಸಿ ವಿಜೃಂಭಿಸುವರು. ಆದರೆ ಯಾವ ಒಂದು ಪಕ್ಷವನ್ನು ನಿಶ್ಶೇಷವಾಗಿ ಅಡಗಿಸಲು ಅವರಿಬ್ಬರಲ್ಲಿ ಯಾರೂ ಶಕ್ತರಾಗಲಿಲ್ಲ. ಕೊನೆಗೆ ಆ ಸಂವತ್ಸರದ ಮಾರ್ಚಿ ತಿಂಗಳ ಸುಮಾರಿಗೆ ಯುದ್ಧವು ಸಮಾಪ್ತವಾಗುತ್ತಾ ಬಂದಿತು. ಆದರೆ ಗುಲಾಮರ ವ್ಯಾಪಾರವನ್ನು ನಿಲ್ಲಿಸುವ ವಿಷಯದಲ್ಲಿ ಬದ್ಧಕಂಕಣನಾಗಿದ್ದ ಲಿಂಕನ್ ಮಹಾಶಯನು ಆಂಟಿಯೇಟಮ್ ಎಂಬಲ್ಲಿ ಜಯವಾದ ಸಂದರ್ಭದಲ್ಲೇ (ಎಂದರೆ ಸೆಪ್ಟಂಬರು ೨೨. ೧೮೬೨) ಒಂದು ಪ್ರಸಿದ್ಧ ಪತ್ರಿಕೆಯನ್ನು ಹೊರಡಿಸಿದನು. ಅದು ೧೮೬೩ನೆಯ ಜನವರಿ ೧ನೇ ದಿನದಿಂದ ಆಚರಣೆಗೆ ಬರಬೇಕಾಗಿದ್ದಿತು. ಅದರಲ್ಲಿ-'ಈ ದಿನದಿಂದ ಮುಂದೆ ಸಂಯುಕ್ತ ಸಂಸ್ಥಾನಗಳಲ್ಲಿ ವಾಸಿಸುವ ಪ್ರತಿಯೊಬ್ಬನೂ ಸ್ವತಂತ್ರನಾಗಿರುವನು' ಎಂದು ಪ್ರಸಿದ್ಧಪಡಿಸಿದನು.

ಆದರೆ ಈ ಪ್ರಸಿದ್ಧ ಪತ್ರಿಕೆಯು ಜನಗಳಿಗೆ ಅಷ್ಟು ಪ್ರಿಯಕರವಾಗಲಿಲ್ಲ. ಯುದ್ಧವು ಪೂರ್ವದಂತೆಯೇ ಎರಡು ವರ್ಷಕಾಲ ನಡೆಯಿತು. ೧೮೬೫ನೆಯ ಸಂವತ್ಸರದ ಜನವರಿ ೩೧ನೆಯ ದಿನ ನೆರೆದ ರಾಷ್ಟ್ರಮಹಾಸಭೆಯಲ್ಲಿ, ಸಂಯುಕ್ತ ಸಂಸ್ಥಾನದಲ್ಲಿ ಗುಲಾಮರ ವ್ಯಾಪಾರವನ್ನು ರದ್ದುಪಡಿಸುವ ಮಸೂದೆಯು ಬಂದಿತು. ಸಭೆಯಲ್ಲಿ ನೆರೆದವರೆಲ್ಲರೂ, ಅತ್ಯಂತ ಉತ್ಸುಕರಾಗಿ ಏನು ನಿರ್ಣಯವಾಗಲಿರುವುದೋ ಎಂದು ಕಾದು ಕುಳಿತಿದ್ದರು. ಸಭೆಯಲ್ಲಿ ಠರಾವನ್ನು ಓಟಿಗಾಗಿ ಇಡಲು, ೧೧೯ ಓಟುಗಳು ಗುಲಾಮ ವ್ಯಾಪಾರವನ್ನು ಅಂತ್ಯಗೊಳಿಸುವ ಬಗ್ಗೆ, ಕೇವಲ ೫೬ ಓಟುಗಳು ಮಾತ್ರ ಅದಕ್ಕೆ ವಿರೋಧವಾಗಿಯೂ ಬಂದು ಠರಾವು ಮಂಜೂರಾಯಿತು. ಸಭಾಭವನವು ಜಯಜಯಕಾರದಿಂದ ತುಂಬಿಹೋಯಿತು. ಕೋಲಾಹಲವು ಮಿತಿಮೀರಿತು. ಪುರುಷರು ಸಂತೋಷದ ಆಧಿಕ್ಯದಿಂದ ತಮ್ಮ ಟೋಪಿಗಳನ್ನೆತ್ತಿ ಕುಣಿದಾಡಿದರು. ಸ್ತ್ರೀಯರು ಪಸನ್ಮುಖಿಗಳಾಗಿ-ಪರಮ ಸಂತೋಷದಿಂದ ಈ ಅಭೂತಪೂರ್ವ ನಿರ್ಣಯವು ಮುಂದೆ ಯಾವ

ಬಗೆಯಿಂದ ದೇಶಹಿತ ಸಾಧಕವಾಗಿ ಪರಿಣಮಿಸಬಹುದೆಂದು ಸಂಭಾಷಿಸಿಕೊಳ್ಳುತ್ತಿದ್ದರು ಇಂತು ಅಮೇರಿಕಾ ಖಂಡದ ಸಂಯುಕ್ತ ಸಂಸ್ಥಾನಗಳಲ್ಲಿ ಆಚರಣೆಯಲ್ಲಿ ಬಂದಿದ್ದ ಹೇಯವಾದ ದಾಸ್ಯವು ನಿವಾರಣೆ ಹೊಂದಿ ಮನುಷ್ಯರು-ಭಗವದ್ದೃಷ್ಟಿಯಲ್ಲಿ ಹೇಗೋ ಮಾನವ ದೃಷ್ಟಿಯಲ್ಲೂ ಹಾಗೆಯೇ, ಸಮಾನರು-ಸ್ವತಂತ್ರರು ಎಂಬ ಕಾನೂನು ಆಚರಣೆಯಲ್ಲಿ ಬಂದಿತು.



## ಅಧ್ಯಾಯ ೭. ‘ಕೊಲೆ’

೧೮೬೪ನೆಯ ನವಂಬರಿನಲ್ಲಿ ಮತ್ತೊಂದುವೇಳೆ ಪ್ರೆಸಿಡೆಂಟನ ಚುನಾವಣೆ ನಡೆಯಿತು. ಆಗಲೂ ಲಿಂಕನನಿಗೇ ೨೩೩ರಲ್ಲಿ ೨೧೨ ಓಟುಗಳೂ ಅವನ ಪ್ರತಿಕಕ್ಷಿಗೆ ಕೇವಲ ೨೧ ಓಟುಗಳೂ ಮಾತ್ರ ಬಂದುವು. ಅಬ್ರಹಾಮ್ ಲಿಂಕನನೇ ಸರ್ವಾನುಮತದಿಂದ ಪುನಃ ಆ ಮಹತ್ವದ ಸ್ಥಾನದಲ್ಲಿ ಅಧ್ಯಕ್ಷನಾಗಿ ಕುಳಿತನು (ಮಾರ್ಚ್ ೪. ೧೮೬೫).

ಲಿಂಕನನು ಆಗಾಗ್ಗೆ ತನ್ನ ಸೈನಿಕರನ್ನು ಕುರಿತು ಉಪನ್ಯಾಸ ರೂಪದಲ್ಲಿ ನಾಲ್ಕು ಬುದ್ಧಿಮಾತುಗಳನ್ನು ಹೇಳುತ್ತಿದ್ದುದುಂಟು. ಒಂದು ಸಂದರ್ಭದಲ್ಲಿ ಆತನು ಹೇಳಿದ ಮಾತುಗಳು, ಎಷ್ಟು ಉದಾರವಾದುವೂ ಉತ್ತೇಜಕವಾದುವೂ ಎಂಬುದನ್ನು ತಿಳಿಸುವುದಕ್ಕಾಗಿ ಈ ಬಳಿ ಕೊಡಲಿಚ್ಛಿಸುತ್ತೇನೆ.—‘ನಾನು ಈಗ ಹಂಗಾಮಿಯಾಗಿ ಈ ವೈಟ್‌ಹೌಸ್ (White House-ಪ್ರೆಸಿಡೆಂಟನ ವಾಸಗೃಹ)ನ್ನು ಸ್ವಾಧೀನಗೊಂಡಿದ್ದೇನೆ. ನನ್ನ ತಂದೆಯ ಮಗುವು (ನಾನು) ಈ ಮಹತ್ವದ ಸ್ಥಾನಕ್ಕೆ ಬಂದಂತೆಯೇ ನಿಮ್ಮ ಮಕ್ಕಳಲ್ಲಿ ಯಾವನಾದರೂ ಬರಲಿಕ್ಕೆ ಸಾಧ್ಯವುಂಟೆಂಬುದನ್ನು ಪ್ರದರ್ಶಿಸಲು, ನಾನು ಜೀವಿತ ಸಾಕ್ಷ್ಯವಾಗಿದ್ದೇನೆ. ನಾವು ಈಗ ಅನುಭವಿಸುತ್ತಿರುವ ಈ ಸ್ವತಂತ್ರ ಸರಕಾರದ ಆಡಳಿತದಲ್ಲಿ, ನಿಮ್ಮಲ್ಲಿ ಪ್ರತಿಯೊಬ್ಬನೂ ತನ್ನ ಪರಿಶ್ರಮ, ಚಾತುರ್ಯ, ಬುದ್ಧಿವಂತಿಕೆ ಮುಂತಾದುವುಗಳಿಗೆ ತಕ್ಕಂತಹ ಪ್ರೋತ್ಸಾಹಗಳನ್ನು ಹೊಂದಿ, ಜೀವನ ಸಂಗ್ರಾಮದಲ್ಲಿ

ಜಯು ಸಂಪಾದನೆ ಮಾಡಲು ಅವಕಾಶವುಂಟು. ಇದರ ಲಾಭವು ಪ್ರತಿಯೊಬ್ಬನ ಜನ್ಮ ಸ್ವಾತಂತ್ರ್ಯವಾಗಿದೆ. ಈ ಸೌಲಭ್ಯಾಭರಣಕ್ಕಾಗಿ ಹಣಗಾಡುವುದು ಜನಾಂಗಕ್ಕೆ ಒಂದು ಭೂಷಣಪ್ರದ ವಿಚಾರವಾಗಿದೆ' ಎಂದು ಹೇಳಿದನು.

ಯುದ್ಧವು ಮುಂದರಿಸಿ, ಕೊನೆಗೆ ದಕ್ಷಿಣ ಭಾಗದವರ ಸರ್ವ ಸೈನ್ಯಾಧಿಪತಿಯಾದ ಲೀ ಎಂಬಾತನು ಉತ್ತರದವರ ಸೈನ್ಯಾಧಿಪತಿಯಾದ ಜನರಲ್ ಗ್ರಾಂಟ್ ಎಂಬಾತನಿಗೆ ಸೋತು ಶರಣಾಗತನಾದನು. ಅಲ್ಲಿಗೆ ಯುದ್ಧವು ಸಮಾಪ್ತವಾದಂತಾಯಿತು. ಪ್ರೆಸಿಡೆಂಟ್ ಲಿಂಕನ್ನನು, ಬಹು ಸಂತೋಷದಿಂದ ಸಂಧಿಯ ಷರತ್ತುಗಳನ್ನು ಒರೆಯಲು ಕಳಿಸಿದನು. ಅತಿಶಯ ಉದಾರಿಯಾದ ಆತನ ಮನಸ್ಸಿನಲ್ಲಿ ದಕ್ಷಿಣದವರು ತಮಗೆ ಸೋತರೆಂಬುದಕ್ಕಾಗಿ ಮಹೋತ್ಸವಗಳನ್ನು ನಡೆಯಿಸಿ, ಅಥವ ಅವರನ್ನು ಯಾವುದಾದರೊಂದು ಬಗೆಯಲ್ಲಿ ಅವಮಾನ ಗೊಳಿಸಬೇಕೆಂಬುದಿರಲಿಲ್ಲ.—'ನಾನು ಈ ಸೈನಿಕರಲ್ಲಿ ಯಾರನ್ನಾದರೂ ಗಲ್ಲಿಗೇರಿಸುವ ಅಥವ ಕೊಲ್ಲಿಸುವ ವಿಚಾರದಲ್ಲಿ ಯಾವ ರೀತಿಯಿಂದಲೂ ಭಾಗ ತೆಗೆದುಕೊಳ್ಳಲಾರೆನು. ಈಗಾಗಲೇ ವಿಶೇಷ ನರಘಾತಕ ಕಾರ್ಯವು ನಡೆದಿದೆ. ಇನ್ನು ಮುಂದಾದರೂ ನಾವು ಪರಸ್ಪರ ಸಹಾನುಭೂತಿ ಮತ್ತು ಐಕಮತ್ಯಗಳಿಂದ ನಡೆಯಬೇಕಾದುದು ಅತ್ಯಗತ್ಯ' ಎಂದು ಹೇಳಿದನು.

ಮಹಾಮತಿ ಲಿಂಕನನು ಇತ್ತ ತನ್ನ ಜನಾಂಗದವರ ಸುರಕ್ಷಣೆಗಾಗಿ, ಮೇಲ್ಕಂಡಂತೆ-ಯುದ್ಧದಲ್ಲಿ ಸೆರೆಯಾದವರನ್ನೂ ಶಿಕ್ಷಿಸಲಾಗದೆಂದು ತನ್ನ ಮಂತ್ರಿಗಳಿಗೆ ಆಜ್ಞೆಮಾಡುತ್ತಿದ್ದ ವೇಳೆಯಲ್ಲೇ ಅತ್ತ ಜಾರ್ಜ್ ವಿಲ್ಕ್ಸ್ ಬೂತ್ ಎಂಬೊಬ್ಬ ನೀಚನು ಆತನನ್ನೇ ವಧಿಸಲು ಸನ್ನಾಹ ಮಾಡುತ್ತಿದ್ದನು. ೧೮೬೫ನೆಯ ಏಪ್ರಿಲ್ ೧೪ನೆಯ ದಿನ ಕ್ರೈಸ್ತರಿಗೆ ಬಹು ವಿಶೇಷವೆನ್ನಿಸುವ 'ಗುಡ್ ಫ್ರೈಡೆ' ಎಂಬೊಂದು ಸುದಿನ. ಯುದ್ಧವು ಮುಗಿದು ಸರ್ವತ್ರ ಶಾಂತತೆಯು ವ್ಯಾಪಿಸಿದ್ದ ಆ ಸುದಿನದಲ್ಲಿ, ಪ್ರೆಸಿಡೆಂಟ್ ಲಿಂಕನನು ಅತಿಶಯ ಅಪೂರ್ವವಾಗಿ 'ಫೋರ್ಡ್ಸ್ ಥಿಯೇಟರ್' ಎಂಬೊಂದು ನಾಟಕ ಮಂದಿರದಲ್ಲಿ 'ಅವರ್ ಅಮೆರಿಕನ್ ಕಜಿನ್' ಎಂಬ

ನಾಟಕವನ್ನು ನೋಡಲು ಇಷ್ಟಗೊಂಡು ತನ್ನ ಪತ್ನಿಯೊಂದಿಗೆ ಅಲ್ಲಿಗೆ ಹೋದನು.

ನಾಟಕ ಮಂದಿರದಲ್ಲಿದ್ದ ಸಕಲರೂ ಆತನನ್ನು ಅತಿಶಯ ಉತ್ಸುಕತೆಯಿಂದ ಎದುರುಗೊಂಡು, ಜಯಜಯಕಾರಗಳಿಂದ ಸ್ವಾಗತೀಕರಿಸಿದರು. ಆತನು ಹಸನ್ಮುಖಿಯಾಗಿ ಅವುಗಳನ್ನು ಸ್ವೀಕರಿಸಿ ತನಗಾಗಿ ಏರ್ಪಟ್ಟಿದ್ದದೊಂದು ಭವ್ಯಾಸನದಲ್ಲಿ ಕುಳಿತನು. ಮೇಲೆ ಹೇಳಿದಂತೆ ಆತನ ವಧೆಗಾಗಿ ಗುಟ್ಟಾಗಿ ಸನ್ನಾಹಗಳನ್ನು ಮಾಡುತ್ತಲೇ ಇದ್ದ ಬೂತನು, ಏನೂ ಸಂಶಯವುಂಟಾಗದಂತೆ ಪ್ರೆಸಿಡೆಂಟನ ಹಿಂದಿದ್ದ ಸ್ಥಾನಕ್ಕೆ ನಡೆದು, ಒಡನೆ ಹಿಂದಿನಿಂದ ಆತನ ಕುತ್ತಿಗೆಗೆ ಗುರಿಯಿಟ್ಟು ಗುಂಡು ಹೊಡೆದು, ಲಿಂಕನನ ಪ್ರಾಣವಾಯುವನ್ನು ಅಪಹರಿಸಿದನು. ಪಕ್ಕದಲ್ಲೇ ಇದ್ದ ಮೇಜರ್ ರತ್‌ಬೋನ್ ಎಂಬಾತನು, ಆ ಘಾತುಕನನ್ನು ಹಿಡಿಯಲು ಪ್ರಯತ್ನಿಸಿದನು. ಆದರೆ ಆ ನೀಚನು ತಾನು ತಪ್ಪಿಸಿಕೊಂಡು ಓಡುವ ಆತುರದಲ್ಲಿ ತನ್ನ ಕೈಯಲ್ಲಿದ್ದ ಚೂರಿಯನ್ನು ಹಿಂದು ಚುಚ್ಚಿ ಆತನಿಗೂ ವಿಶೇಷ ಗಾಯವನ್ನುಂಟುಮಾಡಿ ಯಾರಿಗೂ ಸಿಕ್ಕದೆ ಓಡಿಹೋದನು. 'ಅಕ್ಕಟಾ ಅವನು ಪ್ರೆಸಿಡೆಂಟನನ್ನು ವಧಿಸಿದನು' ಎಂದು ಎಲ್ಲರೂ ಅರಚಿಕೊಂಡರು. ಹೀಗೆ ಆ ದಿನ ರಾತ್ರಿ ಅವನೊಬ್ಬನು ಮಾತ್ರವಲ್ಲ, ಮಿಕ್ಕ ಮೂರು ನಾಲ್ಕು ಮಂದಿ ಘಾತುಕರು, ಪ್ರೆಸಿಡೆಂಟನಂತೆಯೇ ಆತನ ಸಹಾಯಕರಾಗಿ ಶಾಂತಿ ಸ್ಥಾಪನೆಗಾಗಿ ಪ್ರಯತ್ನಿಸುತ್ತಿದ್ದ ಸಿವರ್ಡ್, ಪೊವೆಲ್, ರತ್‌ಬೋನ್ ಮುಂತಾದ ಮೂವರನ್ನೂ ಕೊಲೆಮಾಡಿದರು.

## ಉಪಸಂಹಾರ.

ಪರೋಪಕಾರಿಯೂ ಸತ್ಪುರುಷನೂ ದೂರದರ್ಶಿಯೂ ದೀನಜನಬಾಂಧವನೂ ಆದ ಲಿಂಕನ್ ಮಹಾಶಯನ ಈ ಆಕಸ್ಮಿಕ ಮರಣಕ್ಕಾಗಿ, ಅಮೆರಿಕಾ ದೇಶೀಯರು ಮಾತ್ರವಲ್ಲ-ದೇಶ ದೇಶಾಂತರಗಳವರೂ ಮರುಗಿದರು. ಆತನ ಕುಟುಂಬಕ್ಕೆ ಸಹಾನುಭೂತಿ ತೋರಿಸಲಿಕ್ಕಾಗಿ ಅನೇಕ ಸ್ಥಳಗಳಲ್ಲಿ ಸಭೆಗಳು ನಡೆದು ಮೃತನ ಆತ್ಮಕ್ಕೆ ಶಾಂತಿಯನ್ನು ಕೋರಿ

ದುವು. ಪ್ರೆಸಿಡೆಂಟನನ್ನು ಕೊಲೆಮಾಡಿದ ಬೂತನು, ಪ್ರಾಣ ಭಯದಿಂದ ಓಡುವಾಗ ಗುಂಡಿನೇಟು ತಗುಲಿ ಸತ್ತನು. ಕಾಲಕ್ರಮದಲ್ಲಿ ಮಿಕ್ಕವರೆಲ್ಲರನ್ನೂ ಹಿಡಿದು ಗಲ್ಲಿಗೆ ಹಾಕಿದರು.

ಪ್ರೆಸಿಡೆಂಟ್ ಲಿಂಕನನ ಶವವನ್ನು ಸಕಲವಿಧ ಮರ್ಯಾದೆಗಳಿಂದಲೂ ವಾಷಿಂಗ್ಟನ್ ನಗರದಿಂದ ಆತನ ವಾಸಸ್ಥಳವಾಗಿದ್ದ ಸ್ಪ್ರಿಂಗ್ ಫೀಲ್ಡ್ ಪಟ್ಟಣಕ್ಕೆ ತಂದರು. ದಾರಿಯುದ್ದಕ್ಕೂ ಜನಗಳು ಲಕ್ಷಸಂಖ್ಯೆಯಿಂದ ನೆರೆದು ಆ ಮಹನೀಯನ ಮೃತದೇಹದಮೇಲೆ ಪುಷ್ಪವರ್ಷವನ್ನು ಸುರಿಸಿ, ಪರೋಪಕಾರಿಯಾದ ಆತನ ಮರಣಕ್ಕಾಗಿ ತಮ್ಮ ಆತ್ಮೀಯರು ಮೃತಪಟ್ಟರೋ ಎಂಬಂತೆ ರೋದಿಸಿದರು. ಜನಾಂಗದ ಹಿತಸಾಧನೆಗಾಗಿಯೇ ಶ್ರಮಿಸಿದ ಆತನ ಪವಿತ್ರದೇಹವು ಸ್ಪ್ರಿಂಗ್ ಫೀಲ್ಡ್ ಪಟ್ಟಣದ ಒಂದು ಪ್ರಶಸ್ತ ಸ್ಥಳದಲ್ಲಿ ಭೂಸ್ಥಾಪನೆ ಮಾಡಲ್ಪಟ್ಟಿತು. ಆತನ ಸಮಾಧಿ ಸ್ಥಳದಲ್ಲಿ ನಿಂತು, ಆತನ ಎರಡನೆಯ ಭಾಷಣವನ್ನು ಜನರು ಓದಿದರು. ಲಿಂಕನನ ಕಾರ್ಯಕ್ಕಾಗಿ, ಆತನ ಜೀವಿತ ಕಾಲದಲ್ಲಿ ದೂಷಿಸಿ ಅಪಹಾಸ್ಯ ಮಾಡಿದ್ದ ಇಂಗ್ಲೆಂಡಿನ 'ಪಂಚ್' ಎಂಬ ಪತ್ರಿಕೆಯು, ಈಗ ತನ್ನ ಆ ಅವಿವೇಕಕ್ಕಾಗಿ ಪಶ್ಚಾತ್ತಾಪಗೊಂಡು, ಆತನ ಮಹತ್ವವನ್ನು ಮುಕ್ತಕಂಠದಿಂದ ಹೊಗಳಿತು. ವಿಕ್ಟೋರಿಯಾ ಮಹಾರಾಣಿಯು ಆತನ ಆಕಸ್ಮಿಕ ಮೃತ್ಯುವಿಗಾಗಿ ವಿಶೇಷ ಪರಿತಾಪಗೊಂಡು—'ಒಬ್ಬ ವಿಧವೆಯು ಮತ್ತೊಬ್ಬ ವಿಧವೆಗೆ ಬರೆಯುತ್ತಿರುವುದಾಗಿ ಹೇಳಿ, ಲಿಂಕನನ ಪತ್ನಿಗೆ ಸಂತಾಪ ಸೂಚಕ ಪತ್ರವನ್ನು ಬರೆದಳು. ಲಿಂಕನನು, ತನ್ನ ದೇಶೋದ್ಧಾರಕ್ಕಾಗಿ ಅಹರ್ನಿಶಿ ಶ್ರಮಿಸಿ ಕೊನೆಗೆ ಇಂತು ಪ್ರಾಣವನ್ನೊಪ್ಪಿಸಿದನು. ಶಾಂತತಾವೃಕ್ಷಕ್ಕೆ ಬೀಜಸ್ವರೂಪನಾಗಿದ್ದ ಆತನ ಮರಣವಾಗದೆ, ಅದು ಮೊಳೆತು ವೃದ್ಧಿಯಾಗದೆಂಬುದು ಭಗವಚ್ಚಿತ್ತದಲ್ಲಿದ್ದಿರಬಹುದು. ಆತನ ಜೀವಿತ ಕಾಲದಲ್ಲಿ ದ್ವೇಷಿಸುತ್ತಿದ್ದ ಅನೇಕರು, ಆತನು ಮೃತನಾದ ತರುವಾಯ, ಆ ಮಹಾನುಭಾವನು ತಮಗಾಗಿ ಎಷ್ಟು ಮಟ್ಟಿಗೆ [illegible] ಪರೋಪಕಾರ ಮಾಡಿದನೆಂಬುದನ್ನು ಗ್ರಹಿಸಿ ಮರುಗಿದರು. [illegible] ಅಮೇರಿಕಾ ದೇಶವು ಐಶ್ವರ್ಯ ಅಧಿಕಾರ ನಾಗರಿಕತೆ ಮುಂತಾದವುಗಳಲ್ಲಿ ಜಗತ್ತಿನ

ಇತರ ರಾಷ್ಟ್ರಗಳಿಗಿಂತಲೂ ಉನ್ನತ ಸ್ಥಾನದಲ್ಲಿರುವುದಕ್ಕೆ ಈ ಮಹಾನುಭಾವನ ಅವಿಶ್ರಾಂತ ಪರಿಶ್ರಮವೇ ಕಾರಣವೆಂದರೆ ಅದರಲ್ಲಿ ಅತಿಶಯೋಕ್ತಿಯಿಲ್ಲ.

ನಮ್ಮ ಕಥಾನಾಯಕನಾದ ಅಬ್ರಹಾಮ್ ಲಿಂಕನನಂತೆ, ಕಡು ಬಡವರಾಗಿ ಜನ್ಮಿಸಿ, ಮಹತ್ಪದವಿಗೆ ಅಧಿನಾಯಕರಾಗಿ, ಪ್ರಜಾಸೇವೆಗಾಗಿಯೇ ತನ್ನ ತನುಮನ ಧನಗಳನ್ನರ್ಪಿಸಿದ ಮಹಾಪುರುಷರು ಲೋಕ ಚರಿತ್ರೆಯಲ್ಲಿ ಬಹು ಸ್ವಲ್ಪ ಮಂದಿ ದೊರೆಯುವರು. ಯಾವ ಆ ಮಹನೀಯನು ಅಂತಹ ಮಹೋನ್ನತ ಪದವಿಯಲ್ಲಿದ್ದಾಗಲೂ, ತನ್ನ ಹಿಂದಿನ ಬಡತನ ಸ್ಥಿತಿಯನ್ನೂ, ಸ್ವದೇಶದ ದರಿದ್ರರ-ಗುಲಾಮರ ಸ್ಥಿತಿಯನ್ನೂ, ಅವರ ಕಷ್ಟ ದುಃಖಗಳನ್ನೂ ಮರೆಯದೆ ತನ್ನ ಕೈಯಿಂದ ಸಾಧ್ಯವಿದ್ದಷ್ಟೂ ಪ್ರಯತ್ನಿಸಿ, ಸುಮಾರು ನಾಲ್ವತ್ತು ಲಕ್ಷ ಮಂದಿ ಮಾನವ ಪ್ರಾಣಿಗಳಿಗೆ, ಸ್ವಾತಂತ್ರ್ಯದಾನವನ್ನು ಮಾಡಿ ಯಶಶ್ಶರೀರವನ್ನು ಗಳಿಸಿದನೋ ಅತನ ಪವಿತ್ರ ಜೀವಿತವೂ-ಜೀವಿತ ಧ್ಯೇಯವೂ, ದೇಶಸೇವೆಗಾಗಿ ದುಡಿಯುವ ಸಕಲರಿಗೂ ಅತ್ಯುತ್ತಮ ಆದರ್ಶವಾಗಿರಬಲ್ಲುದು. ದೇಶಸೇವೆಯೇ ಈಶಸೇವೆ-ಜನ ಸೇವೆಯೇ ಜನಾರ್ದನನ ಸೇವೆ ಎಂಬ ಪವಿತ್ರೋದ್ದೇಶದಿಂದ ಪರೋಪಕಾರಕ್ಕಾಗಿ ತನುಮನ ಧನಗಳನ್ನು ವ್ಯಯಿಸಿ ಕೊನೆಗೆ ಶಾಂತಿ ಸ್ಥಾಪನೆಯ ಮಹತ್ಕಾರ್ಯಕ್ಕಾಗಿಯೇ, ತನ್ನ ಪ್ರಾಣವನ್ನೂ ಬಲಿದಾನವಾಗಿ ಸಮರ್ಪಿಸಿದ ಆ ಮಹನೀಯನ ಈ ಪವಿತ್ರ ಜೀವಿತವು ಸಕಲ ಭಾರತೀಯರಿಗೂ—ಮುಖ್ಯವಾಗಿ ಕರ್ನಾಟಕರಿಗೂ ಆದರ್ಶವಾಗಿದ್ದು, ಅವರಿಂದಲೂ ದೇಶಾಭಿವೃದ್ಧಿ ಸಾಧಕವಾದ ಮಹತ್ಕಾರ್ಯಗಳು ನಡೆಯಲು ಸಾಧಕವಾಗಲಿ.

ತಥಾಸ್ತು.



ಶ್ರೀರಾಮ ಸಹಾಯಂ.

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸ ಪುಸ್ತಕಾವಳಿ)



**ಮುನ್ನುಡಿ :—**

ಈ ಕಥಾನಾಯಕನಾದ ಬಭ್ರುವಾಹನನು ವೀರಾಗ್ರೇಸರನು. ಗಾಂಡೀವಧರ, ಕೋದಂಡ ದೀಕ್ಷಾಚಾರ್ಯ, ಮೂರು ಲೋಕದ ಗಂಡ, ಧನಂಜಯ ಎಂದು ಮುಂತಾಗಿ ಹೊಗಳಿಸಿಕೊಂಡು, ಮಹಾಭಾರತದ ಘೋರ ರಣಾಂಕಣದಲ್ಲಿ, ಭೀಷ್ಮದ್ರೋಣಾದಿ ವೀರಾದಿವೀರರನ್ನು ಜಯಿಸಿದ ಅರ್ಜುನನನ್ನು ಪ್ರತಿಜ್ಞಾಪೂರ್ವಕವಾಗಿ ಸಂಹರಿಸಿದ ಪ್ರಚಂಡ ವೀರನು-ಬಭ್ರುವಾಹನನು. ಬಭ್ರುವಾಹನನು, ಅರ್ಜುನನ ಉದರ ಸಂಭೂತನು. ಆದರೂ ಆತನು ತನ್ನ ತಂದೆಗೆ ತಾನೇ ಮೃತ್ಯುವಾಗಬೇಕಾಗಿ ಪರಿಣಮಿಸಿತು. ಕ್ಷಾತ್ರ ಧರ್ಮರಕ್ಷಣೆಗಾಗಿ, ತಂದೆ ಮಕ್ಕಳಿಗೆ ಭಯಂಕರ ಕದನವು ಕೈಗಟ್ಟಿತು. ಆ ಘೋರ ಯುದ್ಧದಲ್ಲಿ, ತಂದೆ ಮಕ್ಕಳು ಎದುರೆದುರಿಗೆ ನಿಂತು, ಒಬ್ಬರು ಮತ್ತೊಬ್ಬರ ಪ್ರಾಣಾಪಹರಣ ಮಾಡಲು ಸನ್ನದ್ಧರಾದರು. ಮಗನು ಪ್ರತಿಜ್ಞಾಪೂರ್ವಕ ತನ್ನ ತಂದೆಯ ತಲೆಯನ್ನು ನೆಲಕ್ಕುರುಳಿಸಿದನು. ಆದರೆ ಜಗತ್ತಿಗೇ ವಿಚಿತ್ರವಾದ ರೀತಿಯಿಂದ ಅರ್ಜುನನು ಪುನಃ ಜೀವಿತನಾದನು.

ಅರ್ಜುನನು ದುರಭಿಮಾನಿ. ಭೀಷ್ಮದ್ರೋಣಾದಿ ಧನುರ್ಧರಾಗ್ರೇಸರರನ್ನು ಭಾರತ ಯುದ್ಧದಲ್ಲಿ ಜಯಿಸಿದ ವೀರೋತ್ತಮನು ತಾನೇ ಎಂಬ ಅಹಂಕಾರವು ಅವನ ಮನಸ್ಸಿನಲ್ಲಿ ತುಂಬಿತ್ತು. ಅವನ ಈ ಅಹಂಕಾರವನ್ನು ಅಲ್ಲಲ್ಲಿಗೇ ಖಂಡಿಸುವುದಕ್ಕಾಗಿಯೇ, ಪಾಂಡವ ಪ್ರತಿಷ್ಠಾಪನಾಚಾರ್ಯನೆಂಬ ಬಿರುದಾಂಕಿತನಾದ ಶ್ರೀಕೃಷ್ಣಸ್ವಾಮಿಯು, ಅನೇಕ ಪರಿಸ್ಥಿತಿಗಳನ್ನೊದಗಿಸಿ ಅವನಿಗೆ ಬುದ್ಧಿಗಲಿಸಿದನು. ಅವನು ತನ್ನ ಮನಸ್ಸಿನಲ್ಲೆಣಿಸಿದ್ದಂತೆ, ಭೀಷ್ಮದ್ರೋಣಾದಿಗಳನ್ನು ಜಯಿಸಿದವನು ತಾನಲ್ಲ—ಶ್ರೀ ಕೃಷ್ಣಸ್ವಾಮಿಯ ಬೆಂಬಲವಿಲ್ಲದಿದ್ದರೆ, ಆ ಮಹತ್ಕಾರ್ಯವು ತನ್ನಿಂದ ಸಾಗುತ್ತಿರಲಿಲ್ಲ-ಎಂಬಂಶವನ್ನು ಅವನ ಮನಸ್ಸಿಗಂಟುವಂತೆ ತಿಳಿಸುವುದಕ್ಕಾಗಿ, ಆತನ ಕ್ಷೇಮಚಿಂತಕನಾದ ಶ್ರೀಕೃಷ್ಣಮೂರ್ತಿಯು ಅನೇಕ ಪರಿಸ್ಥಿತಿಗಳನ್ನೊದಗಿಸಿ, ಅರ್ಜುನನನ್ನು ಹಣ್ಣುಮಾಡಿದ ವಿಚಾರವು, ಅಶ್ವಮೇಧ ಪರ್ವದಲ್ಲಿ ವಿಸ್ತಾರವಾಗಿ ವರ್ಣಿಸಲ್ಪಟ್ಟಿದೆ. ಭಗ

ವಂತನು ತನ್ನ ಭಕ್ತರನ್ನು ಅನುಗ್ರಹಿಸಿದನೆಂಬುದು, ಅವರಿಗೆ ಕೋಟ್ಯಾಂತರ ಧನಲಾಭ, ಪತ್ನೀಪುತ್ರಾದಿ ಭೋಗ ಸಂಪತ್ತು, ಕಾರ್ಯ ಜಯ ಮುಂತಾದುವುಗಳನ್ನು ಪ್ರಸಾದಿಸುವುದರಿಂದ ವ್ಯಕ್ತವಾಗುವುದ ಕ್ಕಿಂತಲೂ, ಅವರ ಹೃದಯವನ್ನು ಆವರಿಸಿರುವ ತಮಸ್ಸನ್ನು ನಿವಾರಿಸಿ, ಅಲ್ಲಿ ಜ್ಞಾನಕಿರಣಗಳ ಪ್ರಕಾಶವನ್ನು ಉಂಟುಮಾಡುವುದರಿಂದಲೇ ಹೆಚ್ಚಾಗಿ ವ್ಯಕ್ತವಾಗುತ್ತಿದೆ—'ಯಸ್ಯಾನುಗ್ರಹ ಮಿಚ್ಛಾಮಿ, ತಸ್ಯವಿತ್ತಂ ಹರಾಮ್ಯಹಂ।' ಎಂಬುದು ಭಗವಾನ್ ಶ್ರೀಕೃಷ್ಣಸ್ವಾಮಿಯ ಸಂಕಲ್ಪವು. ಆದುದರಿಂದ ಭಗವತ್ಪರ ಚಿತ್ತವೃತ್ತಿಯುಳ್ಳವರು, ತಮಗೆ ಕಷ್ಟಬಂದ ಕಾಲದಲ್ಲಿ, ದೇವರು ತಮ್ಮ ಮೇಲೆ ನಿರ್ದಯನಾದನೆಂದು ಹತಾಶರಾಗ ಬಾರದು. ತಮ್ಮ ಯಾವುದೋ ಒಂದು ದೋಷ ನಿವಾರಣೆಗಾಗಿ-ತಮ್ಮ ಜನ್ಮಾಂತರಾರ್ಜಿತವಾದ ಯಾವುದೋ ಪಾಪ ಪರಿಹಾರಕವಾದ ಶಸ್ತ್ರಚಿಕಿತ್ಸೆ ಗಾಗಿ, ಭವರೋಗ ನಿವಾರಕನಾದ ಆ ಜಗದೇಕ ವೈದ್ಯನು ಆಗ ಪ್ರಾರಂಭ ಮಾಡಿದನೆಂದು ಸಂತೋಷಗೊಳ್ಳಬೇಕು-ತಮ್ಮ ಕಡೆಗೆ ಭಗವಂತನ ದೃಷ್ಟಿ ಬಿದ್ದಿತೆಂದು ತಿಳಿದು ಸಮಾಧಾನಗೊಳ್ಳಬೇಕು.

ಕವಿಸಾರ್ವಭೌಮ ಲಕ್ಷ್ಮೀಶ ವಿರಚಿತ ಜೈಮಿನಿ ಭಾರತ ಗ್ರಂಥರತ್ನ ದಲ್ಲಿ-ಅಜರಾಮರವಾದ ಆ ಕಾವ್ಯರತ್ನದಲ್ಲಿ, ಬಭ್ರುವಾಹನ ಧನಂಜಯರ ಯುದ್ಧವು ವಿಸ್ತಾರವಾಗಿ ವರ್ಣಿಸಲ್ಪಟ್ಟಿದೆ. ಪೂರ್ವಿಕ ಭಾರತ ವೀರರು, ಕಾಸು ವೀಸಗಳಿಗಾಗಿಯಲ್ಲ-ಪ್ರಾಣದಾಸೆಗಾಗಿಯಲ್ಲ, ಸ್ವಾಭಿಮಾನ ರಕ್ಷಣೆ ಗಾಗಿ ಪ್ರಾಣಾಂತ್ಯದವರೆಗೂ ಹೇಗೆ ಹೋರಾಡುತ್ತಿದ್ದರು, ಪ್ರಾಣವನ್ನು ತೃಣವಾಗೆಣಿಸಿ, ಮಾನ ರಕ್ಷಣೆಗಾಗಿ ಎಷ್ಟುಮಟ್ಟಿನ ಕಷ್ಟಸಹನ ಮಾಡು ತ್ತಿದ್ದರು, ಎಂಬುದನ್ನು ಈ ಚರಿತ್ರೆಯನ್ನು ಪಠಿಸಿ ತಿಳಿಯಬಹುದು.

ಕರ್ಣಾಟಕ ಭಾಷಾಭಿಮಾನಿಗಳು ಎಂದಿನಂತೆ ತಮ್ಮ ಪ್ರೋತ್ಸಾಹ ವನ್ನು ಮುಂದರಿಸುವುದಲ್ಲದೆ ತಮ್ಮ ಮಿತ್ರಬಾಂಧವರಲ್ಲೂ ಗ್ರಂಥಮಾಲೆಗೆ ಹೆಚ್ಚುಮಂದಿ ಗ್ರಾಹಕರನ್ನು ಒದಗಿಸಿಕೊಟ್ಟು ನಮ್ಮ ಕಾರ್ಯವು ನಿರ್ವಿ ಘ್ನವಾಗಿ ಮುಂದರಿಸುವಂತೆ ಸಹಕರಿಸಬೇಕಾಗಿ ಪ್ರಾರ್ಥಿಸುತ್ತೇವೆ.

ಬೆಂಗಳೂರು,
೧೨—೧—೧೯೩೧.

ಇತಿ ಸುಜನ ವಿಧೇಯ.
ಯಂ. ರಾಮರಾವ್.

ಶ್ರೀರಾಮ ಸಹಾಯಂ.

ಧೀರೋತ್ತಮ

# ಬಭ್ರುವಾಹನ

ಅಧ್ಯಾಯ ೧. 'ಭೂ ಪ್ರದಕ್ಷಿಣೆ.'

ಅನಾದಿ ಸುಪ್ರಸಿದ್ಧವಾದ ನಮ್ಮ ಮಾತೃಭೂಮಿ-ಭಾರತದೇಶವು, ವೀರರಿಗೆ ತೌರುಮನೆ, ಶೂರರಿಗೆ ಜನ್ಮಭೂಮಿ, ವಜ್ರಹೃದಯರಾದ ಧೀರೋತ್ತಮರಿಗೆ ನೆಲೆವೀಡು. ಪುರಾಣ ಕಥೆಗಳನ್ನು ಸ್ವಲ್ಪ ವಿಮರ್ಶಕ ದೃಷ್ಟಿಯಿಂದ ನೋಡುತ್ತಾಹೋದರೆ, ನಮ್ಮ ಪೂರ್ವಜರು ತಮ್ಮ ಜನ್ಮಸ್ಥಳದ ಮಾನ ಸಂರಕ್ಷಣೆಗಾಗಿ ಪ್ರಾಣವನ್ನು ತೃಣವೆಂದೆಣಿಸಿ ಹೇಗೆ ಹೋರಾಡುತ್ತಿದ್ದರು ಎಂಬುದನ್ನು ತಿಳಿಯಬಹುದು.

* 'ಪ್ರಾಣವನ್ನಾದರೂ ಪರಿತ್ಯಜಿಸಿ, ಮಾನವನ್ನು ರಕ್ಷಣೆ ಮಾಡಬೇಕು. ಏಕೆಂದರೆ ಪ್ರಾಣವು ಅನಿತ್ಯವಾದುದು. ಮಾನವಾದರೋ ಆಚಂದ್ರತಾರಕವಾಗಿ ಇರತಕ್ಕದು' ಎಂಬುದು ವೀರಾಗ್ರೇಸರನಾದ ಭೀಮಸೇನನ ಮತ. ಸ್ವಾಭಿಮಾನ ರಕ್ಷಣೆಗಾಗಿ ಹೋರಾಡುವುದಕ್ಕೆ ಮನಸ್ಸಿನಲ್ಲಿ ಸ್ವತಂತ್ರ ಭಾವನೆಯಿರಬೇಕು. ದಾಸ್ಯಮನೋಭಾವವಿದ್ದವರಿಗೆ ಸ್ವಾಭಿಮಾನ ರಕ್ಷಣೆಗೆ ಧೈರ್ಯವಿರುವುದಿಲ್ಲ. ಅಲ್ಲ-ಅವರಿಗೆ ಸ್ವಾಭಿಮಾನವೆಂಬುದೇ ಇರುವುದಿಲ್ಲವೆಂದರೂ ತಪ್ಪಲ್ಲ. ಅವರಿಗೆ ಸ್ವಂತ ಅಭಿಪ್ರಾಯಗಳಿರುವುದಿಲ್ಲ. ಮನಸ್ಸಿ

* ಪ್ರಾಣಾನಪಿ ಪರಿತ್ಯಜ್ಯ ಮಾನಮೇವಾಭಿ ರಕ್ಷತು ।
ಅನಿತ್ಯಮಧ್ರುವಂ ಪ್ರಾಣಂ ಮಾನಮಾಚಂದ್ರತಾರಕಃ ॥ ಭಾರತ 'ವನಪರ್ವ'

ನಲ್ಲಿ ಧೈರ್ಯವಿರುವುದಿಲ್ಲ. ತಮ್ಮ ಮನಸ್ಸಿಗೆ ಒಂದು ಸಂಗತಿಯು ಸತ್ಯ ವೆಂದು ತೋರಿದ್ದರೂ, ಅದನ್ನು ಸ್ಪಷ್ಟವಾಗಿ ಬಾಯಿಬಿಟ್ಟು ಹೇಳಲು ಅವರ ಎದೆಯು ನಡುಗುತ್ತಿರುವುದು. ಅವರು ಸದಾ, ಮೂಗುದಾರ ಹಿಡಿದು ಮತ್ತೊಬ್ಬರಿಂದ ನಡೆಯಿಸಲ್ಪಡುತ್ತಿರುವ-ಮೂಗುಪ್ರಾಣಿ ಎತ್ತಿ ನಂತೆ, ಬೇರೊಬ್ಬರ ಅಭಿಪ್ರಾಯಕ್ಕೆ ಬದ್ಧರಾಗಿಯೇ ತಮ್ಮ ಜೀವಿತವನ್ನು ಸಾಗಿಸುತ್ತಿರುವರು. ಹೀಗೆ ಅವರು ಎಲ್ಲಿಯವರೆಗೆ, ಪರರ ಮನೋವೃತ್ತಿ ಯನ್ನು ಅನುಸರಿಸಿ ನಡೆಯುತ್ತಿರುವರೋ ಅಲ್ಲಿಯವರೆಗೂ ತಮ್ಮ ಮನ ಸ್ಸಾಕ್ಷಿಯನ್ನು ವಂಚಿಸುತ್ತಿರುವರು. ಮನಸ್ಸಾಕ್ಷಿಯನ್ನು ಕೊಂದು ಪರಾನು ಕರಣಮಾಡುವ ಅವರು ಅಗಾಧ ಪಾಪಸಾಧನೆ ಮಾಡಿದಂತಾಗಲಿಲ್ಲವೆ! ಒಂದು ಬಾರಿ ಹೀಗೆ ಮನಸ್ಸಾಕ್ಷಿಯನ್ನು ವಂಚಿಸಿ, ಅವರು ನಡೆದರೆಂದರೆ, ತರುವಾಯ ಅವರ ಅನುಸರಣೆಯೇ ಮೇಲೆ ಮೇಲೆ ಒದಗುತ್ತಾ ಹೋಗು ವುದು. ಹೀಗಾಗಿ ಅವರು ಅಂತರಾತ್ಮನಿಗೆ ದ್ರೋಹಮಾಡಿ, ಅಗಾಧ ಪಾಪಸಾಧನೆ ಮಾಡಿದಂತಾಗುವುದು.

ಆದುದರಿಂದ ದಾಸ್ಯಮನೋಭಾವವನ್ನು ನೀಗಿ ಮನಸ್ಸನ್ನು ನಿರ್ಮಲವಾ ಗಿಟ್ಟುಕೊಳ್ಳದಿದ್ದವನಿಗೆ ಸ್ವಾಭಿಮಾನವಿರದು ಎಂಬುದು ನಿಶ್ಚಯವಾಯಿತ ಲ್ಲವೆ! ಸ್ವಾಭಿಮಾನವಿಲ್ಲದವನಿಗೆ ಸ್ವಾತಂತ್ರ್ಯಾಪೇಕ್ಷೆಯಿರದು. ಸ್ವಾತಂತ್ರ್ಯಾ ಪೇಕ್ಷೆಯೇ ಇಲ್ಲದವನಿಗೆ, ಬಂಧನದಿಂದ ಬಿಡುಗಡೆಯಾದರೂ ಹೇಗೆ ಪ್ರಾಪ್ತ ವಾದೀತು! ಹೀಗೆ ಆ ಮದಿಶ್ಯನಿಯು, ಜನ್ಮಜನ್ಮಾಂತರಕ್ಕೂ ಬಿಡುಗಡೆಯ ಮಾರ್ಗವನ್ನೇ ಕಾಣದೆ, ದಾಸ್ಯದಲ್ಲೇ ಬಿದ್ದು ನರಳುತ್ತಿರುವನು. ಆದು ದರಿಂದ ಸಕಲ ಶ್ರೇಯಃ ಪ್ರಾಪ್ತಿಗೂ ಈ ಭಾವದಾಸ್ಯವು ನಿವಾರಣೆಯಾಗ ಬೇಕಾದುದೊಂದು ಪ್ರಥಮ ಸಾಧನವಾಗಿದೆ. ಸ್ವಾತಂತ್ರ್ಯ ಪ್ರಾಪ್ತಿಗೆ ಭಾ ವ ದಾ ಸ್ಯ ವೆಂ ಬು ದೇ ಮೊದಲನೆಯ ತಡೆಯು. ಸ್ವಾತಂತ್ರ್ಯ ಪ್ರಾಪ್ತಿಯ ವಿಷಯದಲ್ಲಿ ನಮಗೆ ನಿಶ್ಚಯವಾದ ಅಭಿಲಾಷೆಯಿರುವುದಾದರೆ, ಈ ಮೊದಲ ಪ್ರತಿಬಂಧಕವನ್ನು ದಾಟಲೇಬೇಕು. ಭಾವದಾಸ್ಯವೊಂದು ನಿವಾರಣೆಯಾಗಿ, ಅಡಿಗಡಿಗೂ ಆತ್ಮವಂಚನೆ ಮಾಡಿಕೊಳ್ಳುವ ಕ್ಷುದ್ರತನ- ಹೇಡಿತನವೊಂದು ನಮ್ಮನ್ನು ಬಿಟ್ಟು ತೊಲಗಿತೆಂದರೆ, ಮುಂದೆ ಸ್ವಾಭಿ ಮಾನ ರಕ್ಷಣೆಯಿಂದಲೇ ಮನುಷ್ಯನು ಮನುಷ್ಯನೆನ್ನಿಸಿಕೊಳ್ಳುವನು. ಹೀಗೆ

ಮನುಷ್ಯನು, ತಾನು, ಮನುಷ್ಯನೆಂಬುದನ್ನು ಎಂದು ತಿಳಿದುಕೊಳ್ಳುವನೋ ಅಂದಿನಿಂದಲೇ ಅವನ ಬಂಧನವೆಂಬ ಸಂಕಲೆಗಳು ಕಳಚಿ ಬಿದ್ದುಹೋಗುವುವು. ಮುಂದವನು ಸ್ವತಂತ್ರನಾಗುವನು. ಇಂತಹ ಸ್ವಾತಂತ್ರ್ಯ ಪ್ರಾಪ್ತಿಗೆ ನಮ್ಮವರಿಗೆ ಇಚ್ಛೆ ಹುಟ್ಟಬೇಕಾದರೆ, ಅವರಿಗೆ ಸ್ವಾಭಿಮಾನ ರಕ್ಷಣೆಯಲ್ಲಿ ತಮ್ಮ ಪ್ರಾಣಗಳನ್ನು ತೃಣವಾಗಿ ಎಣಿಸಿದ್ದ ಭಾರತೀಯ ಪೂರ್ವಿಕ ಮಹನೀಯರ ಪವಿತ್ರ ಚರಿತ್ರೆಗಳ ಪರಿಚಯವಾಗಬೇಕಾದುದು ಅತ್ಯಾವಶ್ಯಕ. ಅಂತಹ ಒಂದು ಉದಾಹರಣೆಯನ್ನು ಪ್ರಕೃತ ಚರಿತ್ರೆಯು ಕೊಡಲಿರುವುದು. ಪಾಠಕ ಮಹಾಶಯರು ಸಾವಧಾನದಿಂದ ಮುಂದರಿಸಬೇಕು.

ಲೋಕಭೀಕರವಾದ ಭಾರತ ಮಹಾಯುದ್ಧವು ನಡೆದು ಉಭಯ ಪಕ್ಷದಲ್ಲೂ ಲಕ್ಷಾಂತರ ಮಂದಿ ಯೋಧರು, ರಣದೇವತೆಗೆ ತಮ್ಮ ತಲೆಗಳನ್ನು ತೆತ್ತರು. ಭೀಷ್ಮ, ದ್ರೋಣ, ಕೃಪ, ಶಲ್ಯ, ಕರ್ಣ, ಅಭಿಮನ್ಯು, ಘಟೋತ್ಕಜ ಮುಂತಾದ ಅಲೌಕಿಕ ವೀರರು ಅಸುವನ್ನು ನೀಗಿದರು. ರಕ್ತವು ಪ್ರವಾಹವಾಗಿ ಹರಿಯಿತು. ಸತ್ತವರ ದೇಹಗಳು ರಣರಂಗದಲ್ಲಿ ಪರ್ವತಾಕಾರವಾಗಿ ಬಿದ್ದುವು. ಅಷ್ಟ ಜನನಷ್ಟ, ಧನನಷ್ಟ, ಪ್ರಾಣನಷ್ಟಗಳಿಂದ ಆದ ಪ್ರಯೋಜನವೇನು! ರಾಜನಾಗಿದ್ದ ದುರ್ಯೋಧನನು ಸತ್ತು ಮಣ್ಣುಗೂಡಿದನು. ಅವನ ತೊಂಬತ್ತೊಂಬತ್ತು ಮಂದಿ ತಮ್ಮಂದಿರೂ ನಿರ್ನಾಮವಾದರು. ಅವನು ಮಹಾ ದುರಭಿಮಾನಪಟ್ಟು ಕಾಪಾಡಿದ ರಾಜ್ಯವೂ ಐಶ್ವರ್ಯವೂ ನಾಶವಾದುವು. ಆ ಒಂದು ಯುದ್ಧದಿಂದ ಕೌರವರ ಕಡೆಯ ಹನ್ನೊಂದು ಅಕ್ಷೋಹಿಣೀ ಸೈನ್ಯವೂ ಪಾಂಡವರ ಕಡೆಯ ಏಳು ಅಕ್ಷೋಹಿಣೀ ಸೈನ್ಯವೂ ನಷ್ಟವಾಗಿ ಭೂಭಾರವು ಹರಣವಾಯಿತು. ಕೌರವನು ಮೂರ್ಖನಾಗಿ ಬಂಧುಗಳೊಡನೆ ಬೆಳೆಯಿಸಿದ ದ್ವೇಷದ ಫಲವಾಗಿ, ಪುತ್ರಪೌತ್ರರೊಂದಿಗೂ, ಮಿತ್ರಬಾಂಧವರೊಂದಿಗೂ ಗುರುಹಿರಿಯರೊಂದಿಗೂ ಹತನಾಗಿ ಭೂಮಿಯಲ್ಲೊರಗಿದನು. ಅವನ ವಂಶವೇ ನಿಸ್ಸಂತಾನವಾಗಿ ಹೋಯಿತು.

ಸೋತು ನಾಶವಾದ ದುರ್ಯೋಧನನ ಗತಿಯು ಹೀಗಾಯಿತಷ್ಟೆ! ಹೋಗಲಿ, ಜಯಿಸಿ ಬದುಕಿದ ಪಾಂಡವರು ಮುಂದೆ ಸುಖವಾಗಿದ್ದರೆ?

ರಾಜ್ಯವಲ್ಲಿನ ವೀರಾಧಿವೀರರೆಲ್ಲರೂ ಹತರಾಗಿ ಹೋಗಿದ್ದರು. ಅಪಾರ ಧನವು ವ್ಯಯವಾಗಿ ಹೋಗಿದ್ದಿತು. ದೇಶವು ಎಲ್ಲ ನೋಡಿದರೂ ಹಾಳು ಹಾಳಾಗಿ ಕಾಣಿಸುತ್ತಿತ್ತು. ಯಾರ ಮುಖದಲ್ಲೂ ಉತ್ಸಾಹವಿಲ್ಲ. ಆದ್ಯಂತ ದೇಶದಲ್ಲಿ ಆ ಮಹಾಯುದ್ಧದಲ್ಲಿ ಮೃತಪಟ್ಟ ತನ್ನ ಬಂಧುಗಳಿಗಾಗಿ ವ್ಯಥೆ ಪಡದ ಮನೆಯು ಒಂದಾದರೂ ಇರಲಿಲ್ಲ. ಇಂತಹ ದಾರುಣವಾದ ಯುದ್ಧ ಮಾಡಿ ಬಂಧುಗಳನ್ನೂ, ಗುರುಗಳನ್ನೂ, ಹಿರಿಯರನ್ನೂ, ಮಿತ್ರರನ್ನೂ, ಪುತ್ರರನ್ನೂ ವಧೆಗೆ ಈಡುಮಾಡಿದುದಕ್ಕೆ, ಕೌರವನಂತಹ ಮನುಷ್ಯನ ಹೃದಯನೇ ಮರುಕಗೊಳ್ಳಬಹುದಾಗಿರುವಲ್ಲಿ ಇನ್ನು ಧರ್ಮಾತ್ಮನಾದ ಯುಧಿಷ್ಠಿರನ ವಿಚಾರವನ್ನು ಕುರಿತು ಹೇಳಬೇಕಾದುದೇನು? ಧರ್ಮಜನೂ ರಾಜ್ಯಲೋಭಕ್ಕೆ ಒಳಗಾಗಿ ತಾನು ಮಾಡಿದ ಆ ಅನರ್ಥಕಾರ್ಯವನ್ನು ಕಂಡು, ತನ್ನಂತಹ ಪಾಪಿಯು ಲೋಕದಲ್ಲಿ ಯಾರೂ ಇಲ್ಲವೆಂದು ವಿಶೇಷವಾಗಿ ಮರುಗಿದನು. ಆ ಪಾಪದ ಫಲಾನುಭವಕ್ಕಾಗಿ ತಾನು ಪುನಃ ವನವಾಸವನ್ನಂ ಕೈಕೊಂಡು, ತನ್ನ ಶೇಷಾಯುಷ್ಯವನ್ನು ನೀಗುವೆನಲ್ಲದೆ, ಬಂಧುಗಳ ರಕ್ತಮಾಂಸದ ಕಾಲುವೆಗಳನ್ನು ದಾಟಿದುದರಿಂದ ಪ್ರಾಪ್ತವಾದ ಆ ರಾಜ್ಯವೈಭವವು ತನಗೆ ಬೇಡವೆಂದು ಕುಳಿತನು. ಆಗ ಶ್ರೀಕೃಷ್ಣನೇ ಮುಂತಾದ ಆಪ್ತರು ಅನೇಕ ವಿಧಗಳಿಂದ ಸಮಾಧಾನ ಹೇಳಿ, ಆತನನ್ನು ಪಟ್ಟಾಭಿಷೇಕಕ್ಕೆ ಒಪ್ಪಿಸಿದರು. ಪಟ್ಟಾಭಿಷೇಕವೂ ಪರಮ ಸಂಭ್ರಮದಿಂದ ನಡೆದುಹೋಯಿತು. ಮುಂದೆ ಕೆಲಕಾಲ ಧರ್ಮದಿಂದ ರಾಜ್ಯಪಾಲನೆ ಮಾಡಿಕೊಂಡಿದ್ದನು.

ಯುಧಿಷ್ಠಿರ ನೃಪೋತ್ತಮನ ರಾಜ್ಯಭಾರವು-ಶ್ರೀರಾಮ ರಾಜ್ಯದಂತೆ, ಧರ್ಮಮಾರ್ಗವನ್ನು ತಪ್ಪದೆ ನಡೆಯತೊಡಗಿತು. ಕಳ್ಳಕಾಕರೂ, ಸುಳ್ಳುಗಾರರೂ ಮೋಸಗಾರರೂ ಸುಳಿವಿಲ್ಲದಂತೆ ಅಡಗಿಸಲ್ಪಟ್ಟರು. ಧನವಂತರಿಂದ ಬಡವರಿಗೆ ಯಾವ ವಿಧವಾದ ಬಲವಂತವೂ ಕಷ್ಟಕಾರ್ಪಣಗಳೂ ಪ್ರಾಪ್ತವಾಗದಂತೆ ದೀನಾನಾಥರಿಗೆ ರಕ್ಷಣೆ ದೊರೆಯಿತು. 'ಬಲವಂತನೇ ಜಯವಂತನು' ಎಂಬ ನೀತಿಯು ಧರ್ಮರಾಜನ ರಾಜ್ಯದಲ್ಲಿ ಪ್ರವೇಶಗೊಳ್ಳಲಿಲ್ಲ. ಅಲ್ಲಿ ಅಶಕ್ತನಾದರೂ ಯಾವನು ನ್ಯಾಯ ಸಂಪನ್ನನೋ, ಯಾವನು ಸತ್ಯವಂತನೋ ಅವನಿಗೆ ಮಾತ್ರವೇ ರಕ್ಷಣೆಯು ದೊರೆತು,

ಅನ್ಯಾಯಕಾರಿಯು ಎಂತಹ ಬಲವಂತನಾದರೂ ನಿರ್ದಾಕ್ಷಿಣ್ಯವಾಗಿ ರಾಜ ದಂಡದಿಂದ ಶಿಕ್ಷಿಸಲ್ಪಡುತ್ತಿದ್ದನು. ಪ್ರಜೆಗಳೆಲ್ಲರೂ ಧರ್ಮಾತ್ಮರಾಗಿ, ಪಾಪ ಭೀತರಾಗಿ, ಭೂತದಯೆ ಪಶ್ಚಾತ್ತಾಪಗಳನ್ನುಂಟಾದವರಾಗಿ, ರಾಜಭಕ್ತಿ ದೈವಭಕ್ತಿ ಗುರುಭಕ್ತಿಗಳಿಂದ ಕೂಡಿ, ಶ್ರದ್ಧಾವಂತರಾಗಿ ಇದ್ದರು. ಆತನ ರಾಜ್ಯಪಾಲನೆಯಿಂದ ಆ ನಾಡಿನಮೇಲೆ ಉಂಟಾದ ಪರಿಣಾಮವನ್ನು ವರ್ಣಿಸುತ್ತಾ, ಕರ್ಣಾಟಕ ಕವಿಕುಲಶೇಖರ ಲಕ್ಷ್ಮೀಶನು,

ಬಳಿಕ ನೃಪವರ ಯುಧಿಷ್ಠಿರ ನಾಳ್ವದೇಶದೊ
ಳ್ಕಳವು ಕೊಲೆ ಪಾದರಂ ಪುಸಿನುಸುಳು ವೈರಮು
ಟ್ಬ್ವಳಿತೋಹು ಬೆದರುಬೆಚ್ಚರ ಕಷ್ಟನಿಷ್ಠುರಂಗಜರುಗಾವಳಿ ವಿವಾದ
ಮುಳಿಸುಪೊಲೆಗಲಸುಮೊರೆಸರೆ ಕೃತಕಕಾರ್ಪಣ್ಯ
ಮುಳಿವುಪಳಿಪನ್ಯಾಯ ಮರೆಮೋಸಮಾಸಿತ
ಲ್ಲ ಳತಳೆವಿಯೋಗ ಮುಲಸಿಕೆ ಕರ್ಕಶಂಗಳಿವು ಮೊಳೆದೋರವೇ
ವೇಳ್ವೆನು

ಹೀಗೆ ದುರ್ಗುಣಗಳೂ, ದುಷ್ಕ್ರಿಯೆಗಳೂ ಮೊಳೆದೋರದಂತೆ ನಾಶವಾದು ದರೊಂದಿಗೇ

ನೀತಿಚತುರತೆ ಕೀರ್ತಿಕಲ್ಯಾಣ ಭೋಗಸಂ
ಪ್ರೀತಿ ಪರಹಿತ ವಿನಯ ಶುಭ ವಿಭವವಿಜಯವಿ
ಖ್ಯಾತಿ ಕಳೆಸೌಭಾಗ್ಯಮಾರೋಗ್ಯ ಸೌಖ್ಯಮುನ್ನತ ಸತ್ಯ ನಿತ್ಯಶಕ್ತಿ
ಜಾತಿಧರ್ಮಾಚಾರ ನಿಷ್ಠೆ ಧರ್ಮಜ್ಞತೆ ವಿ
ಭೂತಿ ಶಮೆದಮೆದಾನ ದಾಕ್ಷಿಣ್ಯಮೆಂಬಿವು ಮ
ಹಾತಿಶಯಮೆನೆ ಪೆರ್ಚಿತಾ ಯುಧಿಷ್ಠಿರ ನರೇಶ್ವರನಾಳ್ವಭೂತಳ
ದೊಳು

ಎಂದು ಮುಕ್ತಕಂಠದಿಂದ ವರ್ಣಿಸಿರುತ್ತಾನೆ. ಇಂತಹ ರಾಜ್ಯ ಪಾಲನೆಯಿಂದ ಪ್ರಜಾಸಮುದಾಯವು ಕಷ್ಟನಿಷ್ಠುರಗಳನ್ನು ನೀಗಿ ಸುಖ ಸಂತೋಷಗಳಲ್ಲಿ ಓಲಾಡುತ್ತಿದ್ದಿತೆಂದು ಹೇಳಬೇಕಾದುದೇನು !

ರಾಜ್ಯದಲ್ಲಿ ಇಷ್ಟುಮಟ್ಟಿನ ಸುಖಶಾಂತತೆಗಳನ್ನು ಸ್ಥಾಪಿಸಿದನಾದ ರೂ, ಧರ್ಮಜನ ಮನಸ್ಸು ಸಮಾಧಾನ ಹೊಂದಲಿಲ್ಲ. ತಮ್ಮನ್ನು, ತೊಡೆಯು

ಮೇಲೆ ಎತ್ತಿ ಆಡಿಸಿದ ಕುರುವೃದ್ಧ ಭೀಷ್ಮಾಚಾರ್ಯನನ್ನೂ, ವಿದ್ಯಾಗುರುವಾದ ಪೂಜ್ಯ ದ್ರೋಣಾಚಾರ್ಯನನ್ನೂ, ಅಗ್ರಜನ್ಮನಾದ ಕರ್ಣನನ್ನೂ, ಇನ್ನೂ ಅನೇಕಾನೇಕ ಬಂಧುಗಳನ್ನೂ ವಧಿಸಿ ಸಂಪಾದಿಸಿದ ಈ ರಾಜ್ಯವು ಅತಿಶಯ ಅನ್ಯಾಯಮೂಲವಾಗಿ ಲಭ್ಯವಾದುದಲ್ಲದೆ, ಅದರ ಪ್ರಾಪ್ತಿಯು ನ್ಯಾಯ ಸಮ್ಮತವಾದುದಲ್ಲ ಎಂಬ ಭಾವನೆಯು ಧರ್ಮಮಯನಾದ ಆತನ ಮನಸ್ಸನ್ನು ಆಕ್ರಮಿಸಿತು. ತಾನು ಮಾಡಿದ ಪಾಪಕಾರ್ಯವೂ, ಆ ಪಾಪಮಯ ದ್ರವ್ಯದ ಉಪಭೋಗವೂ ತನಗೆ ವಿಶೇಷ ಪಾಪ ಸಂಘಟನೆಯನ್ನುಂಟುಮಾಡದೆ ಬಿಡದು ಎಂಬುದೂ ಆತನ ಮೃದುವಾದ ಮನಸ್ಸನ್ನು ಕ್ಷಣಶಃ ಕತ್ತರಿಸತೊಡಗಿದುವು. ಶ್ರೀಕೃಷ್ಣನ ಹಿತಬೋಧನೆಯೂ, ಅಂತ್ಯಕಾಲದಲ್ಲಿ ಭೀಷ್ಮನು ಬೋಧಿಸಿದ ಕ್ಷಾತ್ರಧರ್ಮವೂ ಏನೂ ಪ್ರಯೋಜನಕ್ಕೆ ಬರಲಿಲ್ಲ. ಧರ್ಮಜನು ಮಹಾಚಿಂತಾಕ್ರಾಂತನಾಗಿ ದಿನದಿನಕ್ಕೆ ಅದೇ ಮನೋವ್ಯಥೆಯಿಂದ ಕೊರಗತೊಡಗಿದನು. ಈ ಮನೋರೋಗಕ್ಕೆ ಮದ್ದುಂಟೆ! ಎಂದು ಭೀಮಾರ್ಜುನರೂ ಒಳಗೊಳಗೇ ಚಿಂತಿಸುತ್ತಿದ್ದರು.

ಅಷ್ಟರಲ್ಲಿ ಒಂದಾನೊಂದು ದಿನ ಮಹಾ ತಪಸ್ವಿಗಳಾದ ಬಾದರಾಯಣ ಮುನೀಶ್ವರರು ರಾಜನ ಆಸ್ಥಾನಕ್ಕೆ ಬಂದು, ರಾಜನ ವ್ಯಸನ ಕಾರಣವನ್ನರಿತು,—'ಭೂಪಾಲಾ ಚಿಂತಿಸಬೇಡ. ಅಶ್ವಮೇಧ ಯಾಗವನ್ನು ಮಾಡಿದರೆ, ಬಂಧುವಧಾಮೂಲವಾಗಿ ಪ್ರಾಪ್ತವಾದ ಸಕಲ ಪಾಪಗಳೂ ನಿಶ್ಶೇಷವಾಗಿ ನಾಶವಾಗುವುವು. ನಿನಗೆ ಮನಶ್ಶಾಂತಿಯುಂಟಾಗುವುದು' ಎಂದು ಸಲಹೆಕೊಟ್ಟರು. ಒಡನೆ ಧರ್ಮಜನ ಮನಸ್ಸಿನ ಮೇಲಿದ್ದ ಚಿಂತೆಯ ತೆರೆಯು ಹಾರಿಸಲ್ಪಟ್ಟಂತಾಯಿತು. ಹಸನ್ಮುಖಿಯಾದ ರಾಜನು ಬಹು ಸಂತೋಷದಿಂದ, ದ್ವಾರಕಾವಾಸಿಯಾದ ಶ್ರೀಕೃಷ್ಣಸ್ವಾಮಿಗೆ ವರ್ತಮಾನ ಕಳುಹಿ ಕರೆಯಿಸಿಕೊಂಡು, ಆತನ ಸಮ್ಮತಿಯನ್ನೂ, ತಮ್ಮಂದಿರಾದ ಭೀಮಾರ್ಜುನ ನಕುಲ ಸಹದೇವರ ಒಪ್ಪಿಗೆಯನ್ನೂ ಪಡೆದು, ಆ ಮಹಾಯಾಗವನ್ನು ಆಚರಿಸಲು ಸಂಕಲ್ಪಮಾಡಿದನು. ಒಡನೆ ಭೀಮಸೇನನು, ವೃಷಕೇತು ಸಹಾಯದಿಂದ ಯೌವನಾಶ್ವ ರಾಜಧಾನಿಗೆ ಪ್ರಯಾಣಮಾಡಿ, ಶಾಸ್ತ್ರೋಕ್ತವಾದ ರೂಪಲಕ್ಷಣಗಳಿಂದ ಸುಶೋಭಿತವಾದ ದಿವ್ಯ ಯಜ್ಞಾಶ್ವವನ್ನು ತಂದನು. ಅರ್ಜುನನು ಶ್ರೀ ವೇದವ್ಯಾಸರ

ಸಂದೇಶಗೊಂಡು ಹಿಮವತ್ಪ್ರಾಂತದಲ್ಲಿ ಮರುತ್ತರಾಜನಿಂದ ಮಾಡಲ್ಪಟ್ಟ ಯಜ್ಞದಲ್ಲಿ ದಾನಪಡೆದು ಹೊತ್ತು ಕೊಂಡೊಯ್ಯಲಾರದೆ ಭೂಸುರರು ಬಿಸುಡಿಹೋಗಿದ್ದ ಅಪಾರ ಧನರಾಶಿಯನ್ನು ಹೊತ್ತುತಂದು ಒದಗಿಸಿದನು.

ಶ್ರೀ ಬಾದರಾಯಣ ಮುನೀಶ್ವರರೂ, ನರನಾರಾಯಣ ಸ್ವರೂಪಿಗಳಾದ ಶ್ರೀಕೃಷ್ಣಾರ್ಜುನರೂ ಬೆಂಬಲವಾಗಿರಲು, ಯಜ್ಞವು ಸುರಕ್ಷಿತವಾಗಿ ನಡೆಯುವುದೆಂದು ಧರ್ಮಜನು ಮನಸ್ಸಮಾಧಾನಗೊಂಡು ಇನ್ನು ಪ್ರಾರಂಭಿಸಬಹುದೆಂದು ನಿಶ್ಚಯಿಸಿದನು. ಜಾಹ್ನವೀ ತೀರದಲ್ಲೊಂದು ಪ್ರಶಸ್ತವಾದ ಸ್ಥಳದಲ್ಲಿ ಯಾಗಶಾಲೆಯು ನಿರ್ಮಿಸಲ್ಪಟ್ಟಿತು. ಸಕಲ ಗೋತ್ರ-ಸೂತ್ರಗಳಿಗೆ ಸಂಬಂಧಿಸಿದ ಮುನಿಪಂಗಡಗಳವರೂ, ದೇಶದೇಶದ ರಾಜಾಧಿರಾಜರೂ ಭೂಸುರೋತ್ತಮರೂ ಆಹ್ವಾನಿಸಲ್ಪಟ್ಟರು. ಪ್ರಜಾವರ್ಗದ ಪ್ರಮುಖ ಮುಂದಾಳುಗಳಿಗೂ ಆಹ್ವಾನ ಪತ್ರಿಕೆಗಳು ಹೋದುವು. ಸಕಲರೂ ಗಂಗಾತೀರದಲ್ಲಿ ನೆರೆದರು. ಯಾಗಶಾಲೆಯು ವಿವಿಧ ತೋರಣ ಪತಾಕೆಗಳಿಂದಲೂ ನೇತ್ರಾನಂದಕರವಾಗಿ ಸಿಂಗರಿಸಲ್ಪಟ್ಟಿತು. ಸಕಲ ವಿಧ ಶುಭ ವಾದ್ಯಗಳೂ ಮೊಳಗುತ್ತಿರಲು, ಓಂಕಾರ ವೇದಮಂತ್ರೋಚ್ಚಾರಣೆಯೂ ಭೂಸುರೋತ್ತಮರ ಸ್ವಸ್ತಿವಾಚನವೂ, ಸುಮಂಗಲೆಯರ ಮಂಗಳಕರ ಗೀತೆಗಳೂ ನಡೆಯುತ್ತಿರಲು, ಯುಧಿಷ್ಠಿರ ಮಹಾರಾಜನು ಧರ್ಮಪತ್ನಿಯೊಡಗೂಡಿ ಯಜ್ಞದೀಕ್ಷಿತನಾಗಿ, ಆ ಅಶ್ವರಾಜನನ್ನು ವಿಧ್ಯುಕ್ತವಾಗಿ ಪೂಜಿಸಿದನು. ಆ ಕುದುರೆಯ ನೆತ್ತಿಯಲ್ಲಿ ಚಿನ್ನದ ತಗಡಿನ ಮೇಲೆ,

'ಇಂದುಕುಲವಗ್ಗಳಿಯ ಪಾಂಡುವಸುಧಾಪಾಲ
ನಂದನ ಯುಧಿಷ್ಠಿರನರೇಂದ್ರನಧ್ವರಹಯಮಿ
ದಂಧಟ್ಟರಾರಾದೊಡಂ ಕಟ್ಟಿಕೊಳಲಾಪರ್ವರಿಳೆಯೊಳ್...........'

ಎಂಬ ಈ ಲಿಪಿಯನ್ನು ಬರೆಯಿಸಿ, ಚೈತ್ರಶುದ್ಧ ಪೂರ್ಣಿಮಾ ಶುಭದಿನದಲ್ಲಿ ಭೂ ಪ್ರದಕ್ಷಿಣೆಗೆಂದು ಕಳುಹಿಸಿದನು. ಗಾಂಡೀವಧಾರಿ ಅರ್ಜುನನು ಉಚಿತ ಸೈನ್ಯದೊಡಗೂಡಿ ಅಶ್ವರಕ್ಷಣೆಗೆಂದು ಅದರ ಬೆಂಬಳಿವಿಡಿದು ಪ್ರಯಾಣಮಾಡಿದನು.



**ಅಧ್ಯಾಯ ೨. 'ಘೋರ ಶಾಪ.'**

ಯಜ್ಞಾಶ್ವವು, ಭೂ ಪ್ರದಕ್ಷಿಣೆಗೆಂದು ಹೊರಟಿತು. ಅದರ ರಕ್ಷಣೆಗಾಗಿ ಧನಂಜಯನು ಸೈನ್ಯಸಮೇತನಾಗಿ, ಅದು ಸ್ವೇಚ್ಛೆಯಿಂದ ಎಲ್ಲಿ ಹೋದರಲ್ಲಿ ಅದರ ಬೆಂಬತ್ತಿ ಹಿಡಿದು ಅದಕ್ಕೆ ದುಷ್ಟಜಂತುಗಳಿಂದ ಪ್ರಾಣಾಪಾಯ ಒದಗದಂತೆ ಬಹು ಜಾಗರೂಕತೆಯಿಂದ ಕಾಪಾಡುತ್ತಾ ಪ್ರಯಾಣ ಮಾಡಿದನು. ಇತ್ತ ಧರ್ಮಜನು ಯಜ್ಞದೀಕ್ಷಿತನಾದ ಯಜಮಾನನಿಗೆ ವಿಧ್ಯುಕ್ತವಾಗಿ ಏರ್ಪಟ್ಟ ಅಸಿಪತ್ರವ್ರತವೆಂಬ ಕಠಿಣ ವ್ರತದೀಕ್ಷೆಯನ್ನು ವಹಿಸಿ, ನಿಯಮವಂತನಾಗಿ ಸತ್ಕಥಾ ಶ್ರವಣಾದಿಗಳಿಂದ ಕಾಲಯಾಪನೆ ಮಾಡುತ್ತಿದ್ದನು. ಅಸಿಪತ್ರವ್ರತವೆಂಬುದು ಹೀಗೆ ವರ್ಣಿಸಲ್ಪಟ್ಟಿದೆ.

ಶ್ಲಾಘ್ಯದಿಂದಾದ ಮಜ್ಜನಭೋಜನದ ಸದಾ
ರೋಗ್ಯದಿಂ ತಾಂಬೂಲ ವಸ್ತ್ರಭೂಷಣದ ಸೌ
ಭಾಗ್ಯದಿಂ ಕುಸುಮ ಪರಿಮಳಗಳ ಸುಲೇಪದಿಂ ಸ್ತ್ರೀಪುರುಷರೇ
ಕಾಂತಕೆ
ಯೋಗ್ಯವಹ ಸಜ್ಜೆಮನೆಯೊಳಗೀರ್ವರುಂ ದಿವ್ಯ
ಭೋಗ್ಯವೆನಿಪೊಂದು ಮಂಚದೊಳೊರಗಿ ಕಾಮವೈ
ರಾಗ್ಯಮಾಗಿರ್ಪುದಸಿಪತ್ರವ್ರತಂ................

ಶ್ಲಾಘ್ಯವಾದ ಮಜ್ಜನ ಭೋಜನಾದಿಗಳಿಂದ ದೇಹವನ್ನು ನಿರೋಗವಾಗಿಟ್ಟುಕೊಂಡು, ತಾಂಬೂಲ ವಸ್ತ್ರಭೂಷಣಗಳನ್ನೂ, ಗಂಧಮಾಲ್ಯಾದಿಗಳ ಅನುಲೇಪನವನ್ನೂ ಲೋಪವಿಲ್ಲದೆ ಸ್ವೀಕರಿಸಿ, ಪತಿಪತ್ನಿಯರಿಬ್ಬರೂ ಏಕಾಂತಕ್ಕೆ ಯೋಗ್ಯವಾದ ಶಯ್ಯಾಗೃಹದಲ್ಲಿ-ದಿವ್ಯಭೋಗಯೋಗ್ಯವಾದ ಮಂಚದಲ್ಲಿ ಏಕಶಯ್ಯೆಯಲ್ಲಿ ಮಲಗಿಯೂ ಕಾಮವೈರಾಗ್ಯದಿಂದ ಇರುವುದು ಅಸಿಪತ್ರವ್ರತವೆನಿಸಿಕೊಳ್ಳುವುದು. ಇಂತಹ ಕಠಿಣತರ ವ್ರತವನ್ನು ಯಜ್ಞದೀಕ್ಷಿತನು ಒಂದು ವರ್ಷಕಾಲ ಪಾಲಿಸಬೇಕೆಂಬುದು ವಿಧಿ. ಧರ್ಮಾತ್ಮನಾದ ಯುಧಿಷ್ಠಿರ ಮಹಾರಾಜನು, ಸಾಮಾನ್ಯರಿಂದ ಊಹಿಸುವುದಕ್ಕೂ ಅಸಾಧ್ಯವೆನ್ನಿಸುವ ಇಂತಹ ತೀಕ್ಷ್ಣವ್ರತವನ್ನು ಕೈಕೊಂಡು ರಾಜರ್ಷಿಯಂತೆ ಶೋಭಿಸಿದನು.

ಇತ್ತ ಭೂ ಪ್ರದಕ್ಷಿಣೆಗಾಗಿ ಹೊರಟ ಯಜ್ಞಾಶ್ವವು ಅನೇಕ ಗ್ರಾಮ ನಗರ ಗಿರಿನಾಡುಗಳನ್ನು ದಾಟಿ ದಕ್ಷಿಣ ದಿಕ್ಕಿಗೆ ಅಭಿಮುಖವಾಗಿ ಪ್ರಯಾಣ ಮಾಡುತ್ತಾ, ಮಾಹೀಷ್ಮತೀ ಎಂಬೊಂದು ಪಟ್ಟಣದ ಹೊರಭಾಗದಲ್ಲಿದ್ದ ಉಪವನದ ಸಮೀಪಕ್ಕೆ ಬಂದಿತು. ಆ ನಗರದ ಅರಸನಾದ ನೀಲಧ್ವಜ ನೆಂಬಾತನು ಅದನ್ನು ಕಂಡು, ಪಾಂಡವರಾಜ ಸೈನ್ಯದ ಸತ್ವವನ್ನು ಪರೀಕ್ಷಿ ಸೋಣವೆಂದು, ಆ ಅಶ್ವವನ್ನು ಕಟ್ಟಿ ಯುದ್ಧಸನ್ನದ್ಧನಾಗಿ ನಿಂತನು. ಅರ್ಜುನನು ಅರಿವೀರನ ಆ ಪ್ರಬಲ ಸೇನೆಗೆ ಅಭಿಮುಖವಾಗಿ ತನ್ನ ಸೇನೆ ಯನ್ನು ಅಣಿಗೊಳಿಸಿ ನಿಲ್ಲಿಸಿ, ಭಯಂಕರ ಅಸ್ತ್ರ ಶಸ್ತ್ರ ಪ್ರಯೋಗಗಳಿಂದ ಶತ್ರುಸೇನೆಯನ್ನು ತಲ್ಲಣಗೊಳಿಸಿದನು ಆದರೇನು! ಶತ್ರುಪಕ್ಷವೇ ಕ್ಷಣ ಕ್ಷಣಕ್ಕೂ ಪ್ರಬಲವಾಗತೊಡಗಿತು. ನೀಲಧ್ವಜನಿಗೆ ಯಜ್ಞೇಶ್ವರನು ಮನೆ ಯಳಿಯನಾಗಿದ್ದುದರಿಂದ ಆತನು ತನ್ನ ಮಾವನಿಗೆ ಸಹಾಯಕನಾಗಿ ಯುದ್ಧಭೂಮಿಗೆ ಬಂದು ಅರ್ಜುನನ ಸೈನ್ಯಸಾಗರವನ್ನು ತನ್ನ ಜ್ವಾಲಿ ಯಿಂದ ಶೋಷಿಸಲಾರಂಭಿಸಿದನು. ಅರ್ಜುನನ ಸೈನ್ಯವು ನಿಮಿಷಮಾತ್ರ ದಲ್ಲಿ ಒಂದು ಕಡೆಯಿಂದ ಹತ್ತಿ ಬೇಯಲಾರಂಭಿಸಿತು. ಧರ್ಮಾನುಜನು ಆ ಅಪೂರ್ವ ಪರಿಸ್ಥಿತಿಯನ್ನು ಕಂಡು ಉಪಾಯ ತೋರದೆ, ಸಾಕ್ಷಾತು ಯಜ್ಞೇಶ್ವರನೇ ನಿಂತು ದಹಿಸತೊಡಗಿರುವಾಗ, ಜಲ ವಾರಣಾಸ್ತ್ರಾದಿ ಅಗ್ನಿನಾಶಕ ಸಾಧನಗಳು ಉಪಯೋಗಪಡಲಾರವೆಂದು ನಿಶ್ಚೈಸಿ, ಆ ಯಜ್ಞೇಶ್ವರನಿಗೇ ಶರಣುಬಿದ್ದು, ಅನಿಲ ಸೂಕ್ತಗಳಿಂದ ಸ್ತುತಿಗೈದು, ಆ ದೇವೋತ್ತಮನನ್ನು ಹಲವು ಬಗೆಯಿಂದ ಪ್ರಾರ್ಥಿಸಿಕೊಂಡನು. ಶ್ರದ್ಧಾಳುವೂ ನಿಷ್ಕಲ್ಮಷ ಚಿತ್ತನೂ ಆದ ಆ ಪಾಂಡುಪುತ್ರನ ಆ ವಿನೀತಭಾವಕ್ಕೆ ಅಗ್ನಿ ದೇವನು ಪ್ರಸನ್ನನಾಗಿ ತನ್ನ ದಹನ ಕಾರ್ಯವನ್ನು ನಿಲ್ಲಿಸಿ, ತನ್ನ ಮಾವ ನನ್ನು ಕುರಿತು, ಇಂದ್ರತನುಜನಾದ ಆತನಮೇಲೆ ಕೈಮಾಡದೆ, ನಗರಕ್ಕೆ ಹಿಂದಿರುಗುವುದು ಮೇಲೆಂದು ಸಲಹೆಕೊಟ್ಟನು. ಅಂತೆಯೇ ನೀಲಧ್ವಜನು ಯುದ್ಧೋನ್ಮುಖವಾಗಿದ್ದ ತನ್ನ ಸೇನೆಯನ್ನು ಹಿಂದಕ್ಕೆ ಕರೆದು ತನ್ನ ರಾಜ ಧಾನಿಯಾದ ಮಾಹಿಷ್ಮತೀ ನಗರವನ್ನು ಹೊಕ್ಕನು.

ಆ ನೀಲಧ್ವಜ ಮಹಾರಾಜನಿಗೆ ಜ್ವಾಲೆಯೆಂಬ ಸ್ತ್ರೀಯು ಭಾರ್ಯೆ ಯಾಗಿದ್ದಳು. ಆಕೆಯು ಮಹಾ ಕರ್ಕಶ ಸ್ವಭಾವದ ಹೆಂಗಸು. ಅರ್ಜು

ನನ ಪ್ರಾರ್ಥನೆಗೆ ಮೆಚ್ಚಿದ ಯಜ್ಞೇಶ್ವರನ ಸಂದೇಶದಂತೆ, ತನ್ನ ಪತಿಯು, ಪಾಂಡವರ ಯಜ್ಞಾಶ್ವವನ್ನು ಹಿಂದಿರುಗಿ ಆತನಿಗೆ ಕಳುಹಿಸಿ ಕೊಡಲು ಸಿದ್ಧನಾಗಿದ್ದಾನೆಂಬ ವಾರ್ತೆಯು ಆಕೆಗೆ ತಿಳಿಯಿತು. ಒಡನೆ ಜ್ವಾಲೆಯು ತನ್ನ ಪತಿಯ ಸವಿಾಪಕ್ಕೆ ನಡೆದು-'ಪ್ರಾಣಕಾಂತ, ಇದೇನು! ಮೊದಲು ಕ್ಷಾತ್ರಪೌರುಷವು ಮೆರೆಯುವಂತೆ, ಭೂಪತಿಗಳ ಯಜ್ಞಾಶ್ವವನ್ನು ಕಟ್ಟಿ, ಈಗ ತಕ್ಕಂತೆ ಶತ್ರುಸೇನೆಯೊಂದಿಗೆ ಯುದ್ಧಮಾಡದೆ, ಸೋಲದೆ, ಅಥವ ಹತವಾಗದೆ, ಕುದುರೆಯನ್ನು ಅವರಿಗೆ ಒಪ್ಪಿಸುವುದೆಂದರೆ ಅರ್ಥವೇನು! ಕ್ಷತ್ರಿಯರು ಹೀಗೆ ಆಚರಿಸಿದುದನ್ನು ಎಲ್ಲಾದರೂ ಕಂಡು ಕೇಳಿದ್ದುಂಟೆ' ಎಂದು ಆಕ್ಷೇಪಿಸಿದಳು. ನೀಲಧ್ವಜನಿಗೂ ಅದು ಸಮಂಜಸವಲ್ಲವೆಂದು ತೋರಿತು. ಒಡನೆ ಆತನು, ತಾನು ಅಗ್ನಿಯ ಮಾತಿಗೊಪ್ಪಿ ಕುದುರೆಯನ್ನು ಹಿಂದಿರುಗಿ ಕಳುಹಿಸುತ್ತೇನೆಂದು ಅರ್ಜುನನಿಗೆ ಹೇಳಿಬಂದಿದ್ದ ವಾಕ್ಯವನ್ನು ಮೌನಸಿಕಮಾಡಿ ಬಿಟ್ಟನು. ಮತ್ತು ಒಬ್ಬ ಸೇವಕನನ್ನು ಕರೆದು,-'ಎಲೈ ವೀರನೇ ಕ್ರಮಯುದ್ಧದಲ್ಲಿ ನಮ್ಮೊಂದಿಗೆ ಕಾದಿ ಜಯಿಸಿದಲ್ಲದೆ ಯಜ್ಞಾಶ್ವವನ್ನು ನಿಮಗೆ ಕೊಡಲಾರೆವು' ಎಂದು ಪಾರ್ಥನ ಬಳಿಗೆ ಹೇಳಿ ಕಳುಹಿಸಿದನು.

'ಇನ್ನು ಯುದ್ಧವಿಲ್ಲದೆಯೇ ಕುದುರೆಯು ಲಭ್ಯವಾಗುವುದು' ಎಂದು ವಿಶ್ರಾಂತಿಗೊಂಡಿದ್ದ ನರನ ಸೇನೆಯು ಪುನಃ ಶಸ್ತ್ರಧಾರಣಮಾಡಿ, ಮಾಹಿಷ್ಮತೀ ನಗರವನ್ನು ಮುತ್ತಲು ಸನ್ನದ್ಧವಾಯಿತು. ಸ್ತ್ರೀಯಳ ಮಾತಿನಂತೆ ನೀಲಧ್ವಜನೂ ತನ್ನ ಸೈನ್ಯವನ್ನು ಯುದ್ಧಕ್ಕೆ ಸಿದ್ಧಗೊಳಿಸಿಕೊಂಡು ಶತ್ರುಸೇನೆಯನ್ನು ಎದುರಿಸಿದನು. ಉಭಯ ಸೇನೆಗೂ ಭಯಂಕರ ಯುದ್ಧ ನಡೆದು ನೀಲಧ್ವಜನ ಸೇನೆಯು ಬಹು ಸಂಖ್ಯೆಯಿಂದ ಹತವಾಯಿತು. ನೀಲಧ್ವಜನ ಮಕ್ಕಳೂ ತಮ್ಮಂದಿರೂ ಯುದ್ಧದಲ್ಲಿ ಹತರಾದರು. ಸ್ವತಃ ರಾಜನೂ ಅರ್ಜುನನಿಗೆ ಅಭಿಮುಖನಾಗಿ ನಿಂತು ಯುದ್ಧಮಾಡಲಾರದೆ, ಮೂರ್ಛೆಹೋಗಿ ತನ್ನ ರಥದಲ್ಲೊರಗಿದನು. ಇನ್ನು ರಣಭೂಮಿಯಲ್ಲಿರುವುದು ಉಚಿತವಲ್ಲವೆಂದುಕೊಂಡು, ಆತನ ಸಾರಥಿಯು, ಮೂರ್ಛೆಗೊಂಡ ರಾಜನನ್ನು ಶೀಘ್ರವಾಗಿ ಅರಮನೆಗೆ ತಂದು, ಶೈತ್ಯೋಪಚಾರಗಳನ್ನು ಮಾಡಿದನು. ಕೋಟೆಯ ಹೆಬ್ಬಾಗಿಲುಗಳು ಮುಚ್ಚಲ್ಪಟ್ಟವು.

ಶೈತ್ಯೋಪಚಾರದಿಂದ ರಾಜನಿಗೆ ಎಚ್ಚರ ತೋರಿತು. ಶತ್ರುವಿನ ಬಾಣಹತಿಯಿಂದ ಪರಾಭವಗೊಂಡ ನೀಲಧ್ವಜನು, ಹಿಂದಿನ ದಿನ ಕುದುರೆಯನ್ನು ಕೊಡಬೇಡವೆಂದು ತನಗೆ ದುರ್ಬೋಧನೆಮಾಡಿ ಪ್ರತಿಬಂಧಕಗೊಳಿಸಿದ ತನ್ನ ಸತಿ ಜ್ವಾಲೆಯನ್ನು ಮನಬಂದಂತೆ ನಿಂದಿಸಿದನು. ಕುಲಘಾತಕಿಯಾದ ಆಕೆಯು ಮನೆಯಲ್ಲಿರುವುದೇ ಕೆಡಕೆಂದು ತಿಳಿದು, ತನ್ನ ಮನೆಯನ್ನು ಬಿಟ್ಟು ನಡೆಯೆಂದು ಬೈದು ಛಂಗಿಸಿ ಹೊಸ್ತಿಲಿಂದ ಹೊರಡಿಸಿ ಬಿಟ್ಟನು. ತರುವಾಯ ತಾನು ಕಪ್ಪಕಾಣಿಕೆಗಳೊಂದಿಗೆ ಕುದುರೆಯನ್ನು ತೆಗೆದುಕೊಂಡು ಹೊರಹೊರಟು, ತನ್ನ ಪಟ್ಟಣದ ಹೊರಗೆ ಬೀಡು ಬಿಟ್ಟಿದ್ದ ಅರ್ಜುನನನ್ನು ಕಾಣಿಸಿಕೊಂಡನು. ಅರ್ಜುನನು ಶರಣಾಗತನಾಗಿ ಬಂದ ಆತನನ್ನು ಯುಕ್ತ ರೀತಿಯಲ್ಲಿ ಗೌರವಿಸಿ, ಕಾಣಿಕೆಗಳನ್ನು ಸ್ವೀಕರಿಸಿ ಮನ್ನಿಸಿದನು. ಕುದುರೆಯು ಎಂದಿನಂತೆ ಪುನಃ ದಕ್ಷಿಣಾಭಿಮುಖವಾಗಿ ಪ್ರಯಾಣಮಾಡಿತು.

ತನ್ನ ಉಪದೇಶದಂತೆ ಅರ್ಜುನನ ಸೇನೆಗೆ ಪರಾಭವವಾಗದೆ, ತನ್ನ ಮಕ್ಕಳು ಮತ್ತು ಬಾಂಧವರು ಮೃತರಾದ ದಲ್ಲದೆ, ಪತಿಯೂ ಮೂರ್ಛಿತನಾಗಿ ಹಿಂದೆ ಬಂದುದು, ಕರ್ಕಶ ಸ್ವಭಾವದ ಜ್ವಾಲೆಗೆ ಬಹು ವಿಷಾದವೆನ್ನಿಸಿತು. ಸಾಲದುದಕ್ಕೆ ತಮ್ಮ ಸೇನೆಯ ಪರಾಭವಕ್ಕೆ ಕರ್ಕಶೆಯೂ ಕಠಿನಾತ್ಮಳೂ ಆದ ತಾನೇ ಕಾರಣಳೆಂದು ನಿಂದಿಸಿದ ಪತಿವಾಕ್ಯವಂತೂ ಆಕೆಯ ಮನಸ್ಸಿನಲ್ಲಿ ವಿಶೇಷ ರೋಷವನ್ನೆಬ್ಬಿಸಿತು. ಒಡನೆ ಕಣ್ಣು ಕೆರಳಿಸಿಕೊಂಡು, ಅತ್ತ ನೀಲಧ್ವಜನು ಕುದುರೆಯೊಂದಿಗೆ ಅರ್ಜುನನನ್ನು ಕಾಣಲು ಹೊರಡಲು, ಇತ್ತ ತಾನೂ ಅರಮನೆಯನ್ನು ಬಿಟ್ಟು, ಉನ್ಮುಖನೆಂಬ ತನ್ನ ತಮ್ಮನೆಡೆಗೆ ನಡೆದು ಆತನಿಗೆ ದುರ್ಬೋಧನೆ ಮಾಡತೊಡಗಿದಳು. ಉನ್ಮುಖನೂ ಅರ್ಜುನನ ಶೌರ್ಯವೀರ್ಯಗಳನ್ನು ಕಂಡು ಕೇಳಿದವನಾದುದರಿಂದ, ಅವಳ ದುರ್ಬೋಧನೆಗಳಿಗೆ ಒಳಗಾಗದೆ-ಎಲೈ ಜ್ವಾಲೆಯೇ, ಮಹಾ ಬಲಪರಾಕ್ರಮಿಯಾದ ಅರ್ಜುನನ ಸೇನೆಯನ್ನೆದುರಿಸಿ ಕಾದಿ ಬದುಕುವುದೆಂದರೇನು ? ಹಿಂದೆ ತನ್ನ ದುರ್ಬೋಧನೆಯಿಂದ ರಾವಣನನ್ನು ರಾಮನ ಮೇಲೆ ಕೆರಳಿಸಿ ರಾಕ್ಷಸರ ವಂಶವನ್ನೇ ನಾಶಗೊಳಿಸಿದ ಶೂರ್ಪನಖಿಯಂತೆ ನೀನೂ ನಿನ್ನ ಕರ್ಕಶ ಸ್ವಭಾವದಿಂದ, ನನ್ನ ಸಂಹಾರಕರವಾದ

ಈ ವಿಚಾರವನ್ನು ಇಲ್ಲಿಗೆ ತರಬೇಡ-ಹೊರಟುಹೋಗು' ಎಂದು ನುಡಿದು, ಜ್ವಾಲೆಯನ್ನು ತನ್ನ ಮನೆಯೊಳಕ್ಕೆ ಹೊಗಿಸದೆ ಅಟ್ಟಿಬಿಟ್ಟನು.

ಅತ್ತ ಪತಿಯಿಂದಲೂ ಇತ್ತ ತಮ್ಮನಿಂದಲೂ ನಿರಾಕರಿಸಲ್ಪಟ್ಟ ಜ್ವಾಲೆಯು ಮಹಾ ರೋಷಕ್ರಾಂತಳಾಗಿ,-'ಛೀ ನನ್ನೀ ಜನ್ಮವೇಕೆ? ನನಗೆ ಇಷ್ಟುಮಟ್ಟಿನ ಮನೋವ್ಯಥೆಯನ್ನುಂಟು ಮಾಡಿದ ಆ ನರನ ತಲೆಯನ್ನು ತೆಗೆಯಿಸಲು ಶಕ್ತಳಾಗದ ನಾನು ಜೀವಿಸಿ ತಾನೆ ಪ್ರಯೋಜನವೇನು' ಎಂದುಕೊಂಡಳು. ಸದಾಕಾಲವೂ, ಅರ್ಜುನನನ್ನು ಕೊಲ್ಲಿಸುವ ಉಪಾಯ ವೇನು ಎಂದೇ ಚಿಂತಿಸುತ್ತಾ ಅಲ್ಲಲ್ಲೀ ಸುತ್ತಾಡುತ್ತಾ, ಗಂಗಾನದಿಯ ಸಮೀಪಕ್ಕೆ ಬಂದಳು. ಕಲ್ಮಷ ಹೃದಯಳಾದ ಅವಳು, ಅಲ್ಲಿ ಏನುಮಾಡಿ ತನ್ನ ಮನೋರಥವನ್ನು ನೆರವೇರಿಸಿಕೊಳ್ಳಬಹುದೆಂದು ಚಿಂತಿಸಿ-ಆ ದೇವ ನದಿಯ ಬಳಿಯಲ್ಲಿ ನಿಂತು-'ಈ ಗಂಗೆಯು ನೀರು ನನ್ನ ಮೈಗೆ ಸೋಕದಂತೆ ನನ್ನನ್ನು ಆಚೆಯ ದಂಡೆಗೆ ಕರೆದೊಯ್ದು ಸೇರಿಸಬಲ್ಲ ಪ್ರವೀಣತೆಯುಳ್ಳ ಬೆಸ್ತರು ಯಾರಾದರೂ ಉಂಟೋ?' ಎಂದು ಪ್ರಶ್ನಿಸಿದಳು. ಆ ಮಾತು ಎಲ್ಲರಿಗೂ ಕೌತುಕವನ್ನುಂಟು ಮಾಡಿತು.—'ಎಲೈ ಸ್ತ್ರೀಯಳೇ, ಇದೇನೀ ವಿಚಿತ್ರವು! ಈ ದೇವನದಿಯ ಒಂದು ಬಿಂದು ಮಾತ್ರ ಜಲವು ಮೈಮೇಲೆ ಬಿದ್ದರೆ ಬ್ರಹ್ಮಹತ್ಯಾದಿ ಮಹಾಪಾತಕಗಳೂ ನಾಶವಾಗುವುವೆಂದು ಮೂರು ಲೋಕವೂ ಹೊಗಳುತ್ತಿರುವಲ್ಲ-ನೀನಾರು, ಗಂಗೆಯ ಜಲವು ನಿನ್ನ ಮೈಗೆ ಸೋಕದಂತೆ ಅದನ್ನು ದಾಟಬೇಕೆಂದು ಹೇಳುತ್ತಿರುವೆ! ಅಂತಹ ಅಪ ವಿತ್ರತೆಯು ಗಂಗಾಜಲಕ್ಕೆ ಹೇಗುಂಟಾಯಿತು!' ಎಂದು ಪ್ರಶ್ನಿಸಿದರು. ಅದನ್ನು ಕೇಳಿದ ಜ್ವಾಲೆಯು-'ಎಲೈ, ಗಂಗೆಯು ದೋಷಯುಕ್ತಳಾಗಿ ದ್ದಾಳೆ. ಅವಳಿಗೆ ಆಶೌಚ ದೋಷವಿದೆ. ಅದನ್ನು ನಾನು ನಿಮಗೆ ಹೇಳು ವುದಿಲ್ಲ-ಗಂಗೆಯೇ ನನಗೆ ಪ್ರತ್ಯಕ್ಷಳಾಗಿ ಬಂದರೆ ಅದರ ಕಾರಣವನ್ನು ಹೇಳು ತ್ತೇನೆ' ಎಂದಳು. ಗಂಗೆಗೆ ಪರಮಾಶ್ಚರ್ಯವಾಯಿತು. ವಿಷ್ಣುಪಾದೋ ದ್ಭವೆಯಾಗಿ, ಶಿವನ ಜಟಾಜೂಟದಲ್ಲಿ ನೆಲೆಸಿ ಮೂರು ಲೋಕದ ತಾಪ ತ್ರಯಗಳನ್ನೂ ನೀಗಿಸುವಲ್ಲಿ ಅದ್ವಿತೀಯೆಯೆನ್ನಿಸುವ ಗಂಗೆಯು ಪರಮ ಪರಿಶುದ್ಧಳಾದರೂ, ಲೋಕಾಪವಾದವು ಪ್ರಾಪ್ತವಾದಮೇಲೆ ಸಕಲ ವಿಧ ಗಳಿಂದಲೂ ಅದನ್ನು ನಿವಾರಿಸಿಕೊಳ್ಳತಕ್ಕುದೇ ಶ್ರೇಯಸ್ಕರವೆಂದು ಚಿಂ

ತಿಸಿ ನದೀಮಧ್ಯದಿಂದ ದಿವ್ಯ ಸ್ತ್ರೀರೂಪದಿಂದ ಹೊರಟು ಆಕೆಗೆ ಮೈ ದೋರಿ-'ಎಲೈ ಜ್ವಾಲೆಯೇ, ನಾನು ದೋಷದೂರಳೆಂದೂ ಸಕಲ ಪಾಪ ಪರಿಹಾರಕಳೆಂದೂ ವೇದಶಾಸ್ತ್ರಾದಿಗಳೂ ಉದ್ಘೋಷಿಸುತ್ತಿವೆ. ಹೀಗಿರುವಲ್ಲಿ, ನನ್ನನ್ನು ದೋಷಯುಕ್ತೆ ಎಂದೆಯಲ್ಲ, ಅದು ಹೇಗೆ? ನನ್ನಲ್ಲಿ ಯಾವ ಕಳಂಕವನ್ನು ಕಂಡು ನಿಂದಿಸಿದೆ? ಇದು ನಿನಗೆ ನ್ಯಾಯವೆ?' ಎಂದು ನುಡಿದಳು. ಆಗ ಜ್ವಾಲೆಯು,-'ತಾಯೇ, ಅದು ನಿಜವಿರಬಹುದು. ನೀನು ಪಾವನೆಯೆಂದು ಜಗತ್ತೇ ಹೊಗಳುತ್ತಿರಬಹುದು. ವೇದಶಾಸ್ತ್ರಾದಿಗಳು ನಿನ್ನ ಪಾವಿತ್ರ್ಯತೆಯನ್ನು ಹಲವು ಬಗೆಯಿಂದ ವರ್ಣಿಸುತ್ತಿರಬಹುದು. ಆದರೆ ಪುತ್ರಸಂತಾನವಿಲ್ಲದ ಬಂಜೆಯ ಅಂಗಸ್ಪರ್ಶವು ಪಾಪಕಾರಿಯೆಂದು ಸುಭಾಷಿತ ವಾಕ್ಯವುಂಟಲ್ಲವೆ? ಆ ವಚನದಂತೆ, ಸಂತಾನವಿಹೀನಳಾದ ನಿನ್ನನ್ನು ಮುಟ್ಟಲಾಗದೆಂದು ಯೋಚಿಸಿದೆನು' ಎಂದಳು.

ಜ್ವಾಲೆಯಾಡಿದ ಆ ಕರ್ಕಶ ವಾಕ್ಯವು ಕಿವಿಗೆ ಬಿದ್ದೊಡನೆಯೇ, ದೇವಗಂಗೆಯು ಕೆರಳಿ-'ಎಲೆ ಪಾಪಾತ್ಮಳೆ, ಏನೆಂದು ನುಡಿಯುತ್ತಿರುವೆ! ರಾಜಕುಲದಲ್ಲಿ ಉದ್ಭವನೆನ್ನಿಸಿಕೊಂಡು, ದೇವಸಮ್ಮಾನನೆಂಬ ಕೀರ್ತಿಗೆ ಪಾತ್ರನಾಗಿ, ಇಚ್ಛಾಮರಣಿಯಾಗಿರುವ ನನ್ನ ಮಗ ಭೀಷ್ಮನು ರಾಜಕುಲವನ್ನೇ ಬೆಳಗುತ್ತಿರುವಲ್ಲ, ನನ್ನನ್ನು ಪುತ್ರಹೀನಳೆಂಬೆಯಾ?' ಎಂದು ಮಹಾರೋಷದಿಂದ ಹಲ್ಲುಗಿದಳು. ಆಗಲೂ ಜ್ವಾಲೆಯು ಬೆದರದೆ, ಹಿಂಜರಿಯದೆ, ಹತಾಶಳಾಗದೆ,-'ಜಾಹ್ನವೀ, ನೀನು ಹೇಳುವ ನುಡಿಯು ನಿಜವಿರಬಹುದು. ನಿನಗೆ ಉದಯಿಸಿದ ಎಂಟು ಮಂದಿಯಲ್ಲಿ ಏಳು ಮಂದಿಯು ಅಳಿದು ಅವನೊಬ್ಬನೇ ಉಳಿದನೆಂಬುದೂ, ಅವನು ಇಚ್ಛಾಮರಣಿ, ಆಜನ್ಮ ಬ್ರಹ್ಮಚಾರಿ ಎಂಬ ಸಂಗತಿಗಳೂ ತಿಳಿಯುವುವು. ಆದರೇನು! ದಾಯಾದ್ಯರ ದ್ವೇಷದಿಂದ ಏರ್ಪಟ್ಟ ಭಾರತ ಮಹಾಯುದ್ಧದಲ್ಲಿ ಅರ್ಜುನನು ನಿನ್ನಾ ಮಗನನ್ನು ಮೋಸದಿಂದ ಬಾಣಪ್ರಯೋಗಮಾಡಿ ಕೊಂದನು. ಹಾಗಲ್ಲದಿದ್ದರೆ, ಇಚ್ಛಾಮರಣಿಯೂ ಧನುರ್ಧರಾಗ್ರೇಸರನೂ ಆದ ಆತನನ್ನು ಜಯಿಸುವ ಧೀರನು ಜಗತ್ತಿನಲ್ಲಿ ಯಾವನಿದ್ದನು' ಎಂದಳು. ಹೃದಯ ವಿಭೇದಕವಾದ ಆ ನುಡಿಯು ಜಾಹ್ನವಿಯ ಕರ್ಣಗಳೊಳಗೆ ಶೂಲಘಾತದಂತೆ ಪ್ರವೇಶಿಸಿತು. ಸೀಸವನ್ನು ಕಾಯಿಸಿಬಿಟ್ಟಂತೆ ಮಹಾ ಕರ್ಕಶ

ಮೆನ್ನಿಸಿದ ಆ ನುಡಿಗಳನ್ನು ಕೇಳಿ ಮನನೊಂದು ಗಂಗೆಯು-'ಅಕ್ಕಟಾ, ನನ್ನ ಮುದ್ದು ಮಗನನ್ನು ಅರ್ಜುನನು ಮೋಸದಿಂದ ಕೊಂದನೆ? ಇದು ನಿಜವೆ? ಹಾಗಿದ್ದರೆ, ಆ ನೀಚನಾದ ಅರ್ಜುನನ ತಲೆಯನ್ನೂ, ಆತನ ಮಗನು ಇನ್ನು ಆರು ತಿಂಗಳೊಳಗಾಗಿ ಯುದ್ಧದಲ್ಲಿ ಕೊಚ್ಚಿ ಕೆಡಹಲಿ' ಎಂದು ದಕ್ಷಿಣ ಹಸ್ತವನ್ನೆತ್ತಿ ಶಾಪವಾಕ್ಯವನ್ನು ನುಡಿದು, ಒಡನೆ ಪ್ರವಾಹ ಮಧ್ಯದಲ್ಲಿ ಪ್ರವೇಶಿಸಿ ಅದೃಶ್ಯಳಾದಳು.

ದೇವಗಂಗೆಗೆ ಕೋಪಬರಿಸಿ ಆಕೆಯಿಂದ ಮೇಲ್ಕಂಡಂತೆ ಅರ್ಜುನನ ಮರಣಕ್ಕಾಗಿ, ಘೋರ ಶಾಪವನ್ನು ಕೊಡಿಸಿದಳಾದರೂ, ಜ್ವಾಲೆಗೆ ಮನಸ್ಸು ಶಾಂತವಾಗಲಿಲ್ಲ. ಸ್ತ್ರೀಯರ ಛಲವೆಂಬುದು ಇನ್ನೆಷ್ಟು ಕಠಿಣವಾದುದೋ ತಿಳಿಯಲು ಯಾರಿಂದ ಸಾಧ್ಯ? ಭಾಗೀರಥಿಯ ಶಾಪಮಾತ್ರವೇ ಕಾರ್ಯಕಾರಿಯಾಗದು, ನಾನೂ ಪ್ರತ್ಯಕ್ಷವಾಗಿ ಸಾಧ್ಯವಿದ್ದಷ್ಟು ಪ್ರಯತ್ನಿಸುವೆನು-ಎಂದುಕೊಂಡು, ಅದೇ ಜಾಹ್ನವೀ ನದೀತೀರದಲ್ಲೇ ಅಗ್ನಿಪ್ರವೇಶ ಮಾಡಿ, ಒಂದು ಅಸ್ತ್ರಸ್ವರೂಪಹೊಂದಿ ಅರ್ಜುನನ ಮಗನಾದ ಬಭ್ರುವಾಹನನ ಮೂಡಿಗೆಯಲ್ಲಿ ಸೇರಿ ಆತನ ಪ್ರಾಣಾಪಹರಣಕ್ಕಾಗಿ ಸಮಯ ಸಾಧನೆ ಮಾಡಿಕೊಂಡಿದ್ದಳು.



## ಅಧ್ಯಾಯ ೩. 'ವೈಶ್ಯ ಸಂಭವನೇ?'

ಪಾಂಡವರ ಯಜ್ಞಾಶ್ವವು ನೀಲಧ್ವಜನ ರಾಜ್ಯದಿಂದ ದಕ್ಷಿಣಾಭಿಮುಖವಾಗಿ ಹೊರಟು ಎಂದಿನಂತೆ ಪ್ರಯಾಣಮಾಡಿತು. ಅದರ ಪಾಲನೆಗೆಂದು ಹೊರಟ ಅರ್ಜುನನ ಚತುರಂಗ ಸೈನ್ಯವೂ ಅದು ನಡೆದ ಮಾರ್ಗವನ್ನನುಸರಿಸಿ ಹೊರಟಿತು. ಕುದುರೆಯು ಅನೇಕ ಗಿರಿವನಗಳನ್ನೂ, ಗ್ರಾಮ-ನಗರಗಳನ್ನೂ ದಾಟಿ, ಮಾರ್ಗ ಕ್ರಮಣಮಾಡಿತು. ಹಂಸಧ್ವಜನೆಂಬ ಪರಾಕ್ರಮಿ ರಾಜನು ಅದನ್ನು ಕಟ್ಟಲು, ಅಲ್ಲಿ ಅರ್ಜುನನಿಗೂ ಆತನ ಮಕ್ಕಳಾದ ಸುಧನ್ವ ಸುರಥರೆಂಬ ವೀರಾದಿವೀರರಿಗೂ ಭಯಂಕರ ಸಂಗ್ರಾ

ಮವು ಕೈಗಟ್ಟಿತು. ಸುಧನ್ವನೊಂದಿಗೆ ಯುದ್ಧವು ಅರ್ಜುನನಿಗೆ ಪ್ರಯಾಸ ವಾಗಿ ತೋರಲು ,ಶ್ರೀಕೃಷ್ಣಸ್ವಾಮಿಯು ಪ್ರತ್ಯಕ್ಷನಾಗಿ ಬಂದು, ಪ್ರತಿಜ್ಞಾ ಪೂರ್ವಕವಾಗಿ ಅರ್ಜುನನಿಂದ ಸುಧನ್ವನನ್ನು ಕೊಲ್ಲಿಸಿ, ಸುರಥನನ್ನು ವಿರಥ ನನ್ನಾಗಿಸಿದನು. ಹಂಸಧ್ವಜನು ಪುತ್ರಮರಣದಿಂದ ಕಡುನೊಂದು, ಅರ್ಜು ನನಿಗೆ ಪಾದಾಕ್ರಾಂತನಾಗಿ ಕಪ್ಪಕಾಣಿಕೆಗಳನ್ನಿತ್ತು, ಕುದುರೆಯ ಅಂಗ ರಕ್ಷಕ ಸೇನೆಯೊಂದಿಗೆ ತಾನೂ ಹೊರಟು ಪ್ರಯಾಣವಾದನು. ಕುದುರೆಯು ಮುಂದೆ ಮಾರ್ಗಕ್ರಮಣ ಮಾಡುತ್ತಾ ಒಂದು ಕಾಡನ್ನು ಪ್ರವೇಶಿಸಿ ಹೆಣ್ಣು ಕುದುರೆಯಾಗಿ, ತರುವಾಯ ಅಲ್ಲಿಯ ಕೊಳದ ಜಲಪಾನಮಾಡಿ ಹುಲಿ ಯಾಗಿ ಮಾರ್ಪಟ್ಟಿತು. ಈ ಪರಮಾಶ್ಚರ್ಯಕರವಾದ ಪರಿವರ್ತನೆಯನ್ನು ಕಂಡು, ಅರ್ಜುನನು ಮುಂದೇನು ಗತಿಯೆಂದು ಭೀತಿಗೊಂಡು, ಸಕಲಾಪ ನ್ನಿವಾರಕನಾದ ಶ್ರೀಕೃಷ್ಣಸ್ವಾಮಿಯ ದಿವ್ಯಪಾದ ಕಮಲಗಳ ಧ್ಯಾನಮಾಡಿ, ಶರಣಾಗತಿಯನ್ನು ಬೇಡಲು, ಅಶ್ವರಾಜವು ಎಂದಿನಂತೆ ಸ್ವಸ್ವರೂಪದಿಂದ ಪ್ರಕಾಶಿಸಿತು. ಅದನ್ನು ಕಂಡು, ಸಕಲ ಪರಿವಾರವೂ-ಪರಮಾನಂದ ಗೊಂಡು, ಮಂಗಳ ವಾದ್ಯಗಳನ್ನು ನುಡಿಸಿ, ಕೋಲಾಹಲ ಧ್ವನಿಯಿಂದ ಮಹದುತ್ಸವಗಳನ್ನು ನಡೆಯಿಸಿದರು.

ಅಶ್ವವು ನಿಜರೂಪವನ್ನು ಹೊಂದಿದ ತರುವಾಯ ಪ್ರಯಾಣ ಮಾಡಿ ಕೊಂಡು ಪ್ರಮೀಳೆಯೆಂಬ ಸ್ತ್ರೀಶಿರೋಮಣಿಯಿಂದ ಪಾಲಿತವಾದ ಸ್ತ್ರೀ ರಾಜ್ಯವನ್ನು ಹೊಕ್ಕಿತು. ಪ್ರಮೀಳೆಯ ಸೇವಿಕೆಯರು ಅದರ ನೆತ್ತಿಯಲ್ಲಿ ಮೆರೆಯುತ್ತಿದ್ದ ಸುವರ್ಣಲೇಖನವನ್ನು ನೋಡಿ, ತಮ್ಮ ರಾಣಿಗೆ ಬಿನ್ನೈಸಿ ಆಕೆಯ ಆಜ್ಞೆಯಿಂದ ಅದನ್ನು ಹಿಡಿದು ಲಾಯದಲ್ಲಿ ಕಟ್ಟಿದರು. ವೀರ ನಾರೀಮಣಿಯಾದ ಪ್ರಮೀಳೆಯು ಭದ್ರಪೀಠದಿಂದಿಳಿದು ವೀರಕಾಚೆ ಯನ್ನು ಬಿಗಿದು, ಶಸ್ತ್ರಧಾರಣಮಾಡಿ ಯುದ್ಧರಂಗಕ್ಕೆ ನಡೆದಳು. ಅರ್ಜು ನನು ಮದನಾರಿಯೊಂದಿಗೆ ಮಲ್ಲಯುದ್ಧಮಾಡಿ ಪಾಶುಪತಾಸ್ತ್ರವನ್ನು ಪಡೆದ ವೀರಾಗ್ರೇಸರನಾದ ತಾನು ಅಬಲೆಯೊಂದಿಗೆ ಸರಿಸಮವಾಗಿ ನಿಂತು ಯುದ್ಧ ಮಾಡಬೇಕಾಗಿ ಬಂದ ಪರಿಸ್ಥಿತಿಯನ್ನು ಕುರಿತು ಸಂಕೋಚಪಟ್ಟನು. ಆದರೆ, ಆಕೆಯು ಧನಂಜಯನಿಗೆ ಪ್ರತಿದ್ವಂದ್ವಿಯಾಗಿ ನಿಂತು,-"ನೀನು ನನ್ನನ್ನು ವರಿಸಿ ಮದುವೆಯಾಗುವೆಯಾದರೆ, ನನ್ನ ತನುಮನ ಧನಗಳ

ನ್ನೂ ರಾಜ್ಯೈಶ್ವರ್ಯಗಳನ್ನೂ ನಿನ್ನಡಿಗಳಲ್ಲಿ ಒಪ್ಪಿಸಿ ನಿನ್ನ ಭಾರ್ಯೆ ಯಾಗುವೆನು. ಹಾಗಲ್ಲದಿದ್ದರೆ, ಯುದ್ಧದಲ್ಲಿ ನನ್ನನ್ನು ಜಯಿಸಿಯೇ ಅಶ್ವ ವನ್ನು ಬಿಡಿಸಿಕೊಳ್ಳಬಹುದಲ್ಲದೆ ಹಾಗೆಯೇ ಬಿಡಲಾಗುವುದಿಲ್ಲ' ವೆಂದು ತಿಳಿಸಿಬಿಟ್ಟಳು. ಅರ್ಜುನನು ತನ್ನೊಂದಿಗೆ ಯುದ್ಧಕ್ಕೆ ತೊಡಗಿ ಅನ್ಯಾಯ ವಾಗಿ ಪ್ರಾಣಕೊಡಬೇಡವೆಂದು ಎಷ್ಟೋ ಬಗೆಯಿಂದ ನೀತಿ ಹೇಳಿದನು. ಆದರೆ ಅದರಿಂದ ಏನೂ ಪ್ರಯೋಜನವಾಗಲಿಲ್ಲ. ಪ್ರಮೀಳೆಯು ಸಾಮ ವಾಕ್ಯಗಳಿಗೆ ವಶಳಾಗಲಿಲ್ಲ. ಯುದ್ಧವು ಅನಿವಾರ್ಯವೆನ್ನಿಸಿತು. ಪ್ರಮೀ ಳೆಯೇ, ಧನುಸ್ಸಿನಲ್ಲಿ ಮಾರ್ಗಣವನ್ನು ಹೂಡಿ ಅರ್ಜುನನ ಮೇಲೆ ಪ್ರ ಯೋಗಿಸಿದಳು. ಇನ್ನು ತಡೆದು ಸುಮ್ಮನಿರುವುದು ಆತನಿಗೆ ಅಸಾಧ್ಯ ವೆನ್ನಿಸಿತು. ಒಡನೆ ಆತನು ಬೇಸರಗೊಂಡು, ಗಾಂಡೀವದಲ್ಲಿ ದಿವ್ಯ ಶರ ವನ್ನು ಸಂಧಿಸಿ, ಪ್ರಮೀಳೆಯಮೇಲೆ ಪ್ರಯೋಗಿಸಲುದ್ಯುಕ್ತನಾದನು. ಅಷ್ಟರಲ್ಲಿ-'ಎಲೈ ಪಾರ್ಥನೆ, ಹೆಂಗೂಸಿಗೆ ಹೇಸದೆ ನೀನೀಗ ದಿವ್ಯಮಾರ್ಗಣ ವನ್ನು ಧನುಸ್ಸಿನಲ್ಲಿ ಹೂಡಿ ನಿಂತಿರುವೆ. ಆದರೆ ನೀನು ಬೇಸರಗೊಳ್ಳದೆ, ಅಯುತ ಸಂವತ್ಸರಕಾಲ ಇವಳೊಂದಿಗೆ ಹೋರಾಡಿದರೂ ಜಯಿಸುವುದು ಶಕ್ಯವಿಲ್ಲವೆಂದು ತಿಳಿ. ಆದುದರಿಂದ ಛಲವನ್ನು ಬಿಟ್ಟು ಈಕೆಯನ್ನು ವರಿಸು. ಇದರಿಂದ ಮುಂದೆ ನಿನಗೆ ಲೇಸಾಗುವುದು' ಎಂದು ಆ ಮಹಾ ಸೈನ್ಯದ ಎಲ್ಲಾ ಜನರೂ ಕೇಳುವಂತೆ ಆಕಾಶವಾಣಿಯು ಮಹಾಧ್ವನಿ ಯಿಂದ ನುಡಿದಂತಾಯಿತು.

ಅರ್ಜುನನು, ಆಶ್ಚರ್ಯಕರವಾದ ಆ ಮಹಾಧ್ವನಿಯನ್ನು ಕೇಳಿ, ಮುಂದೆ ಯುದ್ಧಕಾರ್ಯವನ್ನು ಸಾಕುಮಾಡಿ, ಆಪ್ತರೊಂದಿಗೆ ಯೋಚಿಸಿ, ಆಕೆಯನ್ನು ತನ್ನೆಡೆಗೆ ಬರಮಾಡಿಕೊಂಡು-'ಪ್ರಮೀಳೆ, ಈಗ ಅಣ್ಣಯ್ಯ ಧರ್ಮಜನು ಯಜ್ಞದೀಕ್ಷಿತನಾಗಿರುವನು. ಈ ಒಂದು ವರ್ಷಕಾಲ ನಾನೂ ಸಹ ಸ್ತ್ರೀ ಸಹವಾಸ ಮಾಡುವುದಿಲ್ಲವೆಂದು ಪ್ರತಿಜ್ಞೆಮಾಡಿದ್ದೇನೆ. ಆದು ದರಿಂದ, ನೀನು ಯಜ್ಞಕಾಲಕ್ಕೆ ಹಸ್ತಿನಾವತಿಗೆ ಬಂದು ಯುಧಿಷ್ಠಿರನನ್ನು ಕಾಣು. ಯಜ್ಞಕಾರ್ಯವು ಮುಗಿದ ತರುವಾಯ ನಿನ್ನನ್ನು ವಿವಾಹ ವಾಗುವೆನು' ಎಂದು ಆಕೆಯನ್ನು ಒಪ್ಪಿಸಿದನು. ಪ್ರಮೀಳೆಯು, ಕಡು ಸಂತೋಷದಿಂದ ಆ ಮಾತಿಗೆ ಒಪ್ಪಿ, ಅರ್ಜುನನಿಂದ ಕೈಮೇಲೆ ಕೈಹಾಕಿಸಿ

ಕೊಂಡು, ತನ್ನ ರಾಜಧಾನಿಯಿಂದ ಸಕಲವಿಧ ರತ್ನಗಳನ್ನೂ ಇತರ ಅಮೌಲ್ಯ ವಸ್ತ್ರಾಭರಣಗಳನ್ನೂ ತರಿಸಿ ಕಾಣಿಕೆಯಾನ್ನರ್ಪಿಸಿ, ಲಾಯದಿಂದ ಯಾಗದ ಕುದುರೆಯನ್ನೂ ತರಿಸಿ ಅರ್ಜುನನಿಗೊಪ್ಪಿಸಿ, ತಾನು ಹಸ್ತಿನಾವತಿಗೆ ಪ್ರಯಾಣ ಸನ್ನದ್ಧಳಾದಳು. ಅರ್ಜುನಾದಿಗಳು ಹಯದೊಡನೆ ಮುಂದಕ್ಕೆ ಪ್ರಯಾಣ ಮಾಡಿದರು.

ಮಾರ್ಗದಲ್ಲಿ ಭೀಷಣನೆಂಬ ರಕ್ಕಸನು ಯಜ್ಞಾಶ್ವವನ್ನು ಕಂಡು ಕಟ್ಟಿ ತನ್ನೊಡನೆ ಮೂರು ಕೋಟಿ ದಾನವ ಸೇನೆಯನ್ನು ತಂದು ಅರ್ಜುನನೊಂದಿಗೆ ಯುದ್ಧಮಾಡಿದನು. ಧನಂಜಯನು ದಿವ್ಯಾಸ್ತ್ರಗಳ ಪ್ರಯೋಗದಿಂದ ಆ ರಕ್ಕಸರ ದಳವನ್ನೆಲ್ಲಾ ಧ್ವಂಸಗೊಳಿಸಿ ಓಡಿಸಿ, ಕುದುರೆಯನ್ನು ಬಿಡಿಸಿಕೊಂಡನು. ಮುಂದೆ ದೇಶ ದೇಶಗಳನ್ನೂ ಗಿರಿವನ ನದಿಗಳನ್ನೂ ಕಳೆದು ಆ ಅಶ್ವರಾಜವು ಒಂದು ಮಹಾ ಪಟ್ಟಣದ ಬಹಿರುದ್ಯಾನದ ಬಳಿಗೆ ಹೋಗಿ ಆಯಾಸಗೊಂಡಿದ್ದುದರಿಂದ ಅಲ್ಲಿ ನಿಂತಿತು. ಅದನ್ನು ಅನುಸರಿಸಿಕೊಂಡು ನಡೆದ ಅರ್ಜುನನ ಸೇನೆಯೂ ಅಲ್ಲೇ ಸಮೀಪದಲ್ಲೇ ಬೀಡು ಬಿಟ್ಟಿತು. ಪಾರ್ಥನು ಬಲವಾದ ಕೋಟೆ ಕೊತ್ತಲುಗಳಿಂದಲೂ ಗಗನ ಮುಟ್ಟುವಂತೆ ಬೆಳೆದ ಮಹೋನ್ನತ ಕಟ್ಟಡಗಳಿಂದಲೂ, ಬಹು ವೈಭವ ಸಂಪನ್ನವಾಗಿ ಕಂಗೊಳಿಸುತ್ತಿದ್ದ ಆ ನಗರವನ್ನು ಕಂಡು–" ಈ ನಗರವು ಯಾರ ಪಾಲನೆಗೆ ಒಳಪಟ್ಟಿದು ಇಷ್ಟು ಉತ್ತಮಸ್ಥಿತಿಯಲ್ಲಿ ರಾಜ್ಯಾಧಿಪತ್ಯ ಮಾಡುತ್ತಿರುವ ಈತನು ಬಹು ಸಾಹಸಿ ಇರಬಹುದು. ಈತನು ಯಜ್ಞಾಶ್ವವನ್ನು ಕಟ್ಟಬಹುದೆ?" ಎಂದು ನುಡಿದನು. ಆ ಮಾತಿಗೆ ಸಮೀಪದಲ್ಲೇ ಇದ್ದ ಹಂಸಧ್ವಜರಾಜನು,–"ಪಾರ್ಥ, ಸಂದೇಹಗೊಳ್ಳಲೇಕೆ? ಈ ನಗರಾಧಿಪನು ಯಾರೆಂದು ತಿಳಿದಿರುವೆ? ಮಹಾಶೌರ್ಯ ಪ್ರತಾಪನಿಧಿಯಾದ ಬಭ್ರುವಾಹನನೆಂಬ ಕ್ಷತ್ರಿಯ ವೀರನು, ಸುತ್ತುಮುತ್ತಲಿನ ಸಮಸ್ತ ನರೇಶ್ವರರನ್ನೂ ತನ್ನಾಜ್ಞೆಗೆ ಒಳಪಡಿಸಿಕೊಂಡು ಕಪ್ಪ ಕಾಣಿಕೆಗಳನ್ನು ತರಿಸುತ್ತಿರುವನು. ನಾವುಗಳೆಲ್ಲರೂ, ಯಾವ ಹೊತ್ತಿಗೆ ಪ್ರಭುಚಿತ್ತವು ಹೇಗೋ ಎಂದಂಜಿ ಧನಕನಕಾದಿಗಳನ್ನು ಒಪ್ಪಿಸಿ ವಿಧೇಯರಾಗಿ ನಡೆದುಕೊಳ್ಳುತ್ತಿರುವೆವು. ಈತನಿಗೆ ಸುಬುದ್ಧಿಯೆಂಬೊಬ್ಬ ಮಂತ್ರಿಶೇಖರನಿರುವನು. ಆತನೇ, ದೇಶದ ಸುಸ್ಥಿತಿಗೆ ಮುಖ್ಯಕಾರಣನೆನ್ನ

ಬಹುದು. ಸುಬುದ್ಧಿ ಪಾಲಿತವಾದ ಈ ದೇಶದ ವರ್ಣಾಶ್ರಮಾಚಾರಗಳಲ್ಲಿ ಎಂದಿಗೂ ವ್ಯತ್ಯಾಸವುಂಟಾದುದಿಲ್ಲ. ನೀತಿಪಥವನ್ನು ತೊರೆದು ಜನರು ನಡೆದುಕೊಂಡಿಲ್ಲ. ರಾಜಪ್ರಜೆಗಳಲ್ಲೂ, ಪತಿಪತ್ನಿಯರಲ್ಲೂ, ತಂದೆಮಕ್ಕಳಲ್ಲೂ ಇದ್ದ ಪ್ರೇಮ ಸೌಹಾರ್ದಭಾವಗಳಿಗೆ ಎಂದಿಗೂ ಕೊರತೆಯುಂಟಾದುದಿಲ್ಲ. ಈ ರಾಜ್ಯದಲ್ಲಿ ಧರ್ಮವು ನಾಲ್ಕುಪಾದಗಳಿಂದಲೂ ನಡೆಯುತ್ತಿರುವುದು. ಬಭ್ರುವಾಹನ ನರೇಶ್ವರನು ಮಹಾ ಸತ್ಯಸಂಧನು. ಏಕಪತ್ನೀವ್ರತಸ್ಥನು. ವಿಷ್ಣುಭಕ್ತಾಗ್ರೇಸರನು. ದಾನಿ, ಶಸ್ತ್ರಾಸ್ತ್ರ ಪ್ರಯೋಗಗಳಲ್ಲಿ ಅದ್ವಿತೀಯ ಪಂಡಿತನು. ಶೌರ್ಯ ಪ್ರತಾಪನಿಧಿ. ಈ ನಗರ ನಿವಾಸಿಗಳು ಸದಾಚಾರ ಸಂಪನ್ನರು. ವೇದ ಶಾಸ್ತ್ರಜ್ಞರು, ಸುಳ್ಳು, ಕಳ್ಳತನ, ಮೋಸ-ವ್ಯಭಿಚಾರಾದಿ ದುರ್ವೃತ್ತಿಗಳು ಈ ನಗರದಲ್ಲಿ ಪ್ರವೇಶಗೊಂಡುದಿಲ್ಲ. ಪಾರ್ಥ ಕೇಳು, ನಾನು ಹೇಳುತ್ತಿರುವುದನ್ನು ಅತಿಶಯೋಕ್ತಿಯೆಂದು ತಿಳಿಯಬೇಡ. ರಮಾವಲ್ಲಭನು, ಭಕ್ತನಾದ ಈತನಲ್ಲಿ ಪರಮಾನುಗ್ರಹ ಮಾಡಿ, ಇದನ್ನು ತನ್ನ ರಾಜಧಾನಿಯಾದ ವೈಕುಂಠಕ್ಕೆ ಎರಡನೆಯದೆಂದು ತಿಳಿದು ಸದಾ ಇಲ್ಲಿ ವಾಸಿಸುತ್ತಿರುವನು. ಈತನ ರಾಜಧಾನಿಯೊಳಕ್ಕೆ ಕುದುರೆಯು ಹೊಕ್ಕುಬಿಟ್ಟಿತು. ಬಭ್ರುವಾಹನನು ಕುದುರೆಯನ್ನು ಕಟ್ಟಿಸಿದಿರನು. ಅದನ್ನು ಬಿಡಿಸಿಕೊಳ್ಳುವುದು ಸುಲಭಸಾಧ್ಯದ ಮಾತಲ್ಲ. ಭಗವದನುಗ್ರಹವು ಹೇಗಿದೆಯೋ ನೋಡಬೇಕು' ಎಂದು ಪ್ರತ್ಯುತ್ತರ ಕೊಟ್ಟನು.

ಅರ್ಜುನನು ಹಂಸಧ್ವಜನ ಈ ಮಾತುಗಳನ್ನು ಕೇಳುತ್ತಿದ್ದಾಗ, ಇತ್ತ ಅನೇಕ ಅಪಶಕುನಗಳು ಸಂಭವಿಸಿದುವು. ಒಂದು ಹದ್ದು ಪಾರ್ಥನ ಕಿರೀಟಾಗ್ರದಲ್ಲಿ ತನ್ನ ಪಾದವನ್ನಿಟ್ಟು ನಿಂತಿತು. ಸುತ್ತಲೂ ನರಿನಾಯಿಗಳು ಅಪಸ್ವರದಿಂದ ಕೂಗಿಕೊಂಡವು. ಸೇನೆಯ ಆನೆಕುದುರೆಗಳ ಕಣ್ಣುಗಳಲ್ಲಿ ದುಃಖಜಲವು ಹರಿಯಿತು. ಈ ದುಶ್ಶಕುನಗಳನ್ನು ಕಂಡು ಸಕಲರೂ ಇಲ್ಲಿ ಏನುತ್ಪಾತ ಸಂಭವಿಸಲಿರುವುದೋ ಎಂದುಕೊಳ್ಳುತ್ತಿದ್ದರು. ಅತ್ತ ಬಭ್ರುವಾಹನನು, ಯಜ್ಞಾಶ್ವವು ತನ್ನ ಪೊಳಲನ್ನು ಹೊಕ್ಕಿದೆಯೆಂಬ ವೃತ್ತಾಂತವನ್ನು ಕೇಳಿ, ಅದನ್ನು ತನ್ನ ಬಳಿಗೆ ತರಿಸಿಕೊಂಡು-ಅದರ ನೆತ್ತಿ

ಯಲ್ಲಿದ್ದ ಸುವರ್ಣ ಲೇಖನವನ್ನು ಓದಿ ನೋಡಿಕೊಂಡು ಬಾಯುದಲ್ಲಿ ಕಟ್ಟ ಹೇಳಿದನು.

ಪರರಾಜರ ಯಜ್ಞಾಶ್ವವನ್ನು ಕಟ್ಟಿಕೊಂಡ ತರುವಾಯ ಸುಮ್ಮ ನಿರಲಾದೀತೆ? ಅದನ್ನು ಅನುಸರಿಸಿ ಕಾವಲಿಗೆಂದು ಬಂದಿರುವ ತ್ರಿಲೋಕ ವೀರ ನರನೊಂದಿಗೆ ಪ್ರತಿದ್ವಂದ್ವಿಯಾಗಿ ತನ್ನ ಸೇನೆಯು ಸೆಣೆಸಬೇಕಾಗು ವುದೆಂದು ತಿಳಿದು, ಆಪ್ತಾಲೋಚನೆಗಾಗಿ ಆ ರಾತ್ರಿಯೇ ತನ್ನ ಮಂತ್ರಿ ಸಾಮಂತರು ಸರದಾರರು ಹಿತಚಿಂತಕರು ಮುಂತಾದವರಿಂದ ಕೂಡಿದ ಒಂದು ಒಡ್ಡೋಲಗವನ್ನು ನೆರೆಯಿಸಿ, ಅದರಲ್ಲಿ ಕುಳಿತು, ಮುಂದೆ ಮಾಡ ಬೇಕಾದ ಕಾರ್ಯವನ್ನು ಕುರಿತು ಯೋಚಿಸಿದನು. ಸಮಸ್ತ ಯೋಧ ರನ್ನೂ ಕುರಿತು-'ಎಲೈ ಮಣಿಪುರದ ರಕ್ಷಕರಾದ ಬಾಹುಬಲ ಸಂಪನ್ನರಾದ ಧೀರೋದಾತ್ತ ನಾಯಕರೇ, ಇಂದು ನಾವು ಎದುರಿಸಲುಳ್ಳುದು, ಯಾವು ದೋ ಅಸಾಮರ್ಥ್ಯಯುವಾದೊಂದು ಕ್ಷುದ್ರಸೈನ್ಯವಲ್ಲ. ಭಾರತ ಮಹಾ ಯುದ್ಧದಲ್ಲಿ ಭೀಷ್ಮದ್ರೋಣಾದಿ ವೀರರನ್ನು ಹಣ್ಣುಮಾಡಿದ ಪಾರ್ಥನ ಮಹಾ ಪ್ರತಿಭಾ ಸಂಪನ್ನವಾದ ಸೈನ್ಯವನ್ನೆಂದು ತಿಳಿಯಿರಿ. ನಿಮ್ಮಲ್ಲಿ ನಾಳಿನ ಯುದ್ಧಕ್ಕೆ ಯಾವನೂ ಹಿಂದುಳಿಯಬಾರದು. ಯುದ್ಧಕಾಲದಲ್ಲಿ ಹಿಂಜರಿಯದೆ ಪ್ರತಿಯೊಬ್ಬನೂ ಸರ್ವಶಕ್ತಿಯನ್ನೂ ಉಪಯೋಗಿಸಿ ಕಾದಿ ಮಣಿಪುರದ ಗೌರವವನ್ನು ಉಳಿಸಬೇಕಾದುದು ಒಬ್ಬೊಬ್ಬನ ಮೇಲೂ ಹೊತ್ತ ಭಾರವೆಂಬುದನ್ನು ಮರೆಯದಿರಿ' ಎಂದು ನುಡಿದು, ಅಂದಿನ ರಾತ್ರಿಯ ಒಡ್ಡೋಲಗವನ್ನು ಸಮಾಪ್ತಗೊಳಿಸಿದನು.

ಆ ದಿನ ರಾತ್ರಿಯ ಈ ಸಭೆಯಲ್ಲಿ ನಡೆದ ವಿಚಾರವೆಲ್ಲವೂ ಅಂತಃ ಪುರಕ್ಕೆ ತಿಳಿಯಿತು. ಬಭ್ರುವಾಹನನ ತಾಯಿಯಾದ ಚಿತ್ರಾಂಗದೆಯು, ಯಜ್ಞಾಶ್ವದ ರಕ್ಷಣೆಗಾಗಿ ಪಾಂಡವ ಮಧ್ಯನಾದ ಪಾರ್ಥನೇ ಬಂದಿದ್ದಾ ನೆಂಬ ವಾರ್ತೆಯನ್ನು ಕೇಳಿ ಪರಮ ಸಂಭ್ರಮದಿಂದ, ಲೇಶವೂ ಕಾಲ ತಾಮಸವಾಡದೆ ಸಭೆಮನೆಗೆ ಬಂದುಬಿಟ್ಟಳು. ಬಭ್ರುವಾಹನನು ಭದ್ರಾ ಸನದಿಂದ ಒಡನೆ ಎದ್ದು, ಆ ವೇಳೆಗೆ ಬಳಿಗೆ ಬಂದಿದ್ದ ಮಾತೆಯ ಪಾದ ಗಳಿಗೆ ಅಭಿನಮಿಸಿ, ಆಕೆಯನ್ನು ತನ್ನ ಸಿಂಹಪೀಠದಲ್ಲಿ ಕೂರಿಸಿ ತಾನು

ಪಾದಗಳ ಬಳಿಯಲ್ಲಿ ಕುಳಿತು, ಅಂತಹ ಅವೇಳೆಯಲ್ಲಿ ಆಕಸ್ಮಿಕವಾಗಿ ಬಂದ ಹದನೇನು ಎಂದು ವಿಚಾರಿಸಿದನು.

ಚಿತ್ರಾಂಗದೆಯು-'ಮಗನೇ, ಏನು ಕೆಲಸ ಮಾಡಿದೆ! ಪಾರ್ಥನು ನಿನ್ನ ಪಿತನೆಂಬುದನ್ನು ಅರಿಯೆಯಾ? ಆತನು ಹಿಂದೆ ತೀರ್ಥಯಾತ್ರೆಗೆಂದು ಬಂದಿದ್ದಾಗ್ಗೆ ನನ್ನನ್ನು ವರಿಸಿ ವಿವಾಹವಾಗಿದ್ದನೆಂಬುದನ್ನೂ-ಆಗ ಆತನಿಂದ ಗರ್ಭಧಾರಣ ಮಾಡಿದ ನನ್ನಲ್ಲಿ ನೀನು ಜನಿಸಿದೆಯೆಂಬುದನ್ನೂ ನಾನು ನಿನಗೆ ಹೇಳಲಿಲ್ಲವೆ? ಇದೇನೀ ಅನ್ಯಾಯವು? ಇಂತಹ ಗುರುದ್ರೋಹ ಕಾರ್ಯವನ್ನು ಮಾಡಿ ನಾವು ಯಾವ ನರಕಕ್ಕೆ ಹೋಗಬೇಕಾದೀತೆಂಬುದನ್ನು ಯೋಚಿಸು. ರಾಜಕಾರ್ಯವು ಇಂತಹ ಅನೀತಿಪಥವನ್ನು ಅನುಸರಿಸಿ ನಡೆಯತೊಡಗಿದರೆ ದೇಶಕ್ಕೆ ಕ್ಷೇಮವಾದೀತೆ!' ಎಂದು ಆಕ್ಷೇಪಿಸಿದಳು. ಬಭ್ರುವಾಹನನು, ಮಹಾ ಪರಾಕ್ರಮಿಯೇ ಆದರೂ, ತಾನು ಮಾಡಿದ ಕಾರ್ಯವು, ಧರ್ಮವಿರುದ್ಧವಾದುದು, ತನ್ನ ಪ್ರಿಯಮಾತೃವಿನ ಮನಸ್ಸಿಗೆ ಬಾರದುದು ಎಂದು ತಿಳಿದೊಡನೆಯೇ ನಡುಗಿಹೋದನು.—'ತಾಯೇ ಚಿಂತೆಗೊಳ್ಳಬೇಡ. ಕ್ಷತ್ರಿಯ ಪಂಥವನ್ನನುಸರಿಸಿ, ನನ್ನ ಪೊಳಲನ್ನು ಹೊಕ್ಕ ಯಜ್ಞಾಶ್ವವನ್ನು ಕಟ್ಟಿದುದಾಯಿತು. ಅದು ನಿನ್ನ ಚಿತ್ತಕ್ಕೆ ವಿರೋಧವಾಯಿತೆಂದ ಬಳಿಕ, ಆ ಮಾರ್ಗವನ್ನು ಹಿಡಿದು ನಡೆಯುವುದು ನನಗೆ ನೀತಿಯೆನ್ನಿಸಲಾರದು. ಆದುದರಿಂದ ಮುಂದೆ ಈ ಸಂದರ್ಭದಲ್ಲಿ ಹೇಗೆ ನಡೆಯಬೇಕೆಂದು ಆಜ್ಞಾಪಿಸಿದರೆ ಅದರಂತೆ ನಡೆಯಲು ಸಿದ್ಧನಾಗಿದ್ದೇನೆ' ಎಂದು ಕೈಮುಗಿದು ಬೇಡಿಕೊಂಡನು.

ಮಹಾವೀರನೂ ತೇಜಸ್ವಿಯೂ ಆಗಿದ್ದರೂ, ಹಾಗೆ ವಿನೀತನಾಗಿ ಬೇಡಿಕೊಳ್ಳುತ್ತಿದ್ದ ತನ್ನ ಮಗನನ್ನು ಕಂಡು ಚಿತ್ರಾಂಗದೆಯು ಪರಮ ಹರ್ಷಿತಳಾಗಿ,-'ಮಗೂ ಚಿಂತಿಸಬೇಡ. ಹಿಂದೆ ಪಾರ್ಥನು ನನ್ನನ್ನು ಇಲ್ಲಿ ಬಿಟ್ಟು ಹೊರಟುಹೋದ ಮೊದಲು, ಆತನನ್ನು ಅಗಲಿದ ಸಂತಾಪದಿಂದ ಕೊರಗುತ್ತಿದ್ದೆನು. ಇಂದು ನನ್ನ ಪೂರ್ವ ಪುಣ್ಯವಶದಿಂದ ಪುನಃ ಇಲ್ಲಿಗೆ ಬಂದಿದ್ದಾನೆಯಾದುದರಿಂದ, ನನಗೆ ಆತನ ದರ್ಶನಮಾಡಿಸಿ, ಆತನ ಪಾದ ಸನ್ನಿಧಿಯಲ್ಲಿ ರಾಜ್ಯ-ಐಶ್ವರ್ಯ ಮುಂತಾದ ಸರ್ವಸ್ವವನ್ನೂ ಒಪ್ಪಿಸು. ಅಲ್ಲಿಗೆ ನಾನು ಈವರೆಗೂ ಆತನನ್ನು ಚಿಂತಿಸುತ್ತಾ ಮಾಡುತ್ತಿದ್ದ ತಪಸ್ಸು

ಸಫಲವಾದಂತಾಗುವುದು. ಮುಂದೆ ನೀನು ಆತನಿಗೆ ಸಹಾಯಕನಾಗಿ ಯುಧಿಷ್ಠಿರನ ವೈರಿಗಳಾದ ರಾಜರೆಲ್ಲರಿಗೆ ನಿನ್ನ ಶೌರ್ಯಪ್ರತಾಪಗಳನ್ನು ವಿಸ್ತರಿಸಿ, ಸದ್ಯಶವನ್ನು ಸಂಪಾದಿಸು' ಎಂದು ನುಡಿದು, ಅರ್ಜುನನ ಆಗ ಮನಕ್ಕಾಗಿ ಪರಮ ಸಂಭ್ರಮಗೊಂಡು ಉಬ್ಬಿಹೋದಳು.

ಬಭ್ರುವಾಹನನು, ಮಾತೆಯನ್ನು ಉಚಿತವಚನಗಳಿಂದ ಮನ್ನಿಸಿ, ಅಂತಃಪುರಕ್ಕೆ ಕಳುಹಿ, ಪ್ರಕೃತ ತನ್ನ ಕರ್ತವ್ಯವೇನೆಂದು ಸುಬುದ್ಧಿ ಮುಂತಾದ ಮಂತ್ರಿಪುಂಗವರ ಆಲೋಚನೆಯನ್ನು ಕೇಳಿದನು. ಅವರೆಲ್ಲ ರೂ ಏಕವಾಕ್ಯತೆಯಿಂದ ಮಾತೃವಾಕ್ಯವನ್ನು ಅನುಸರಿಸಿ, ತಂದೆಯನ್ನು ಕಂಡು, ತಿಳಿಯದೆ ಮಾಡಿದ ಅಪರಾಧವಿದೆಂದು ಕ್ಷಮೆ ಕೇಳಿಕೊಳ್ಳುವುದು ಯುಕ್ತವೆಂದು ಅಭಿಪ್ರಾಯ ಕೊಟ್ಟರು. ಆ ಮಾತು ಬಭ್ರುವಾಹನನಿಗೂ ಸಮಂಜಸವೆಂದು ತೋರಿತು. ಒಡನೆ ಹಾಗೆ ಮಾಡತಕ್ಕುದೇ ಸರಿಯೆಂದು ನಿರ್ಧರಿಸಿ, ಪಟ್ಟಣವನ್ನು ತಳಿರು ತೋರಣಗಳಿಂದಲೂ ಮಂಟಪ ಮೇ ಲ್ಕಟ್ಟುಗಳಿಂದಲೂ ಸಿಂಗರಿಸಿ, ರಾಜಬೀದಿಗಳಿಗೆ ಪನ್ನೀರನ್ನು ಚಿಮುಕಿಸಿ ರಂಗವಲ್ಲಿಗಳನ್ನಿಟ್ಟು ನೇತ್ರಾನಂದಕರವಾಗುವಂತೆ ಆಜ್ಞಾಪಿಸಿದನು. ರಾಜಾ ಜ್ಞೆಯನ್ನನುಸರಿಸಿ, ಸಮಸ್ತ ಕಾರ್ಯಗಳೂ ಬಹು ಶೀಘ್ರಕಾಲದಲ್ಲೇ ನೆರವೇರಿ, ಮಣಿಪುರವು ಅನ್ವರ್ಥನಾಮಧೇಯದಿಂದ ಪ್ರಕಾಶಿಸತೊಡಗಿತು.

ಬಭ್ರುವಾಹನನು, ಮಾರನೆಯ ಪ್ರಾತಃಕಾಲ ಸ್ನಾನಸಂಧ್ಯಾದಿಗಳ ನ್ನು ಆಚರಿಸಿ, ತನ್ನ ಭಾಂಡಾರದಲ್ಲಿನ ಅನೇಕ ಉತ್ತಮ ವಸ್ತುಗಳನ್ನು ಸಂಗ್ರಹಿಸಿಕೊಂಡು, ಸುಬುದ್ಧಿಯೇ ಮುಂತಾದ ಆಪ್ತಮಂತ್ರಿಗಳೊಂದಿಗೆ ಅರ್ಜುನನನ್ನು ಕಾಣಬೇಕೆಂಬ ಆತುರದಿಂದ ಹೊರಟು, ರಾಜಧಾನಿಯಿಂದ ಪ್ರಯಾಣಮಾಡಿ ಅರ್ಜುನನ ಪಾಳಯವನ್ನು ಕುರಿತು ಬರುತ್ತಿದ್ದನು. ಆ ವೇಳೆಯಲ್ಲಿ ಇತ್ತ ಪಾರ್ಥನೂ, ಸಂಧ್ಯಾದಿ ನಿತ್ಯಕರ್ಮಗಳನ್ನು ಮುಗಿಸಿ ಕೊಂಡು, ಶ್ರೀಕೃಷ್ಣ ಪರಮಾತ್ಮನ ಪಾದಕಮಲಗಳನ್ನು ಧ್ಯಾನಿಸಿ, ಮುಂದೆ ಕುದುರೆಯನ್ನು ಬಿಡಿಸಿಕೊಳ್ಳುವ ಉಪಾಯವೇನೆಂದು ಯೋಚಿಸತೊಡಗಿ ದ್ದನು. ಅನುಸಾಲ್ವ, ವೃಷಕೇತು, ಯೌವನಾಶ್ವ, ಹಂಸಧ್ವಜ, ನೀಲ ಧ್ವಜ ಇವರ ಶಸ್ತ್ರಾಸ್ತ್ರ ಸಜ್ಜಿತವಾದ ಚತುರಂಗ ಸೈನ್ಯಗಳನ್ನು ಪ್ರದ್ಯು

ವನ್ನು ಯುಕ್ತಸ್ಥಳಗಳಲ್ಲಿ ನಿಯಮಿಸಿ ನಿಲ್ಲಿಸಿ, ವ್ಯೂಹರಚನೆಮಾಡಿ, ಶತ್ರು ಸೇನೆಯನ್ನು ಎದುರುಗೊಳ್ಳಲು ಸನ್ನದ್ಧನಾಗಿದ್ದನು.

ಆ ಸಮಯಕ್ಕೆ ಸರಿಯಾಗಿ ಬಭ್ರುವಾಹನನು, ತಾನು ತೆಗೆಸಿಟ್ಟಿದ್ದ ಸಮಸ್ತ ಉತ್ತಮ ವಸ್ತುಗಳನ್ನೂ, ಕಪ್ಪಕಾಣಿಕೆಗಳನ್ನೂ, ದಿವ್ಯ ವಸ್ತ್ರಾಭರಣಗಳನ್ನೂ ತೆಗೆಸಿಕೊಂಡು, ಕೌಂತೇಯನಿದ್ದ ಸ್ಥಳಕ್ಕಾಗಿ ಬಂದು, ಆತನ ಪಾದಗಳಿಗೆ ಸಾಷ್ಟಾಂಗ ನಮಸ್ಕಾರಮಾಡಿ, ಅನರ್ಘ್ಯ ರತ್ನಗಳನ್ನು ಪಾದಮೂಲದಲ್ಲಿ ಸಮರ್ಪಿಸಿ, ಎದ್ದು ಭಯಭಕ್ತಿಯಿಂದ ನಿಂತುಕೊಂಡನು. ಒಡನೆ, ತಮ್ಮ ರಾಜನನ್ನನುಸರಿಸಿ, ಆತನೊಂದಿಗೆ ಬಂದಿದ್ದ ಸುಬುದ್ಧಿಯೇ ಮುಂತಾದ ಮಂತ್ರಿ ಪರಿವಾರದವರೆಲ್ಲರೂ ಅರ್ಜುನನಿಗೆ ವಂದಿಸಿ, ಕೈ ಮುಗಿದುಕೊಂಡು ನಿಂತರು. ಅರ್ಜುನನು ಈ ವಿಚಿತ್ರ ಪರಿಸ್ಥಿತಿಗೆ ಅರ್ಥ ವೇನೆಂದು ತೋರದೆ,-'ಎಲೈ ಅರಸೇ ನೀನಾರು, ಇದೇನು ನಿನ್ನೀ ಕಾರ್ಯವು' ಎಂದು ಬೆಸಗೊಳ್ಳಲು, ಬಭ್ರುವಾಹನನು ವಿನಯ ವಿಧೇಯತೆಗಳಿಂದ ಹೀಗೆಂದು ವಿಜ್ಞಾಪಿಸಿದನು.

'ತಂದೆಯೇ, ನಾನು ನಿಮಗೆ ಅನ್ಯನಲ್ಲ. ನಿಮ್ಮ ತನೂಭವನು. ಬಭ್ರುವಾಹನನೆಂಬ ನಾಮಧೇಯದಿಂದ ನನ್ನನ್ನು ಕರೆಯುವರು. ಹಿಂದೆ ತೀರ್ಥಯಾತ್ರಾ ವ್ಯಾಜದಿಂದ ದೇಶಸಂಚಾರವಾಗಿ ನೀವು ಬಂದಿದ್ದಾಗ್ಗೆ, ಉಲೂಪಿ-ಚಿತ್ರಾಂಗದೆಯರೆಂಬ ನಾಗಕನ್ಯೆಯರಿಬ್ಬರನ್ನು ಗಾಂಧರ್ವವಿಧಿಯಿಂದ ಕೂಡಿಹೋದ ಸಂಗತಿಯು ಜ್ಞಾಪಕವಿದೆಯಷ್ಟೆ! ಅವರಲ್ಲಿ ಚಿತ್ರಾಂಗದೆಯ ಉದರ ಸಂಭೂತನೇ ನಾನು. ಉಲೂಪಿಯು ನನ್ನನ್ನು ಪ್ರೇಮದಿಂದ ಕಾಪಾಡಿ ದೊಡ್ಡವನನ್ನಾಗಿ ಮಾಡಿದಳು. ಯಜ್ಞಾಶ್ವವು ತಮ್ಮದೆಂಬ ಪರಿಜ್ಞಾನವಿಲ್ಲದೆ, ಕ್ಷಾತ್ರಧರ್ಮಾವಲಂಬನೆಯಲ್ಲೇ ದೃಷ್ಟಿಯಿಟ್ಟು ನಾನು ಅದನ್ನು ಬಂಧಿಸಿ ತಮ್ಮ ಪಾದಕ್ಕೆ ಮಹಾಪರಾಧ ಮಾಡಿದೆನು. ಈಗ ನನ್ನ ಕೃತಿಯಿಂದ ತಮ್ಮ ಪಾದಕ್ಕೆ ಎಂತಹ ಅಪರಾಧ ಮಾಡಿದಂತಾಯಿತೆಂದು ನನ್ನ ತಾಯಿಯಿಂದ ತಿಳಿದು ಬಹಳ ಪಶ್ಚಾತ್ತಾಪಗೊಂಡಿದ್ದೇನೆ. ಎಲೈ ಕ್ಷತ್ರಿಯೋತ್ತಮರೇ, ತಿಳಿಯದೆ ದುಡುಕಿ ಮಾಡಿದ ಈ ನನ್ನ ಅಪರಾಧವನ್ನು ಮರೆತು, ಕುದುರೆಯನ್ನೂ, ನನ್ನೀ ರಾಜ್ಯೈಶ್ವರ್ಯ

ಗಳನ್ನೂ ತಂದೆಯಾದ ತಮ್ಮ ಪಾದಕ್ಕೆ ಕಾಣಿಕೆಯನ್ನಾಗಿ ಸ್ವೀಕರಿಸಿ ಕಾಪಾಡಬೇಕು' ಎಂದು ಬಿನ್ನವಿಸಿಕೊಂಡನು.

ವೀರಾಗ್ರಣಿ ಬಭ್ರುವಾಹನನು ಪಿತೃವೆಂಬ ಭಾವನೆಯಿಂದ ಪಾದಾ ಕ್ರಾಂತನಾಗಿ ಬೇಡಿಕೊಳ್ಳುತ್ತಿದ್ದಾಗಲೂ, ಪಾರ್ಥನು ಅವನ ಕಡೆಗೇ ತಿರುಗಿ ನೋಡದೆ, ಅವನನ್ನು ಕುರಿತು ಮಾತನಾಡದೆ ಕೇವಲ ಉದಾಶೀನ ಭಾವದಿಂದಲೇ ಇದ್ದುಬಿಟ್ಟನು. ಇದನ್ನು ಕಂಡು, ನೀಲಧ್ವಜ, ಹಂಸ ಧ್ವಜ ಮುಂತಾದ ವಯೋವೃದ್ಧ ನರೇಶ್ವರರು,-'ಇದೇಕೆ ಅರ್ಜುನನು ಹೀಗೆ ಮೂರ್ಖತನವನ್ನು ಕೈಕೊಂಡಿರುವನು? ಬಭ್ರುವಾಹನನು ಸಾ ಮಾನ್ಯನಲ್ಲ. ತನ್ನ ವಿನೀತಭಾವಕ್ಕೆ ಅರ್ಜುನನ ಉದಾಶೀನವೇ ಪ್ರತಿ ಫಲವಾಯಿತೆಂದು ತಿಳಿದು ಬೇಸತ್ತು ಕೋಪಿಸಿಕೊಂಡನೆಂದರೆ, ಪಾಂಡವ ಸೈನ್ಯಕ್ಕೆ ಕ್ಷೇಮವಿರದು! ಇದೇನು, ಮುಂದೆ ಏನಾಗಲಿರುವುದೋ, ಎಂದು ಚಿಂತಿಸಿದರು. ಮತ್ತು ಸಾವಕಾಶವಾದರೆ ಕಾರ್ಯವು ಪ್ರಮಾದಕರವಾದೀ ತೆಂದು ಅರ್ಜುನನನ್ನು ಕುರಿತು-'ಧನಂಜಯಾ, ಇದೇನು? ನಿನ್ನೀ ತನು ಸಂಭವನಲ್ಲಿ ಹೀಗೆ ಉದಾಶೀನತೆಯನ್ನು ತೋಚಿಸುತ್ತಿರುವೆ? ಬಭ್ರುವಾಹನ ನೆಂದರೆ ಸಾಮಾನ್ಯನಲ್ಲ. ಮಹಾ ಪರಾಕ್ರಮಿ-ವೀರಾಗ್ರಣಿ. ಈತನು ನಿನ್ನ ಆತ್ಮಜನೆಂಬುದಕ್ಕೆ ಈತನ ಅಂಗಾಂಗಗಳೇ ಸಾಕ್ಷೀಭೂತಗಳಾಗಿವೆ! ಈ ಬಿಡಗನ್ನು ಬಿಟ್ಟು, ಪ್ರಿಯಪುತ್ರನೆಂದು ಪರಿಗ್ರಹಿಸಿ, ಆದರಿಸು' ಎಂದು ನುಡಿದರು.

ಆಪ್ತರಾದ ಆ ಸಾಮಂತರಾಜರು ಹೇಳುತ್ತಿದ್ದ ಮಾತುಗಳು, ಅರ್ಜು ನನ ಕಿವಿಗೆ ಬೀಳಲಿಲ್ಲ. ಕಾಲಪ್ರೇರಿತನಾದವನಂತೆ ಸ್ವಲ್ಪಹೊತ್ತು ಪಾದದ ಬಳಿ ಕುಳಿತಿದ್ದ ಆ ಬಭ್ರುವಾಹನನನ್ನು ನಿಟ್ಟಿಸಿ, ಕಾಲಿನಿಂದೊದೆದು ಹಲ್ಕ ಡಿಯುತ್ತಾ,-'ಎಲವೆಲವೋ ಕ್ಷತ್ರಿಯಾಧಮ, ನೀನು ನನ್ನ ತನೂಭವ ನೆಂದುಕೊಂಡು ಬಂದಿರುವೆಯಾ? ನನ್ನ ಉದರ ಸಂಭೂತನಾದವನು, ಹೀಗೆ ಮೊದಲಿಗೆ ಅಶ್ವವನ್ನು ಕಟ್ಟಿ, ಪುನಃ ಯುದ್ಧಮಾಡಲು ಹಿಂದೆಗೆಯು ವನೆ? ಚಿತ್ರಾಂಗದೆಗೆ ಎಲ್ಲೋ ವೈಶ್ಯನಿಂದ ಉತ್ಪನ್ನನಾದವನಿರಬೇಕು ನೀನು! ಹಾಗಲ್ಲದಿದ್ದರೆ, ಕ್ಷತ್ರಿಯರ ಪಂಥವನ್ನು ಬಿಟ್ಟು, ಹೀಗೆ ಹಲ್ಗಿರಿದು ಪ್ರಾಣಕ್ಕಂಜಿ ಯಾಚಿಸುತ್ತಿದ್ದೆಯಾ? ನನಗೆ ಮಗನೆಂದರೆ ಸುಭದ್ರೆಯ

ಉದರದಲ್ಲಿ ಜನಿಸಿದ ಅಭಿಮನ್ಯುವೊಬ್ಬನೇ ಸರಿ! ಆ ಅಭಿಮನ್ಯು ಕುಮಾರನು, ಧರ್ಮರಾಜನು ಬೇಡಬೇಡವೆಂದು ನಿವಾರಿಸುತ್ತಿದ್ದರೂ ಮೀರಿ ನಡೆದು, ಶತ್ರುಗಳ ಭಯಂಕರ ಚಕ್ರವ್ಯೂಹದಲ್ಲಿ ಏಕಾಕಿಯಾಗಿ ನುಗ್ಗಿ, ಹಗೆಗಳ ತಂಡಗಳನ್ನು ತುಂಡ್ರಿಸಿ ಸದ್ಗತಿಗೆ ಸಂದನು. ಎಲವೋ, ಸಿಂಹದ ಉದರದಲ್ಲಿ ಜಂಬುಕವು ಜನಿಸುವುದೇನೋ? ಹೆಂಬೇಡಿಯೇ, ಕುಲಗೇಡಿಯೇ, ನನ್ನ ಹೆಸರಿಗೆ ಹೀಗೆ ಕಳಂಕತರಲು ಯತ್ನಿಸಿದೆಯಾ? ಕಾದಲಾರದ ಹೇಡಿಯು ಕುದುರೆಯನ್ನು ಕಟ್ಟಿದೆಯೇಕೆ? ಕಟ್ಟಿದಮೇಲೆ ಕಾದಲಾರದೆ ಹೀಗೆ ಅಳುವೆಯೇಕೆ? ರಾಜಲಾಂಛನವಾದ ಈ ಕಿರೀಟಕುಂಡಲಗಳೇಕೆ, ಶ್ವೇತಚ್ಛತ್ರ ಮುಂತಾದ ಈ ಆಡಂಬರಗಳೇಕೆ ನಿನಗೆ? ರಣಹೇಡಿಯಾದ ನಿನಗೆ ಈ ಧನುರ್ಬಾಣಗಳೇಕೆ? ನಿನ್ನಜೀವನವನ್ನು ಸುಡುಸುಡು' ಎಂದು, ಅತಿಶಯ ಅಪಮಾನಕರವಾದ ವಾಕ್ಯಗಳಿಂದ ನಿಂದಿಸಿದನು. ಅಲ್ಲಿಗೇ ಅವನ ಬಾಯಿ ನಿಲ್ಲಲಿಲ್ಲ.-'ಅಹಹ, ನಿನ್ನ ಮಾತೆ ಚಿತ್ರಾಂಗದೆಯು ಗಂಧರ್ವಸೋದರಿಯೆಂದೆಯಲ್ಲವೆ? ಸಹಜ, ಆಕೆಯ ಮಗನಾದ ನೀನು ನಾಟಕದಲ್ಲಿನ ರಾಜವೇಷದವನಂತೆ ಈ ಭೂಪಾಲ ವೇಷದಿಂದ, ಚತುರ್ಬಲದಿಂದ ಕೂಡಿ ಬಂದಿರುವುದು ಯೋಗ್ಯವಾಗಿದೆ! ಆಹಾ, ಯಜ್ಞಾಶ್ವವನ್ನು ಕಟ್ಟಿ, ಎಂತಹ ಸಾಹಸ ಕಾರ್ಯ ಮಾಡಿದೆಯಲ್ಲಾ!' ಎಂದು, ಬಹು ನಿಷ್ಠುರವಾಗಿ ಅವಹೇಳನ ವಾಕ್ಯಗಳನ್ನು ನುಡಿದು ಮುಖದಿರುಹಿಕೊಂಡನು.

ವಿನೀತನಾಗಿ, ಶರಣಾಗತನಾಗಿ, ಹೇಳಿಕೊಂಡ ತನ್ನ ಮಾತುಗಳನ್ನು ಕೇಳದೆಯೂ ತಾನಾರೆಂದು ತನ್ನಮುಖವನ್ನೂ ನೋಡದೆಯೂ ಮನಬಂದಂತೆ ನಿಂದಿಸಿದ ಆತನ ಮಾತುಗಳನ್ನು ಕೇಳಿ, ಬಭ್ರುವಾಹನನು, ಸಮೀಪದಲ್ಲಿದ್ದ ಮಂತ್ರಿಯಾದ ಸುಬುದ್ಧಿಗೆ ಆತನ ಚರ್ಯೆಯನ್ನು ನೋಡೆಂದು ತೋರಿಸಿ-ಹೆಡೆಯನ್ನು ತುಳಿದ ನಾಗಸರ್ಪದಂತೆ, ಈದ ಹುಲಿಯಂತೆ, ಕನಲಿ ಉರಿದೆದ್ದು-'ಪತಿವ್ರತೆಯಾದ ನನ್ನ ಮಾತೆಯನ್ನು ನಿಂದಿಸಿದೆಯಲ್ಲವೆ? ನನ್ನನ್ನೂ ಬಾಯಿಗೆ ಬಂದಂತೆಲ್ಲಾ ಅವಮಾನಿಸಿದೆಯಲ್ಲವೆ? ನಾನು ವೈಶ್ಯ ಸಂಭವನೇ? ನೀನು ನನ್ನನ್ನು ಬೇಕಾದಂತೆ ನಿಂದಿಸು. ಆದರೆ ನನ್ನತಾಯಿಯಿಂದ ನೀನು ನನ್ನತಂದೆಯೆಂಬ ಸಂಗತಿಯನ್ನು ಕೇಳಿದ್ದೇನಾದ್ದರಿಂದ ನಾನು ನಿನ್ನನ್ನು ನಿಂದಿಸುವುದಿಲ್ಲ. ಆದರೆ, ನನ್ನ

ಮಾತೆಯನ್ನು ವ್ಯಭಿಚಾರಿಣಿಯೆಂದೂ ನನ್ನನ್ನು ವೈಶ್ಯಸಂಭವನೆಂದೂ ನಿಂದಿಸಿದ ನಿನ್ನೀ ವಾಕ್ಯಗಳು ನನ್ನ ದೇಹವಾದ್ಯಂತವನ್ನೂ ದಹಿಸುತ್ತಿವೆ! ಎಲೈ ಅರ್ಜುನಾ, ಇಗೋ ಹೇಳುವೆನು ಕೇಳು, ನನ್ನ ಜನ್ಮಸ್ಥಳವನ್ನು ಕುರಿತು ಆಡಬಾರದ-ನಾನು ಕೇಳಬಾರದ ಇಂತಹ ದುರ್ವಾಕ್ಯಗಳನ್ನಾಡಿದ ನಿನ್ನೀ ತಲೆಯನ್ನು ಧರೆಗೆ ಇಳುಹದಿದ್ದರೆ, ನೀನೀಗ ನನ್ನ ಜನ್ಮದ ವಿಷಯದಲ್ಲಿ ಹೇಳಿದ ಮಾತುಗಳೆಲ್ಲವೂ ನಿಶ್ಚಯವೇ! ಪ್ರಪಂಚವು ಅರಿಯಲಿ, ನಾನು ವೈಶ್ಯಸಂಭವನೇ ಎಂಬುದನ್ನು?' ಎಂದು ಘುಡಿಘುಡಿಸುತ್ತಾ ನುಡಿದು, ಅಲ್ಲಿ ನಿಲ್ಲದೆ ಹಿಂದಿರುಗಿ, ಕುದುರೆಯನ್ನು ಲಾಯದಲ್ಲಿ ಬಿಗಿಸಿ, ಯುದ್ಧಸನ್ನದ್ಧನಾಗಿ ನಿಂತನು.



## ಅಧ್ಯಾಯ ೪. ವೃಷಕೇತು ವಧೆ

ಮಹಾ ಅಪಮಾನಕರವಾದ ದುರ್ವಾಕ್ಯಗಳಿಂದ ಮನನೊಂದು, ಆತ್ಮಗೌರವ ಪಾಲನೆಯಲ್ಲಿ ಇಚ್ಛೆಯುಳ್ಳವನಾಗಿ, ಬಭ್ರುವಾಹನನು, ಹಸ್ತ್ಯಶ್ವ ರಥಪದಾತಿಗಳನ್ನು ಕೋಟಿಕೋಟಿ ಸಂಖ್ಯೆಯಿಂದ ನೆರೆಯಿಸಿ, ಪಾರ್ಥನ ಸೈನ್ಯಕ್ಕೆ ಅಭಿಮುಖವಾಗಿ ನಿಲ್ಲಿಸಿದನು. ಉಭಯ ಸೇನೆಗಳಲ್ಲೂ ಆನೆಗೆ ಆನೆ, ಕುದುರೆಗೆ ಕುದುರೆ, ರಥಕ್ಕೆ ರಥ, ಕಾಲಾಳಿಗೆ ಕಾಲಾಳು ಹೀಗೆ ಪರಸ್ಪರ ಅಭಿಮುಖರಾಗಿ ಯುದ್ಧವು ಅತ್ಯಂತ ಉರವಣಿಗೆಯಿಂದ ನಡೆಯಲಾರಂಭವಾಯಿತು. ಕೈದುಗಳು ಒಂದಕ್ಕೊಂದಕ್ಕೆ ಮಸೆವುದರಿಂದ ಹುಟ್ಟುವ ಖಣಿಲು ಖಣಿಲೆಂಬ ಶಬ್ದವೂ, ಧನುಷ್ಟಂಕಾರದ ಗಂಭೀರ ನಿನಾದವೂ, ಆನೆಗಳ ಘೀಂಕಾರ-ಕುದುರೆಗಳ ಹೇಷಾರವಗಳೂ, ಭೇರಿ ತಮ್ಮಟೆ ಮುಂತಾದ ಚರ್ಮವಾದ್ಯಗಳ ಭಯಂಕರ ಶಬ್ದವೂ, ವೀರರ ಸಿಂಹಗರ್ಜನೆಗಳೂ, ಕಾಲ್ಬಲದ ಕಲಕಲ ರವವೂ, ಒಂದಾಗಿ ಬೆರೆದು ಪ್ರಳಯಕಾಲದ ಮಹಾಜಲಧಿಯು ಉಕ್ಕೇರುವ ಸಂಭ್ರಮವೋ ಎನ್ನುವಂತೆ ವಿಶೇಷ ಶಬ್ದದಿಂದ ಕೂಡಿ, ಕಿವಿಗಳನ್ನು ಕಿವಿಡಾಗಿಸುವಂತಿದ್ದಿತು. ಭಟರು, ಬಾಣ

ತೋಮರ, ಪರಶು, ಚಕ್ರ, ಖಡ್ಗ, ಮುದ್ಗರ, ಕುಂತ, ಸುರಗಿ ಮುಂತಾದ ಆಯುಧಗಳನ್ನು ಹಿಡಿದು ಪರಬಲವನ್ನು ಕೊಲ್ಲುವುದರಲ್ಲೇ ಆಸಕ್ತರಾಗಿ ಒಡಲರಿಯದೆ ಯುದ್ಧದಲ್ಲಿ ತೊಡಗಿದ್ದರು. ಯುದ್ಧವು ಸ್ವಲ್ಪಕಾಲ ಬಹು ಭಯಂಕರವಾಗಿ ನಡೆಯಿತು.

ಬಭ್ರುವಾಹನನು, ತನ್ನ ಸೈನ್ಯವು ಶತ್ರುಸೇನೆಯನ್ನು ಹಣಿಯುವು ದರಲ್ಲಿ ಆಸಕ್ತವಾಗಿ ಹೋರಾಡುತ್ತಿದ್ದುದನ್ನು ಕಂಡು ಸಂತುಷ್ಟನಾಗಿ, ತಾನೂ ಧನುಷ್ಟಂಕಾರಮಾಡಿ, ರಣಾಂಕಣವನ್ನು ಹೊಕ್ಕನು. ಒಡನೆ ಆತ ನಿಗೆ ಅನುಸಾಲ್ವನಿದಿರಾಗಿ,-'ಎಲವೆಲವೋ, ಪಾರ್ಥನು ಹೇಳಿದ ಬುದ್ಧಿ ವಾದದ ಮಾತುಗಳನ್ನು ಅಪಾರ್ಥದಿಂದ ತಿಳಿದುಕೊಂಡು ಇಂದು ಯುದ್ಧಕ್ಕೆ ಬಂದೆಯಾ? ನಿನ್ನ ಪೌರುಷ ಪ್ರತಾಪಗಳು ಪಾರ್ಥನ ಪಟುಭಟರೆದುರಿ ನಲ್ಲಿ ನಡೆವುವೆಂದು ತಿಳಿದಿರುವೆಯಾ? ಈ ಭ್ರಾಂತಿಯನ್ನು ಬಿಟ್ಟು ಕಳೆ' ಎಂದು ಹಂಗಿಸಿ ನುಡಿದು, ಆತನನ್ನು ತಡೆದು ಬಾಣಪ್ರಯೋಗಮಾಡಿ ಯುದ್ಧಕೊಟ್ಟನು. ಬಭ್ರುವಾಹನನು, ಕಣ್ಣುಮುಚ್ಚಿ ಬಿಡುವಷ್ಟು ಕಾಲ ದೊಳಗೆ ಆತನಮೇಲೆ ಬಾಣಗಳ ಮಳೆಯನ್ನೇ ಸುರಿಸಿ, ಆತನ ರಥದ ಕುದುರೆಗಳನ್ನು ಕೊಂದು, ಸಾರಥಿಯನ್ನು ಹತಗೊಳಿಸಿ, ಕವಚವನ್ನು ಹರಿದು, ಶೀಸಕವನ್ನು ನೆಲಕ್ಕುರುಳಿಸಿ, ಕೈಯ ಬಿಲ್ಲನ್ನು ಮುರಿದು, ಮೈ ಯಲ್ಲಿ ಕೆನ್ನೀರನ್ನು ಹೊರಡಿಸಿ ನೋಯಿಸಿದನು. ಅನುಸಾಲ್ವನು ಬಹು ರೋಷಾಕ್ರಾಂತನಾಗಿ, ಪುನಃ ಮತ್ತೊಂದು ರಥವನ್ನೇರಿ ಬಿಲ್ಲನ್ನು ತೆಗೆದು ಜೇವಡೆದು ದಿವ್ಯಮಾರ್ಗಣಗಳನ್ನು ಹೂಡಿ ಆಕರ್ಣಾಂತವಾಗಿ ಸೆಳೆದು ಬಾಣ ಪ್ರಯೋಗಮಾಡಲು, ಬಭ್ರುವಾಹನನ ರಥವೂ ಚೂರುಚೂರಾಗಿ ಹೋಯಿತು. ಸಾರಥಿಯು ತೂರಿಹೋದನು. ಕುದುರೆಗಳು ಸತ್ತುವು. ಬಭ್ರುವಾಹನನು ಭಲಾ-ಭಲಾ ಎಂದು ಪ್ರತಿದ್ವಂದ್ವಿಯನ್ನು ಹೊಗಳುತ್ತಾ, ಮತ್ತೊಂದು ಬಿಲ್ಲನ್ನು ಕೈಗೆತ್ತಿಕೊಂಡು ಮಹಾರೋಷದಿಂದ ಪ್ರಯೋಗಿ ಸಲು, ಆ ಬಾಣಗಳು, ಅನುಸಾಲ್ವನ ಅಂಗಾಂಗಗಳನ್ನೂ ಘಾತಿಸಿ ಅವ ನನ್ನು ಮೂರ್ಛೆಗೊಳಿಸಿ ಉರುಳಿಸಿದುವು.

ಅನುಸಾಲ್ವನು ರಥದಲ್ಲಿ ಬಿದ್ದೊಡನೆಯೇ, ಬಭ್ರುವಾಹನನು, ಮುಂ ದುವರಿದು ನಡೆದನು. ಅಷ್ಟರಲ್ಲಿ ಆತನಿಗೆ ಶ್ರೀಕೃಷ್ಣ ತನಯನಾದ ಅನಿ

ರುಷನು ಎದುರಾಗಲು ಇಬ್ಬರಿಗೂ ಬಹು ಭಯಂಕರವಾದ ಯುದ್ಧವು ನಡೆಯಿತು. ಆ ಶೂರರ ಬಾಣಪ್ರಯೋಗಗಳಿಂದ ರಣರಂಗದಲ್ಲಿ ಕತ್ತಲೆ ಕವಿದಂತಾಯಿತು. ಉಭಯ ಸೈನ್ಯದಲ್ಲೂ ಭಟರು ಕಾಲ್ಮುರಿದು, ಕೊರಳು ಹರಿದು, ಕರಳು ಕಿತ್ತು ಹೊರಕ್ಕೆ ಬಂದು, ಹೀಗೆ ಅನೇಕ ಬಗೆಯಿಂದ ಗಾಯವಡೆದು ಸಹಸ್ರಸಹಸ್ರ ಸಂಖ್ಯೆಯಿಂದ ಹತರಾಗುತ್ತಿದ್ದರು. ಕೊನೆಗೆ ಬಭ್ರುವಾಹನನ ಕೋಲೆಸೆಗೆಯು ಕ್ಷಣಕ್ಷಣಕ್ಕೆ ಬಲವಾಗತೊಡಗಿತು. ಹರಿಸುತನೂ ಮೂರ್ಛೆಗೊಂಡನು. ಪಾರ್ಥಯು ಕ್ಷಣಮಾತ್ರ ವಿಶ್ರಾಂತಿಗೊಳ್ಳದೆ ಥಟನೆ, ಪಾರ್ಥನ ಸೈನ್ಯದಲ್ಲಿ ತನಗೆ ಎದುರಾಗುವ ಮತ್ತಾವ ಭಟರಿದ್ದಾರೆಂದು ಅರಸುತ್ತಾ ಮುಂದೆ ಬಂದನು. ಆತನ ಉರವಣಿಗೆಯಿಂದ ಸೈನ್ಯವು ಲೆಕ್ಕವಿಲ್ಲದೆ ಅಳಿಯುತ್ತಿದ್ದುದನ್ನು ಕಂಡು ಪಾರ್ಥನು, ಇನ್ನು ತಡೆಯಲಾಗದೆಂದು ರಥವನ್ನೇರಿ ಗಾಂಡೀವ ಧನುಷ್ಟಂಕಾರಮಾಡಿ, ಸಿಂಹಗರ್ಜನೆಯಿಂದ ದಿಕ್ತಟಗಳು ಮೊಳಗುತ್ತಿರಲು, ಆತನಿಗೆ ಎದುರಾಗಿ ರಥವನ್ನು ನೂಕಿದನು. ಅಷ್ಟರೊಳಗಾಗಿ ಹಂಸಧ್ವಜನು ಬಭ್ರುವಾಹನನ ರಥಕ್ಕೆ ಅಭಿಮುಖನಾಗಿ ತನ್ನ ರಥವನ್ನು ನಡೆಯಿಸಿ ಯುದ್ಧಮಾಡಲಾರಂಭಿಸಿದ್ದನು. ಇಬ್ಬರಿಗೂ ಯುದ್ಧವು ಬಹು ರಭಸದಿಂದ ಕೈಗಟ್ಟಿತು. ಅಸ್ತ್ರಪ್ರತ್ಯಸ್ತ್ರಗಳಿಂದ ಒಬ್ಬರಿಗೊಬ್ಬರು ಸೋಲದೆ ಉಭಯರೂ ಬಹುಕಾಲ ಹೋರಾಡಿದರು. ಇವರಿವರ ಬಾಣವೆಸುಗೆಯು ಉಭಯ ಸೈನ್ಯಗಳನ್ನೂ ವಿಶೇಷ ಸಂಖ್ಯೆಯಿಂದ ನೆಲಕ್ಕೆ ಉರುಳಿಸುತ್ತಿದ್ದಿತು. ಅರ್ಜುನನು, ತನ್ನ ಸೈನ್ಯಕ್ಕೆ ಎಲ್ಲೂ ಪ್ರಾಪ್ತವಾಗದಿದ್ದಂತಹ ಪರಾಭವವು, ಇಲ್ಲಿ ಪ್ರಾಪ್ತವಾದುದನ್ನು ಕಂಡು ಒಳಗೊಳಗೇ ಮರುಗುತ್ತಾ, ವೃಷಕೇತುವನ್ನು ಕುರಿತು-'ಮಗೂ ಸೈನ್ಯವು ಲೆಕ್ಕವಿಲ್ಲದೆ ಹತವಾಗಿದೆ. ಅನುಸಾಲ್ವ, ಅನಿರುದ್ಧ, ಹಂಸಧ್ವಜಾದಿ ವೀರರು ಮೂರ್ಛೆಗೊಂಡು ಬಿದ್ದಿದ್ದಾರೆ. ನೀನು ಈಗಲೇ ಹಸ್ತಿನಾವತಿಗೆ ಪ್ರಯಾಣಮಾಡಿ, ಇಲ್ಲಿಯ ಸ್ಥಿತಿಯನ್ನು ಕುರಿತು, ಧರ್ಮಜ, ಭೀಮಸೇನ ಮುಂತಾದ ಎಲ್ಲರಿಗೂ ತಿಳಿಸು' ಎನ್ನುತ್ತಿರುವ ವೇಳೆಗೆ ಸರಿಯಾಗಿ, ಅರ್ಜುನನು ಅನೇಕ ಉತ್ಪಾತಗಳನ್ನು ಕಂಡನು. ಅರ್ಜುನನ ಮಕುಟಾಗ್ರದಲ್ಲಿ ಹದ್ದುಬಂದು ಕುಳಿತಿತು. ಕಪೋತಗಳು ಆತನ ರಥದಲ್ಲಿ ಗೂಡಿಕ್ಕಿದುವು. ಆತನು ತಲೆಯಿಲ್ಲದ ತನ್ನ ದೇಹಚ್ಛಾಯೆಯನ್ನು

ಕಂಡನು. ಈ ಅಪಶಕುನಗಳು, ಖಂಡಿತವಾಗಿಯೂ ಅಪಜಯವಾಗುವು ದೆಂಬುದರ ಸೂಚನೆಗಳೆಂದು ತಿಳಿದು ಫಲ್ಗುಣನು-'ಅಕ್ಕಟಾ, ಯುಧಿಷ್ಠಿರನ ಯಾಗವು ಸುರಕ್ಷಿತವಾಗಿ ನೆರವೇರುವ ಮಾರ್ಗವೆಂತು? ಆಹಾ, ನಾನು ಯಜ್ಞಾಶ್ವವನ್ನು ಸುರಕ್ಷಿತವಾಗಿ ಧರ್ಮಜನಿಗೆ ಒಪ್ಪಿಸಲಾಪೆನೆ? ಆತನು ಋತ್ವಿಕ್ಕು ಮುಂತಾದ ಭೂಸುರರ ಗಡಣದಿಂದ ಕೂಡಿ, ವೇದಮಂತ್ರ ಗಳಿಂದ ಯಾಗಶಾಲೆಯು ಶೋಭಿಸಿರಲು ಅಲ್ಲಿ ವಿಧ್ಯುಕ್ತರೀತಿಯಲ್ಲಿ ಯಜ್ಞ ಭಾಗವನ್ನು ಅಗ್ನಿಮುಖದಲ್ಲಿ ಸಮರ್ಪಿಸಿ ಧನ್ಯನಾಗುವನೇ? ಮಗನೇ ಯಜ್ಞವು ಸುರಕ್ಷಿತವಾಗಿ ನಡೆವುದೆಂಬ ನಂಬಿಕೆಯು ನನಗೇಕೋ ತೋರ ಲೊಲ್ಲದು! ಆದುದರಿಂದ ನೀನು ಈಗಲೇ ಊರಿಗೆ ಹೋಗಿ, ಇಲ್ಲಿಯ ಸಂಗತಿಗಳನ್ನೆಲ್ಲಾ ತಿಳುಹಿಸು. ಕುಲಕ್ಕೆ ಏಕಮಾತ್ರ ಸಂತಾನವಾಗಿ ಉಳಿ ದಿರುವ ನೀನಿನ್ನು ತೊರಡು; ನನ್ನೀ ಹಿತಬೋಧನೆಯನ್ನು ಕೇಳು' ಎಂದು ಹೇಳುತ್ತಿರಲು-ಆ ಕರ್ಣಸುತನು-'ತಂದೆಯೇ, ಏನು ಮಾತುಗಳನ್ನು ಹೇಳು ತ್ತಿರುವೆ? ಇಂತಹ ಘೋರ ರಣಾಂಕಣದಲ್ಲಿ ನಿನ್ನನ್ನು ಏಕಾಂಗಿಯಾಗಿ ಬಿಟ್ಟು, ನನ್ನನ್ನು ಜೀವಗಳ್ಳನಾಗಿ ಹೋಗೆನ್ನುತ್ತಿರುವೆಯಾ? ಅಂತಹ ಹೇಯ ಕಾರ್ಯವನ್ನು ನಾನು ಮಾಡಿದೆನಾದರೆ ನನ್ನ ಪಿತಾಮಹನಾದ ಸೂರ್ಯನು ಗಗನಾಗ್ರದಿಂದ ಕೆಳಕ್ಕೆ ಬೀಳಲಾರನೆ? ಇದೇನು ಇಂತಹ ಮಾತುಗಳನ್ನು ನನ್ನೆದುರಿಗೆ ಹೇಳುತ್ತಿರುವೆಯಲ್ಲಾ! ಯುದ್ಧದಲ್ಲಿ ಪ್ರತಿ ವೀರನಿಗೆ ಬೆನ್ನುಕೊಟ್ಟು ಓಡಿ, ನಾನು ಹೇಗೆ ನನ್ನ ಹೆಂಡತಿಗೆ ಮುಖವನ್ನು ತೋರಿಸಲಿ? ಕೀರ್ತಿಶರೀರಿಯಾಗಿರುವ ಸೂರ್ಯಪುತ್ರನಿಗೆ ಮಗನೆನ್ನಿಸಿ ಕೊಳ್ಳುವ ನಾನು ಇಂತಹ ಹೀನಕಾರ್ಯವನ್ನು ಮಾಡಿಯೂ ಜೀವಿಸಿರ ಬಹುದೆ? ಚಿಂತೆಗೊಳ್ಳಬೇಡ. ಈತನು ನನಗೆ ಎದುರಾಗಲಿ-ನಾನು ನನ್ನ ತೋಳಬಲ್ಪಿಂದ, ಈತನೊಂದಿಗೆ ಭಯಂಕರ ಯುದ್ಧಮಾಡಿ ನಿನ್ನ ಕಣ್ಗ ಳಿಗೆ ಹಬ್ಬವನ್ನುಂಟುಮಾಡದಿರೆನು' ಎಂದು ನುಡಿದು, ಅರ್ಜುನನು ಬೇಡ ಬೇಡವೆನ್ನುತ್ತಿದ್ದರೂ ಕೇಳದೆ, ಆತನ ಪಾದಗಳಿಗೆರಗಿ ಬಲವಂತದಿಂದ ಅಪ್ಪಣೆ ಪಡೆದು, ರಥವನ್ನಡರಿ, ಪಾರ್ಥಸುತನಿಗೆ ಎದುರಾಗಿ ನಡೆದು- 'ಎಲವೊ ಬಬ್ರುವಾಹನ, ನೀನು ಪಾರ್ಥಸುತನಾದುದೇ ನಿಶ್ಚಯವಾಗಿ

ದ್ವಲ್ಲಿ ನನ್ನೆದುರಿಗೆ ನಿಂತು ಯುದ್ಧಮಾಡು. ನೋಡಿಕೋ, ನಾನು ಕರ್ಣಸುತನು’ ಎಂದು ಆತನಮೇಲೆ ಬಾಣಪ್ರಯೋಗ ಮಾಡಿದನು.

ಅದಕ್ಕೆ ಪ್ರತ್ಯುತ್ತರವಾಗಿ ಬಭ್ರುವಾಹನನು-‘ಓಹೋ ಹಾಗೋ ಲೇಸಾಯಿತು. ಫಲ್ಗುಣನು, ಯುದ್ಧದಲ್ಲಿ ನಿನ್ನ ತಂದೆಯನ್ನು ಕೊಂದ ನಲ್ಲವೆ? ಈಗ ನೀನು ನನಗೆ ಎದುರಾದುದು ನ್ಯಾಯವೇ! ಧೈರ್ಯದಿಂದ ನಿಂತು ಯುದ್ಧಮಾಡು’ ಎಂದು ನುಡಿದು ಬಾಣಪ್ರಯೋಗ ಮಾಡಿದನು. ಯುದ್ಧವು ಭಯಂಕರ ರೀತಿಯಿಂದ ಪ್ರಾರಂಭವಾಯಿತು. ಒಬ್ಬರಿಗೊಬ್ಬರು ಬಾಣಪ್ರಯೋಗ ಮಾಡುವರು. ಮಹಾರಭಸದಿಂದ ಬರುವ ಬಾಣಗಳನ್ನು ನಡುವೆ ತುಂಡುಮಾಡುವರು. ಪರಬಲದ ಹಸ್ತಿ ಅಶ್ವರಥ ಪದಾತಿಗಳನ್ನು ಬಾಣಗಳಿಗೆ ಆಹುತಿಗೊಳ್ಳುವರು. ಆಗ್ನೇಯಾದಿ ದಿವ್ಯಾಸ್ತ್ರಗಳನ್ನೂ ಅವುಗಳಿಗೆ ಪ್ರತ್ಯಸ್ತ್ರಗಳನ್ನೂ ಪ್ರಯೋಗಿಸುವರು. ಶಸ್ತ್ರಾಸ್ತ್ರಗಳ ಎಸುಗೆಯಿಂದಲೂ, ಶರಸಂಧಾನ ಕೌಶಲದಿಂದಲೂ, ಸತ್ವಸಾಹಸ ಲಕ್ಷ್ಯ ಮುಂತಾದುವುಗಳಿಂದಲೂ ವೃಷಕೇತು ಬಭ್ರುವಾಹನರು ಅಂದು ನಡೆದ ತಮ್ಮ ತಂದೆಗಳಾದ ಕರ್ಣಾರ್ಜುನರ ಕಾಳಗವನ್ನು ನಿರ್ದೇಶಿಸುತ್ತಿರುವರೋ ಎಂಬಂತಿದ್ದಿತು. ಯುದ್ಧವು ಗಳಿಗೆಗಳಿಗೆಗೆ ಉಲ್ಬಣಾವಸ್ಥೆಗೇರಿತು. ಸಕಲ ದಿವ್ಯಾಸ್ತ್ರಗಳೂ ಪ್ರಯೋಗಿಸಲ್ಪಟ್ಟುವು. ಒಂದೊಂದು ಬಾಣಪ್ರಯೋಗದಿಂದ ರಣಭೂಮಿಯು ಕ್ಷಣಕಾಲದಲ್ಲಿ ಜಲಮಯವಾಗುವುದು. ಉತ್ತರಕ್ಷಣದಲ್ಲೇ ಪ್ರತಿವೀರನ ಬೇರೊಂದು ಬಾಣಪ್ರಯೋಗದಿಂದ ಕುಲಾದ್ರಿಗಳು ಕಿತ್ತುಹೋಗುವಂತಹ ಮಾರುತವು ಬೀಸತೊಡಗುವುದು. ಒಡನೆ, ಭಯಂಕರವಾದ ಕಾಳ್ಕಿಚ್ಚಿನಂತೆ ಅಗ್ನಿಯು ವ್ಯಾಪಿಸಿ ಸೈನ್ಯಸಾಗರವನ್ನು ಶೋಷಿಸಲಾರಂಭಿಸುವುದು. ಒಡನೆ ಅದನ್ನು ನೊಂದಿಸಲು ವಾರುಣಾಸ್ತ್ರವು ಪ್ರಯೋಗಿಸಲ್ಪಟ್ಟು ರಣಭೂಮಿಯೆಲ್ಲವೂ ಕುಂಭದ್ರೋಣವಾಗಿ ಮಳೆ ಸುರಿದಂತೆ ತೋಯ್ದು-ತೇಲಿಹೋಗುವುದು. ಒಂದುಬಾರಿ ಬಭ್ರುವಾಹನನು ಮಾಡಿದ ಬಾಣಪ್ರಯೋಗವು, ವೃಷಕೇತುವನ್ನು ಅಂತರಿಕ್ಷಕ್ಕೆ ಹಾರಿಸಿ, ಮೂರು ಮುಹೂರ್ತಕಾಲ ನಾನಾದಿಕ್ಕುಗಳಲ್ಲೂ ತಿರುಗಿಸಿತು. ಕರ್ಣಸುತನೇನಾದನೋ ಎಂದು ಸಂದೇಹಗೊಂಡು ಅರ್ಜುನನು ನೋಡುತ್ತಿರುವಷ್ಟರಲ್ಲೇ ವೃಷಕೇತುವು, ಭೂಮಿಗೆ ಇಳಿದು ಪುಟಚೆಂಡಿನಂತೆ ಒಡನೆ **ನೆಗೆ**

ದೆದ್ದು, ಆಕರ್ಣಾಂತವಾಗಿ ಸೆಳೆದು, ಒಂದು ಬಾಣಪ್ರಯೋಗ ಮಾಡಲು, ಅದು ಬಭ್ರುವಾಹನನನ್ನು ನಾಕಪರ್ಯಂತವಾಗಿ ಮೇಲಕ್ಕೆ ಹಾರಿಸಿತು. ಅಲ್ಲಿ ಸೂರ್ಯನ ತಾಪದಿಂದ ಅವನ ರಥವು 'ಭಸ್ಮೀಭೂತವಾಗಿ ಹೋಗಲು, ಬಭ್ರುವಾಹನನು ಅಲ್ಲಿಂದ ದೊಡ್ಡ ಬೆಟ್ಟವೋ ಎಂಬಂತೆ ಬಂದು ವೃಷಕೇತುವಿನ ಮೇಲೆ ಬಿದ್ದನು. ಕರ್ಣಸುತನು ಆಘಾತವನ್ನು ಉಪಾಯದಿಂದ ತಪ್ಪಿಸಿಕೊಂಡು, ಪುನಃ ಬಾಣದಿಂದ ಅಂತರಿಕ್ಷಕ್ಕೆ ಹೊರಡಿಸಿದನು. ಅದನ್ನು ಕಂಡು ಪಾರ್ಥನು-'ಭಲೆ, ಭಾಪುರೆ' ಎಂದು ಕರ್ಣಸುತನನ್ನು ಮೆಚ್ಚಿಕೊಂಡನು. ಆಗ ಕರ್ಣಸುತನು-'ತಂದೆಯೇ ಅಂದಿನ ಯುದ್ಧದಲ್ಲಿ, ನಮ್ಮ ತಂದೆಯಾದ ಕರ್ಣನ ರಥದ ಚಕ್ರವು ಧರೆಯೊಳಕ್ಕೆ ಸಿಕ್ಕಿಬಿದ್ದಿದ್ದಾಗ, ಅದನ್ನು ಮೇಲಕ್ಕೆ ತೆಗೆದು ತಾನು ರಥಾರೂಢನಾಗುವವರೆಗೆ ಬಾಣಪ್ರಯೋಗ ಮಾಡಬೇಡವೆಂದು ನಮ್ಮ ತಂದೆಯು ನಿನ್ನನ್ನು ಕೇಳಿಕೊಂಡಂತೆ, ಇಂದು ಈತನೂ ನನ್ನನ್ನು ಪ್ರಾರ್ಥಿಸದೆ, ನನ್ನ ಬಾಣಹತಿಯಿಂದ ವಿರಾಮವಿಲ್ಲದೆ ಹೀಗೆ ಘಾಸಿಪಡುತ್ತಿರುವನೆಂದು ಹೇಳುತ್ತಾ, ತನ್ನ ಪೌರುಷಕ್ಕಾಗಿ ಹಿಗ್ಗುತ್ತಿರುವಷ್ಟರಲ್ಲೇ ಬಭ್ರುವಾಹನನು ಅತ್ಯಂತ ರಭಸದಿಂದ ಕೆಳಕ್ಕಿಳಿದು ಬಂದು ಅವನ ಮೇಲೆ ಬಿದ್ದನು. ಇಬ್ಬರೂ ನೊಂದು ಒಂದೊಂದೆಡೆ ಮೈಮರೆದು ಒರಗಿದರು. ಸ್ವಲ್ಪಹೊತ್ತಿನಲ್ಲೇ ಮೂರ್ಛೆ ತಿಳಿದೆದ್ದು ಪುನಃ ರಥಾರೂಢರಾಗಿ, ಒಂದೊಂದು ವೇಳೆ ಭೂತಳದಲ್ಲಿದ್ದೂ, ಮತ್ತೆ ಒಂದೊಂದು ವೇಳೆ ನಿರಾಧಾರರಾಗಿ ಅಂತರಿಕ್ಷದಲ್ಲಿ ನಿಂತೂ ಆ ಕಡುಗಲಿಗಳು, ಮಹಾ ಪ್ರತಾಪವಂತರಾಗಿ ಯುದ್ಧಮಾಡಿದರು.

ಹೀಗೆ ಆ ವೀರರಿಬ್ಬರೂ ಐದು ದಿನಗಳವರೆಗೆ ಭಯಂಕರ ಯುದ್ಧ ಮಾಡಿ ಉಭಯರೂ ನೊಂದು-ನೋಯಿಸಿ ಅದ್ವಿತೀಯರೆಂದು ವಂದಿಮಾಗಧರಿಂದ ಹೊಗಳಿಸಿಕೊಂಡರು. ಕೊನೆಯಲ್ಲಿ ಬಭ್ರುವಾಹನನು-'ಭಲೇ, ವೃಷಧ್ವಜನೇ, ನನ್ನೊಂದಿಗೆ ಹೋರಾಡಿದ ಪಟುಭಟರಲ್ಲಿ ನೀನೇ ಸರ್ವಶ್ರೇಷ್ಠನು. ಧನುರ್ಧರರಲ್ಲಿ ಅಗ್ರೇಸರರ ಪಜ್'ಕ್ತಿಗೆ ಸೇರಲರ್ಹನು. ಬಹು ಕಷ್ಟಪಟ್ಟಿರುವೆ. ಇನ್ನು ವಿಶ್ರಾಂತನಾಗು. ಹೃದಯದಲ್ಲಿ ಶ್ರೀಪತಿಯ ಧ್ಯಾನವನ್ನು ಮಾಡು' ಎಂದು ನುಡಿಯುತ್ತ, ಒಂದು ಕ್ರೂರವಾದ ಬಾಣವನ್ನು ಪ್ರಯೋಗಿಸಿ, ಅದರ ಪ್ರಯೋಗವನ್ನು ವೃಷಕೇತುವು ತಿಳಿವುದ

ರೊಳಗಾಗಿಯೇ ಮತ್ತೊಂದು ಕವಲು ಬಾಣವನ್ನು ಪ್ರಯೋಗಿಸಿ, ಕರ್ಣಜನ ಕಂಧರವನ್ನು ತರಿದುಬಿಟ್ಟನು. ತಲೆಯು ಗಗನಕ್ಕೆ ಹಾರಿತು. ವೃಷಕೇತುವು ವಧಿಸಲ್ಪಟ್ಟನೆಂದು ತಿಳಿದ ಅರ್ಜುನನಿಗೆ ಕಣ್ಣುಗಳು ಕತ್ತಲೆ ಕಟ್ಟಿದಂತಾದುವು. ಪಾಂಡವ ಸೈನ್ಯವು ಶೋಕಸಾಗರದಲ್ಲಿ ಮುಳುಗಿಹೋಯಿತು.



## ಅಧ್ಯಾಯ ೫. ಅರ್ಜುನನ ಅಳಿವು

ಪ್ರಚಂಡ ಪರಾಕ್ರಮಿಯಾದ ಪಾರ್ಥಸುತನ ಕವಲಂಬಿನಿಂದ ಕತ್ತರಿಸಲ್ಪಟ್ಟು ನಭಕ್ಕೆ ಹಾರಿದ ಕರ್ಣಜನ ಕಂಧರವು, ಹರೇ, ನಾರಾಯಣ, ಮುಕುಂದ, ಮಾಧವ, ಮುರಮರ್ದನ ಎಂದು ಪರಮಪುರುಷನ ಪಾವನ ನಾಮಗಳನ್ನು ಸ್ತೋತ್ರಮಾಡಿಕೊಳ್ಳುತ್ತ, ಅಂತರಿಕ್ಷದಿಂದ ಧರೆಗುರುಳುವ ನಕ್ಷತ್ರದಂತೆ ಬೀಳುತ್ತಿದ್ದಿತು. ಅರ್ಜುನನು ಭಯಭ್ರಾಂತನಾಗಿ ನೋಡುತ್ತಿರುವಷ್ಟರಲ್ಲೇ ವೃಷಕೇತುವಿನ ತಲೆಯು ಬಂದು ಆತನ ಪಾದಮೂಲದಲ್ಲಿ ಬಿದ್ದಿತು. ಅತ್ತ ಮುಂಡವು ಅತಿವೇಗದಿಂದ ಮುಂಬರಿದು ನಡೆದು, ಬಭ್ರುವಾಹನನನ್ನು ರಥದಿಂದ ಕೆಳಕ್ಕುರುಳಿಸಿ ಅನೇಕ ಸೈನ್ಯವನ್ನು ಧ್ವಂಸಮಾಡಿ ಭೂಮಿಗೆ ಬಿದ್ದಿತು. ಇತ್ತ ಅರ್ಜುನನು ತನ್ನ ಬಳಿ ಬಂದು ಬಿದ್ದ ಆ ಶಿರವನ್ನು ಕೈಗಳಿಂದ ಹಿಡಿದೆತ್ತಿ, ಮುಖದ ಬಳಿಯಿಟ್ಟು ಚುಂಬಿಸಿ, ಆ ಬಿಟ್ಟ ಕಣ್ಣುಗಳನ್ನೂ, ವಿಸ್ತಾರವಾದ ಹಣೆಯನ್ನೂ, ಬಿಗಿದ ಹುಬ್ಬುಗಳನ್ನೂ, ಹೊಳೆವ ಒಂದೇ ಸಾಲಾದ ಹಲ್ಲುಗಳನ್ನೂ, ಕುಡಿಮೀಸೆಗಳನ್ನೂ ನೋಡಿನೋಡಿ ವೀರರಸದ ಮುದ್ದೆಯೋ ಎಂಬಂತಿದ್ದ ಆ ತೇಜಸ್ವಿ ಮುಖವನ್ನು ಬಣ್ಣಿಸಿಬಣ್ಣಿಸಿ, ವ್ಯಥೆಪಡುತ್ತಾ,–'ಅಕಟಾ, ಮಗನೇ, ಮೃತನಾದೆಯಾ? ನಿನ್ನೀ ಅಳಿವು ಸರ್ವಜ್ಞನಾದ ಶ್ರೀ ಕೃಷ್ಣರಾಯನಿಗೆ ಸಮ್ಮತವಾಯಿತೆ? ನೀನಲ್ಲದೆ ಮತ್ತಾರನ್ನು ಕಂಡು ಧರ್ಮಜನು ಆನಂದಿಸುವನು? ಕುಂತೀದೇವಿಯು ನಿನ್ನನ್ನು ಕಳೆದುಕೊಂಡು ಹೇಗೆ ಸಹಿಸು

ವಳು? ಹತವಿಧಿಯೇ, ನಿಮ್ಮ ಯ್ಯನನ್ನು ಹಗೆಯಿಂದ ಕೈಯಾರೆ ಕೊಂದೆವು. ನೀನೇ ಸರ್ವಸ್ವವೂ ಎಂದು ಬಗೆದು ಇದ್ದೆವಲ್ಲಾ! ಇಂದು ನೀನೂ ಮೋಸಮಾಡಿ ಹೊರಟುಹೋದೆಯಾ! ಇನ್ನು ನಮಗೆ ಗತಿಗಾಣಿಸುವವರಾರು? ಅಕ್ಕಟಕಟಾ, ಅಂದು ಅಭಿಮನ್ಯುವು ಮಡಿದ ಅಳಲನ್ನು ನಿನ್ನನ್ನು ನೋಡಿ ಸ್ವಲ್ಪಮಾತ್ರ ಮರೆತಿದ್ದೆನು. ಇಂದು ಹುಣ್ಣಿನ ಮೇಲಾದ ಗಾಯವಂತೆ ಅದು ಪುನಃ ರೇಗಿಸಲ್ಪಟ್ಟಿತು. ತಂದೆ ವೃಷಧ್ವಜಾ, ಏಕೆ ಮಲಗಿರುವೆ! ಏಳು, ಸೈನ್ಯವನ್ನು ನಡೆಯಿಸು. ವೀರರೊಂದಿಗೆ ಯುದ್ಧಮಾಡು. ಸಿಂಹ ಗರ್ಜನೆಯಿಂದ ಪರಬಲದ ಹೃದಯವನ್ನು ಭೇದಿಸು. ಅಯ್ಯೋ, ಇನ್ನು ಪಾಂಡವರ ಐಶ್ವರ್ಯವು ಮೂಗಿಲ್ಲದ ಮುಖದಂತಾಯಿತು. ಲಿಂಗವಿಲ್ಲದ ಪೀಠದಂತೆ ಅದರ ಶೋಭೆಯು ಕೆಟ್ಟಿತು. ನಿನ್ನ ಶೌರ್ಯಸಹಾಯದಿಂದಲೇ ನಮಗೆ ಯೌವನಾಶ್ವ, ಅನುಸಾಲ್ವರ ಸ್ನೇಹವಾಯಿತು. ವೃಷಕೇತೂ, ಮಗೂ ಇಂದು ನೀನು, ನಿನ್ನ ದೇಹವನ್ನು ರಣದಲ್ಲಿ ಹದ್ದುಕಾಗೆಗಳಿಗೆ ಆಹಾರವಾಗಿ ಬಿಟ್ಟುಹೋಗಬಹುದೆ? ನನ್ನನ್ನು ರಣರಂಗದಲ್ಲಿ ಏಕಾಕಿಯಾಗಿ ಬಿಟ್ಟುಹೋಗಲಾರೆನೆಂದು ಹೇಳಿದ್ದೆಯಲ್ಲವೆ? ಕಂದಾ, ವೃಷಧ್ವಜಾ, ವೀರಾದಿವೀರನಾದ ನೀನು ಹೀಗೆ ಮೋಸಗೊಳಿಸಿ ಹೋಗಬಹುದೆ?' ಎಂದು ಕಲ್ಮರಗಳು ಕರಗುವಂತೆ ರೋದಿಸುತ್ತಾ ಇದ್ದನು.

ಅಷ್ಟರಲ್ಲಿ ಅತ್ತ, ವೃಷಧ್ವಜನ ಅಟ್ಟಿಯು ಬಂದು ಅಪ್ಪಳಿಸಲು ನೆಲಕ್ಕೆ ಬಿದ್ದ ಬಭ್ರುವಾಹನನು ಸ್ವಲ್ಪಹೊತ್ತಿನ ಮೇಲೆ ಮೂರ್ಛೆ ತಿಳಿದು ಎದ್ದುನಿಂತು, ಪುತ್ರಶೋಕಗ್ರಸ್ತನಾಗಿ ಮಗನ ಗುಣಶೀಲಗಳನ್ನು ನೆನೆನೆನೆದು ವ್ಯಥೆಪಡುತ್ತಿದ್ದ ಅರ್ಜುನನನ್ನು ಕುರಿತು-'ಎಲೆ ಪಾರ್ಥ, ನಾವು ವೈಶ್ಯ ಸಂಭವರಲ್ಲವೆ? ನಮ್ಮ ಧರ್ಮದಂತೆ ನಿಮ್ಮ ಬಲಸಮಾಜದಲ್ಲಿ ನಮ್ಮ ಬಾಣಗಳ ಪ್ರಸಾರ ಮಾಡಿದ್ದೇವೆ. ಗೆಲವಿನಲ್ಲಿ ವಿಶೇಷ ಲಾಭ ದೃಷ್ಟಿಯಿಲ್ಲದೆ, ಶೂರರಾದ ಪಟುಭಟರ ತಲೆಗಳನ್ನು ಮಾತ್ರ ತೆಗೆದುಕೊಂಡೆವು. ನಿಮ್ಮ ಸೈನ್ಯದ ಕಲಿಗಳು ಹುಡುಕುತ್ತಾ ಬಂದು ಬೇಡಲಾಗಿ ಜೀವಕ್ಕೆ ವಂಚಕಾರವನ್ನು ಕೊಟ್ಟಿದ್ದೇನೆ. ಇಗೋ, ನಿನ್ನ ತಲೆಗೆ ಬೆಲೆಯಾಗಿ ನಮ್ಮಲ್ಲಿ ಸಾಹಸ ದ್ರವ್ಯವಿದೆ. ಇಚ್ಛೆಯಿದ್ದರೆ ಪಡೆಯಬಹುದು' ಎಂದು ಹಂಗಿಸಿ ನುಡಿದನು. ಮತ್ತು-'ಎಲೆ ಮರುಳೆ, ಅರ್ಜುನ, ಪ್ರಾಣರಹಿತ

ವಾದ ಆ ತಲೆಯನ್ನಿಟ್ಟುಕೊಂಡು ಇನ್ನೂ ರೋದಿಸುವೆಯೇಕೆ? ಕರ್ಣ ಸುತನು ವೀರನು. ಅವನ ತಲೆಯನ್ನು ಈಶ್ವರ ಪ್ರೀತಿಯಾಗಿ ರುಂಡಮಾಲೆ ಗಾಗಿ ಮಹಾದೇವನಿಗೆ ಅರ್ಪಿಸು. ಶಿವನು ಅಂದು ನಿನಗೆ ಪಾಶುಪತಾಸ್ತ್ರ ವನ್ನು ಕೊಟ್ಟು ಸಲಹಲಿಲ್ಲವೆ? ಅಂತಹ ಸ್ವಾಮಿಯನ್ನು ಮರೆಯಬಹುದೆ? ಸಾಕು, ಇನ್ನೀ ಜಂಜಾಟವೇಕೆ? ಏನು ಯುದ್ಧಮಾಡುವೆಯೋ ಅಥವ ಕುದುರೆಯನ್ನು ಬಿಟ್ಟು ಹೋಗುವೆಯೋ! ಹೇಳು' ಎಂದು ಹೀಯಾಳಿಸಿದನು.

ಮನಸ್ಸಿನಲ್ಲಿ ಚುಚ್ಚಿಕೊಳ್ಳುವಂತಹ ಬಭ್ರುವಾಹನನ ಈ ಮಾತು ಗಳು ಅರ್ಜುನನನ್ನು ರೇಗಿಸಿದುವು. ಕಣ್ಣುಗಳು ಕೆಂಪೇರಿದುವು. ಒಡನೆ ಧೈರ್ಯವನ್ನು ತಂದುಕೊಂಡು ದುಃಖವನ್ನು ಬದಿಗೊತ್ತಿದನು. ಕರ್ಣಜನ ಶಿರ ಸ್ಸನ್ನು ನೆಲದಲ್ಲಿರಿಸಿ, ಗಾಂಡೀವ ಧನುಸ್ಸನ್ನು ಕೈಗೆತ್ತಿಕೊಂಡು, ಠಂಕಾರ ಮಾಡಿ, ತಿರುವಿನಲ್ಲಿ ಬಾಣವನ್ನು ಹೂಡಿ, ಬಭ್ರುವಾಹನನ ಸರ್ವಾಂಗ ಗಳನ್ನೂ ಚುಚ್ಚಿ ನೋಯಿಸುವಂತೆ ಬಾಣಪ್ರಯೋಗ ಮಾಡಿದನು. ಅದ ಕಂಡು ಬಭ್ರುವಾಹನನು-'ಅರ್ಜುನಾ, ಹಗೆಯ ಮಗನಾದ ಆ ಕರ್ಣಜನ ಸಾವಿಗಾಗಿ ಹೀಗೇಕೆ ವ್ಯಸನಗೊಳ್ಳುವೆ? ಈ ಹುಲುಬಾಣಗಳಿಂದ ವ್ಯರ್ಥ ಕಾಲಕ್ಷೇಪವೇಕೆ! ಅಂದು ಉಮಾಕಾಂತನಿಂದ ಇಂದ್ರಕೀಲದಲ್ಲಿ ಪಡೆದ ಪಾಶುಪತಾಸ್ತ್ರವನ್ನು ಹೊರಕ್ಕೆತೆಗೆದುಬಿಡು' ಎಂದು ಹಂಗಿಸಿ ನುಡಿಯುತ್ತಾ, ಬಾಣರಾಶಿಗಳಿಂದ ನಭೋಮಂಡಲವನ್ನು ಕವಿದನು. ಆ ವೀರರಿಬ್ಬರ ಬಾಣಗಳ ಸುಗೆಯಲ್ಲಿ ಭೂಮಿಯಾವುದು, ಅಂತರಿಕ್ಷವಾವುದು, ಎಂಬುದು ಗೋಚರಿಸದಂತಾಯಿತು. ಮಹಾ ತೀಕ್ಷ್ಣಗಳಾದ ಬಾಣಗಳು ರಿಪುಸೇನೆ ಗಳನ್ನು ಅಂತರಿಕ್ಷಕ್ಕೆ ಕೊಂಡೊಯ್ಯುತ್ತಿದ್ದುವು. ಧರಣಿ ಕಂಪಿಸಿತು. ಅರ್ಜು ನನ ಬಾಣಗಳು, ಬಭ್ರುವಾಹನನನ್ನು ಮುತ್ತಿ, ದೇಹವಾದ್ಯಂತವನ್ನೂ ಚುಚ್ಚಿ ಘಾತಿಸಿ, ರಕ್ತಧಾರೆಯನ್ನು ಸಾದ್ಯೋದ್ಧಾರವಾಗಿ ಸುರಿಸುತ್ತಾ, ಜಾಜಿನ ಗಿರಿಯೋ ಎಂಬಂತೆ ಕೆಂಬಣ್ಣದಿಂದ ಕಾಣಿಸುತ್ತಿರಲು, ಆ ವೀ ರನು ಕ್ಷಣಕಾಲ ಮೂರ್ಛೆಹೋಗಿ, ಒಡನೆ ಎಚ್ಚತ್ತೆದ್ದು, ಅರ್ಜುನನನ್ನು ಕುರಿತು-'ಎಲೆ ಧನಂಜಯ, ಕರ್ಣಭೀಷ್ಮ ದ್ರೋಣರನ್ನು ಗರುಡಧ್ವಜ ನಾದ ಶ್ರೀಕೃಷ್ಣನು ಕೃಪಾದೃಷ್ಟಿಯಿಂದ ಗೆದ್ದುಕೊಟ್ಟಿರಲಾಗಿ, ತಿಳಿಯ ದವರು ನೀನೇ ಗೆಲಿದೆಯೆಂದು ಹೊಗಳುವುದನ್ನು ಕೇಳಿ ಕೊಬ್ಬಿಹೋಗಿರುವೆ

ಅಂದಿನ ಆ ಯುದ್ಧವಲ್ಲ-ಇಂದು ಈ ಯುದ್ಧದಲ್ಲಿ ನೀನು ಜಯಿಸುವೆಯಾ ವರೆ ನೀನೇ ವೀರನೆನ್ನಿಸಿಕೊಳ್ಳುವೆ!' ಎಂದು ಪುನಃ ಬಾಣಪ್ರಯೋಗ ಮಾಡಲು, ಆ ಬಾಣಗಳು ಅರ್ಜುನನ ರಥವನ್ನು ಚೂರುಚೂರಾಗಿಸಿ, ಸಾರಥಿಯನ್ನು ತೂರಿಸಿ, ಛತ್ರಚಾಮರಾದಿಗಳನ್ನು ಹರಿದು ಹಾರಿಸಿ, ಅರ್ಜುನನ ಮೈಯೆಲ್ಲಿ ಧಾರೆಧಾರೆಯಾಗಿ ಕೆನ್ನೀರನ್ನು ಸುರಿಸಿದುವು.

ಹೀಗೆ ಉಭಯರಿಗೂ ಗಳಿಗೆಗಳಿಗೆಗೆ ರೋಷವೇರುತ್ತಿರಲು, ಒಬ್ಬೊಬ್ಬರೂ ಹೊಸಹೊಸ ಕಣೆಗಳನ್ನು ಬತ್ತಳಿಕೆಗಳಿಂದ ತೆಗೆದು, ಪ್ರತಿವೀರನ ಪ್ರಾಣಾಪಹರಣ ಮಾಡಬೇಕೆಂದು ಪ್ರಯೋಗಿಸುತ್ತಾ ಇದ್ದರು. ಇಬ್ಬರ ದೇಹಗಳೂ ರಕ್ತದಿಂದ ತೋಯ್ದು ಮುಳ್ಳುಮುತ್ತುಕದ ಮರಗಳಂತೆ ಆಗಿ ನಿಂತವು. ಆ ವೇಳೆಗೆ ಜಾಹ್ನವಿಯ ಶಾಪದಿಂದ ಅರ್ಜುನನ ಸತ್ವವು ಕುಂದತೊಡಗಿತು. ಬಬ್ರುವಾಹನನು ಅದನ್ನು ತಿಳಿದು-'ಅರ್ಜುನಾ, ನನ್ನ ತಾಯಿ ಚಿತ್ರಾಂಗದೆಯು ಪತಿವ್ರತೆಯಲ್ಲವೆ! ಆಕೆಯನ್ನು ವ್ಯಭಿಚಾರಿಣಿಯೆಂದು ನಿಂದಿಸಿದೆಯಲ್ಲಾ! ಆ ದೋಷದಿಂದಲೇ ನಿನ್ನ ಕೈ ಕುಂದುತ್ತಿದೆ. ಕೃಷ್ಣನನ್ನು ಧ್ಯಾನಿಸು. ಮರುಳೆ, ಸಾರಥಿಯಾದ ಶ್ರೀ ಕೃಷ್ಣನ ಸಹಾಯವಿಲ್ಲದೆ ನೀನು ಎಂದು ಯಾರನ್ನು ತಾನೇ ಜಯಿಸಿದ್ದೀಯೆ? ಈ ಬಿಂಕವೇಕೆ?' ಎಂದು ಮೂದಲಿಸಿ-'ಪಾರ್ಥಾ, ಭೂಮಿಗೋಸ್ಕರವಾಗಿ ಅಂದು ಭಾರತಯುದ್ಧದಲ್ಲಿ, ಕರ್ಣನನ್ನು ಕೊಂದಿರಿ. ಇಂದು ನನ್ನ ಕೈಯಿಂದ ಅವನ ಮಗನನ್ನು ಕೊಲ್ಲಿಸಿದಿರಿ. ಇನ್ನು ನಿಮ್ಮ ಹಗೆಯು ನಿರ್ನಾಮವಾಯಿತಲ್ಲವೆ! ಈಗ ನಿನಗೆ ತ್ರಾಣವಿದ್ದರೆ ನಿಂತು ಶ್ರೀಕೃಷ್ಣನನ್ನು ನೆನೆದು ಯುದ್ಧಮಾಡು. ಹಾಗಿಲ್ಲದಿದ್ದರೆ ಪ್ರಾಣಗಳನ್ನು ಕಾಯ್ದು ಬಿಡುವೆನು ಹೊರಟುಹೋಗು' ಎಂದು ಜರಿದು ನುಡಿದನು.

'ಎಲೈ ಏನೆಂದು ಬೊಗಳುತ್ತಿರುವೆ! ಕ್ಷತ್ರಿಯನಿಗೆ ಯುದ್ಧದಲ್ಲಿ ಗೆಲ್ಲುವಿಕೆಯೂ ಮಡಿಯುವಿಕೆಯೂ ಸರ್ವಸಾಮಾನ್ಯ ವಿಚಾರಗಳು. ನಾವು ಕರ್ಣನನ್ನು ಕೊಂದರೇನು, ಅವನ ಸುತನು ಯುದ್ಧದಲ್ಲಿ ಅಸುವಳಿದರೇನು? ನಾನು ಶಕ್ತಿಹೀನನೆಂದು ನಿಂದಿಸುವೆಯಾ? ನೀನು ಶಕ್ತನೋ' ಎಂದು ನುಡಿಯುತ್ತಾ ಪಾರ್ಥನು ಪ್ರತಿಬಾಣಗಳನ್ನು ಬಿಡುತ್ತಿರಲು ಬಬ್ರುವಾಹನನು ಅವುಗಳೆಲ್ಲವನ್ನೂ ತರಿದೊತ್ತಿ-'ಎಲೈ ಅರ್ಜುನಾ, ನಿನ್ನ ಒಡನಾಡಿ

ಯೂ, ಆಪದ್ಬಾಂಧವನೂ ಆದ ಶ್ರೀಕೃಷ್ಣನನ್ನು ಮರೆತೆಯಾದುದರಿಂದ ದ್ರೋಣಾಚಾರ್ಯರು ನಿನಗೆ ಪ್ರೀತಿಯಿಂದ ಕೊಟ್ಟಿದ್ದ ಅಸ್ತ್ರಶಸ್ತ್ರಗಳೂ, ಪರಮೇಶ್ವರನು ಅನುಗ್ರಹಿಸಿ ಕೊಟ್ಟಿದ್ದ ಪಾಶುಪತಾದಿ ಅಸ್ತ್ರಗಳೂ ಮರೆತುಹೋದುವು. ಇನ್ನೇಕೆ ಯುದ್ಧಮಾಡುವೆನೆಂಬ ಈ ಸಾಹಸವು! ಸಾಕಿನ್ನು' ಎಂದು ನುಡಿಯುತ್ತಾ, ಮಹಾ ಭಯಂಕರವಾದ ಒಂದು ಜ್ವಾಲಾರೂಪಿ ಮಾರ್ಗಣವನ್ನು ಮೂಡಿಗೆಯಿಂದ ತೆಗೆದು, ಅರ್ಧಚಂದ್ರಾಕಾರವಾದ ಅದನ್ನು ಅಭಿಮಂತ್ರಿಸಿ ಬಿಡಲು ಅದು ದಿಕ್ತಟಗಳನ್ನೂ ಜಾಜ್ವಲ್ಯಮಾನಗೊಳಿಸುತ್ತಾ ಬರುತ್ತಿದ್ದಿತು. ಭಯಂಕರವಾದ ಆ ಬಾಣದ ವೇಗಕ್ಕೆ ಗ್ರಹಗಳು ಅದುರಿದುವು. ಉಲ್ಕಾಪಾತಗಳು ಧರೆಗೆ ಬಿದ್ದುವು. ಭೂಮಿಯು ನಡುಗಿಹೋಯಿತು. ಕಿಡಿಗಳನ್ನು ಉದುರಿಸುತ್ತಾ, ಧೂಮಕೇತುವಿನಂತೆ ಮೇಲ್ವರಿದು ಬರುತ್ತಿದ್ದ ಆ ಬಾಣಕ್ಕೆ ಎದುರಾಗಿ ನಿಂತು ಕಡುಗಲಿ ಅರ್ಜುನನು ಪ್ರತಿಬಾಣವನ್ನು ಹೂಡಿಬಿಟ್ಟು ಅದನ್ನು ಅರ್ಧಕ್ಕೆ ಕತ್ತರಿಸಿದನು. ಅರ್ಧಭಾಗವು ಹಿಂದಕ್ಕೆ ಬಿದ್ದಿತಾದರೂ, ಮುಂದಿನ ಬಾಣಾರ್ಧವು ವಿದ್ಯುದ್ವೇಗದಿಂದ ಬಂದು ಕಿರೀಟ ಕುಂಡಲಾಲಂಕೃತವಾದ ಅರ್ಜುನನ ಕೊರಳನ್ನು ಕತ್ತರಿಸಿ ತಲೆಯನ್ನು ಅಂತರಿಕ್ಷಕ್ಕೆ ಹಾರಿಸಿತು. ಕಿರೀಟಿಯ ತಲೆಯು ಕೃಷ್ಣ, ಕೇಶವ, ಮಾಧವ, ಮುಕುಂದ, ಮುರಮರ್ದನ ಎಂದು ಭಗವನ್ನಾಮಗಳನ್ನು ಉಚ್ಚರಿಸುತ್ತಾ, ಕರ್ಣಸುತನ ತಲೆಯು ಬಿದ್ದಿದ್ದ ಸ್ಥಳಕ್ಕೆ ಹೋಗಿ ಅದರಬಳಿ ಬಿದ್ದಿತು. ಅರ್ಜುನನ ಅಳಿವಿನಿಂದ ಪಾಂಡವ ಸೇನೆಯು ಭಯಭ್ರಾಂತವಾಗಿ ಶೋಕಸಾಗರದಲ್ಲಿ ಮುಳುಗಿತು.



**ಅಧ್ಯಾಯ ೬.** **'ಪುನರುಜ್ಜೀವನ.'**

ಕಾರ್ತೀಕ ಮಾಸದ ಏಕಾದಶೀ ಕುಜವಾರದ ಅಸ್ತಮಯ ಸಮಯ. ಜಗದೇಕ ವೀರನಾದ ಅರ್ಜುನನು ಅಂದು, ದೇವಗಂಗೆಯ ಶಾಪಫಲವಾಗಿ, ಸ್ವಪುತ್ರನ ಹಸ್ತನಿರ್ಮುಕ್ತವಾದ ಬಾಣದಿಂದಲೇ ಘಾತಿಸಲ್ಪಟ್ಟು ಭೂಮಿ

ಗೊರಗಿದನು. ವೀರಾಗ್ರೇಸರನಾದ ಆ ಪಾಂಡುಪುತ್ರನು ವಿಧಿಹತನಾಗಿ ಬಿದ್ದ ಆ ದೃಶ್ಯವು ಪಾಂಡವ ಸೇನೆಯನ್ನು ಅಲ್ಲೋಲಕಲ್ಲೋಲ ಮಾಡಿಬಿಟ್ಟಿತು. ಬಭ್ರುವಾಹನನ ಸೈನ್ಯವಾದರೋ ಮಹತ್ಸಂಭ್ರಮದಿಂದ ಕೋಲಾಹಲ ಧ್ವನಿಮಾಡುತ್ತಿತ್ತು. ನಗರದ ಬೀದಿಬೀದಿಗಳನ್ನೂ ಶೃಂಗರಿಸಿ, ಪಟ್ಟಣಿಗರು, ಮೂರು ಲೋಕದ ಗಂಡನೆಂಬ ಬಿರುದಿನಿಂದ ಹೊಗಳಿಸಿಕೊಂಡ ಗಾಂಡೀವಿಯ ರುಂಡವನ್ನು ಚೆಂಡಾಡಿ ವಿಜಯೋತ್ಸವದಿಂದ ಬರುತ್ತಿರುವ ಗಂಡುಗಲಿ ಮಗನನ್ನು ಎದುರುಗೊಳ್ಳೆಂದು ಚಿತ್ರಾಂಗದೆಗೆ ಬಿನ್ನೈಸಿದರು. ಚಿತ್ರಾಂಗದೆಯು 'ಅರ್ಜುನನು ಹತನಾದನು' ಎಂಬ ಮಾತುಗಳು ಕಿವಿಗೆ ಬಿದ್ದೊಡನೆಯೇ-'ಹಾ' ಎಂದು ಅರಚಿಕೊಂಡು ಭೂಮಿಗೆ ಬಿದ್ದು-'ಅಕ್ಕಟಾ, ಕೆಟ್ಟೆನೆ ? ಇಂದಿಗೆ ನನ್ನ ಮಾಂಗಲ್ಯದ ಆಯುಷ್ಯದ ಅವಧಿ ತೀರಿತೇ ? ಹಾ ನಾಥಾ ನನಗಿನ್ನಾರು ದಿಕ್ಕು !' ಎಂದು ಅರಮನೆಯೆಲ್ಲವೂ ಪ್ರತಿಧ್ವನಿ ಕೊಡುವಂತೆ ರೋದಿಸತೊಡಗಿದಳು.

ವಿಜಯೋತ್ಸವದಿಂದ ನಗರವನ್ನು ಹೊಕ್ಕು, ಅರಮನೆಯ ಬಳಿಗೆ ಬಂದು ಹೊಂದೇರಿನಿಂದಿಳಿದ ಬಭ್ರುವಾಹನನು, ಸ್ತ್ರೀಜನದ ರೋದನಧ್ವನಿಯನ್ನು ಕೇಳಿ, ಗಾಬರಿಗೊಂಡು, ನೇರವಾಗಿ ಅಂತಃಪುರಕ್ಕೆ ನಡೆದನು. ಅಲ್ಲಿ ಪೂಜ್ಯಳಾದ ತನ್ನ ಮಾತೆಯು ಮಹಾಶೋಕಗ್ರಸ್ತಳಾಗಿ ರೋದಿಸುತ್ತಿದ್ದುದನ್ನು ಕಂಡು-'ತಾಯೇ, ನಿನ್ನೀ ವ್ಯಸನಕ್ಕೆ ಕಾರಣವೇನು ? ನಿನ್ನ ಮಗನಾದ ನಾನು ಯುದ್ಧರಂಗದಲ್ಲಿ ಅರಿವೀರನಿಗೆ ಬೆಂಗೊಟ್ಟೋಡಿದುದಿಲ್ಲ. ಅಲ್ಲದೆ ನನಗೆ ಅಪಜಯವಾದುದಿಲ್ಲ. ಸಂಗ್ರಾಮದಲ್ಲಿ ತ್ರಿಲೋಕವೀರನಾದ ಪಾರ್ಥನ ಶಿರವನ್ನು ಚೆಂಡಾಡಿ ವಿಜಯೋತ್ಸವದಿಂದ.......' ಎಂದು ನುಡಿಯುತ್ತಿರಲು, ಆ ಮಾತುಗಳು ಕಿವಿಗೆ ಬೀಳುವುದಕ್ಕೆ ಮುಂಚೆಯೇ, ಚಿತ್ರಾಂಗದೆಯು-'ಹಾ' ಎಂದು ಅಬ್ಬರಿಸಿ ಧರೆಗೆ ಬಿದ್ದು ಪುನಃ ಮೂರ್ಛೆಹೋದಳು. ಬಭ್ರುವಾಹನನು ಶೈತ್ಯೋಪಚಾರ ಮಾಡಲು, ಆಕೆಯು ಎಚ್ಚತ್ತು ಕುಳಿತು-'ಅಕ್ಕಟಾ, ಮಗನೆ! ಅರ್ಜುನನನ್ನು ಕೊಂದು ಬಂದೆಯಾ! ಪಿತೃವಧೆಯನ್ನುಮಾಡಿ ಶ್ರೇಯಸ್ಸನ್ನು ಸಂಪಾದಿಸಿದೆಯಾ! ಅಯ್ಯೋ, ನಾಥನು ಎಲ್ಲಿದ್ದರೂ, ನನ್ನ ಮುತ್ತೈದೆತನಕ್ಕೆ ಲೋಪವಿಲ್ಲವೆಂದುಕೊಂಡು ಸಮಾಧಾನದಿಂದ ಇದ್ದ ನನಗೆ ಮಾಂಗಲ್ಯದ ಹೊರೆಯಾದರೂ ಏತಕ್ಕೆಂದು

ಅವನನ್ನು ಇಳಿಸಿದೆಯಾ? ಅಕ್ಕಟಾ ಇನ್ನೆಲ್ಲಿಗೆ ಹೋಗಲಿ! ನನಗಿನ್ನಾರು ದಿಕ್ಕು?" ಎಂದು ಕಲ್ಲುರಗಳು ಕರಗುವಂತೆ ಹಂಬಲಿಸುತ್ತಿದ್ದಳು. ಅಷ್ಟರಲ್ಲಿ ಅಲ್ಲಿಗೆ ಬಂದ ಉಲೂಪಿಯು, ಅರ್ಜುನನು ತನಗೆ ಗುರುತಾಗಿ ಕೊಟ್ಟು ಹೋಗಿದ್ದ ದಾಳಿಂಬೆಯ ಗಿಡವು ದಾವಾಗ್ನಿಯಿಂದ ಸುಟ್ಟಂತೆ ನಾಶವಾಗಿದ್ದುದನ್ನು ಕಂಡು, ಪಾರ್ಥನು ಹತನಾದುದು ನಿಶ್ಚಯವೆಂದು ತಿಳಿದು, ಒಡನೆ ಎಲ್ಲರೊಂದಾಗಿ ರಣಭೂಮಿಗೆ ನಡೆದು, ಅಲ್ಲಿ ರುಂಡಮುಂಡಗಳೆರಡೂ ಬೇರೆ ಬೇರೆಯಾಗಿ ಬಿದ್ದಿದ್ದ ಪಾರ್ಥ-ವೃಷಕೇತುಗಳ ದೇಹಗಳನ್ನು ಕಂಡು, ಹಲವು ಬಗೆಯಿಂದ ರೋದಿಸತೊಡಗಿದರು. ಉಲೂಪಿ ಚಿತ್ರಾಂಗದೆಯರು ಅರ್ಜುನನ ಶಿರವನ್ನು ಎದೆಗಪ್ಪಿಕೊಂಡು, ಹುಬ್ಬುಗಳನ್ನು ನೇವರಿಸುತ್ತಾ, ಮುಖವನ್ನು ಚುಂಬಿಸುತ್ತಾ, ದೇಹವನ್ನು ಅಪ್ಪಿಕೊಳ್ಳುತ್ತಾ ದಿಕ್ಕುಕಾಣದೆ ರೋದಿಸುತ್ತಿರಲು ' ಬಭ್ರುವಾಹನನು-ತಾನು ಶೋಕಪರವಶನಾಗಿ ಎಂತಹ ಪ್ರಮಾದಕಾರ್ಯ ಮಾಡಿದೆನೆಂದುಕೊಂಡು-ತಾಯಿಪಾದಗಳಿಗೆ ನಮಸ್ಕರಿಸಿ-'ತಾಯೇ, ಅರ್ಜುನನು ನಮ್ಮಯ್ಯನೆಂದು ನೀನು ಹೇಳಿದ ನುಡಿಯನ್ನು ಕೇಳಿ, ಸಕಲವಿಧ ಸುವಸ್ತುಗಳನ್ನೂ ಕಾಣಿಕೆಯಾಗಿ ಕೊಂಡೊಯ್ದು ಪಾದಾಕ್ರಾಂತನಾಗಿ ಹೇಳಿಕೊಂಡೆನಾದರೂ, ಆತನು ನನ್ನನ್ನು ಹಲವು ಪರಿಯಿಂದ ನಿರಾಕರಿಸಿ ಸಭೆಯವರಲ್ಲಿ ಕೇಳಬಾರದ ಮಾತುಗಳನ್ನಾಡಿ ಅವಮಾನಗೊಳಿಸಿದನು. ಮಾತೆಯೇ ಆ ಮಾತುಗಳನ್ನು ಕಿವಿಗಳಿಂದ ಕೇಳಲಾರದೆ, ಕ್ಷಾತ್ರತಾಮಸವು ಬುದ್ಧಿಯನ್ನು ಭ್ರಮೆಗೊಳಿಸಲು, ಪ್ರತಿಜ್ಞೆ ಮಾಡಿ, ಅದನ್ನು ಸಾರ್ಥಕಪಡಿಸಲಿಕ್ಕಾಗಿ, ಆತನ ತಲೆಯನ್ನು ಧರೆಗಿಳಿಸಿದೆನು. ಈಗ, ಪಿತೃಘಾತಕಿಯೆನ್ನಿಸಿಕೊಂಡು, ಈ ಪಾಪಿದೇಹವನ್ನು ಹೊತ್ತು ಜೀವಿಸಲಾರೆನು. ಅಗ್ನಿಪ್ರವೇಶನಮಾಡಿ, ಈ ದೇಹವನ್ನು ನೀಗಿ ಭೂಭಾರವನ್ನಿಳಿಸುವೆನು' ಎಂದು ನುಡಿದು ಅಗ್ನಿಕುಂಡವನ್ನು ಸೃಷ್ಟಿಸಿ ಅದರಲ್ಲಿ ಪ್ರವೇಶಿಸಲು ಸಿದ್ಧನಾದನು.

ಅಗ್ನಿಪ್ರವೇಶವನ್ನು ನಿಶ್ಚೈಸಿ, ಪ್ರಾಣತ್ಯಾಗಕ್ಕೆ ಸಿದ್ಧನಾಗಿದ್ದ ಮಗನನ್ನು ಕಂಡು ಚಿತ್ರಾಂಗದೆಯು ಕೋಪಗೊಂಡು-'ಎಲಾ ಹೇಡಿಗನೇ, ಮಾಡಬಾರದ ಕೆಲಸಮಾಡಿ, ಈಗ ಪ್ರಾಣತ್ಯಾಗಮಾಡಿದರೆ ಅದರಿಂದ ಏನು ಪುರುಷಾರ್ಥ ಸಾಧನೆಯಾಯಿತು? ಬಿಡು, ಹೇಡಿಯಂತೆ ಪ್ರಾಣಬಿಡುವೆ

ಯೇಕೆ? ಸರ್ವಜ್ಞನಾದ ಕೃಷ್ಣಸ್ವಾಮಿಗೆ ಅರ್ಜುನನ ಮರಣವು ಗೋಚರವಾಗದಿರದು. ಹಾಗೆ ಪರಮಪ್ರಿಯನಾದ ಪಾರ್ಥನ ಮೃತಿವಿಚಾರವನ್ನು ತಿಳಿದ ಶ್ರೀವರನು ಇಲ್ಲಿಗೆ ಬಾರದಿರನು.' 'ಮಮಪ್ರಾಣಾಹಿ ಪಾಂಡವಾಃ' ಎಂದಿರುವ ಶ್ರೀಕೃಷ್ಣಮೂರ್ತಿಗೆ ಅರ್ಜುನನ ಪ್ರಾಣದ ಹೊಣೆಗಾರಿಕೆ ಇಲ್ಲವೆ? ಆತುರಪಡಬೇಡ. ಸ್ವಲ್ಪಹೊತ್ತು ಸಾವಕಾಶಮಾಡು' ಎಂದು ನುಡಿದಳು.

ತಾಯ ಮಾತಿನಿಂದ ಅಗ್ನಿಪ್ರವೇಶಮಾಡದೆ ತಡೆದು ನಿಂತ ಬಭ್ರುವಾಹನನನ್ನು ಕರೆದು ಉಲೂಪಿಯು-'ಮಗನೇ, ಪಾರ್ಥನೂ ಕರ್ಣಸುತನೂ ಪುನರ್ಜೀವಿತರಾಗುವ ಒಂದು ಉಪಾಯವನ್ನು ಹೇಳುವೆನು ಕೇಳು. ಪಾತಾಳ ಲೋಕದಲ್ಲಿ ಗರುಡನ ಹಾವಳಿಯಿಂದ ನೊಂದ ಸರ್ಪಕುಲವನ್ನು ಪುನಃ ಬದುಕಿಸುವುದಕ್ಕಾಗಿ ಶೇಷರಾಜನು ಪರಮೇಶ್ವರನ ವರಲಬ್ಧವಾದ ಸಂಜೀವಕದ ಮಣಿಯೆಂಬ ಒಂದು ಮಣಿವಿಶೇಷವನ್ನು ಇಟ್ಟುಕೊಂಡಿರುವನು. ಅದನ್ನು ತರುವುದಾದರೆ, ಅದರಿಂದ ಮೃತರಾದ ಈ ಇಬ್ಬರೂ ಜೀವಿಸುವರು. ಆದರೆ ಸರ್ಪರಾಜನ ಸ್ವಾಧೀನದಲ್ಲಿರುವ ಆ ಮಣಿಯು ದೊರೆವುದು ಮಾತ್ರ ಬಹು ದುಸ್ತರ' ಎಂದಳು. ಆ ಮಾತನ್ನು ಕೇಳಿ ಬಭ್ರುವಾಹನನು,-'ತಾಯೇ ಏನೆಂದು ನುಡಿಯುತ್ತಿರುವೆ? ಈ ಕ್ಷಣವೇ ಪಾತಾಳ ಲೋಕಕ್ಕೆ ದಂಡೆತ್ತಿ ನಡೆದು, ಮಹಾ ವಿಷಜ್ವಾಲೆಯಿಂದ ಭಯಂಕರವೆನ್ನಿಸುವ ಆ ಸರ್ಪಸಂತತಿಯನ್ನುಗೆಲಿದು ಸಂಜೀವಕದ ಮಣಿಯನ್ನು ಪಡೆದು ಬರುವೆನು. ಕೊಡದಿದ್ದರೆ, ಪಾತಾಳ ಲೋಕವನ್ನೇ ಧ್ವಂಸಗೊಳಿಸುವೆನು. ಅವರಿಗೆ ಸಹಾಯಕರಾಗಿ ಬರುವುದಾದರೆ ಇಂದ್ರಾದಿ ಅಷ್ಟದಿಕ್ಪಾಲಕರನ್ನೂ, ಇತರ ದೇವಾನುದೇವತೆಗಳನ್ನೂ ನೋಯಿಸುವೆನು. ಎಂತೂ ಸಂಜೀವಕದ ಮಣಿಯಿಲ್ಲದೆ ಹಿಂದಿರುಗುವುದಿಲ್ಲವೆಂದು ನಂಬು. ಈ ಕಾರ್ಯವನ್ನು ಸಾಧಿಸಿಕೊಂಡು ಬಾರದಿದ್ದರೆ, ನನ್ನನ್ನು ತಾಯಿಯು ಮಗನೆಂದು ಹೆತ್ತು ಸಲಹಿದುದು ಯಾವ ಸಾಫಲ್ಯಕ್ಕಾಗಿ? ಯೋಚಿಸಬೇಡಿರಿ. ಇವರಿಬ್ಬರ ದೇಹಗಳನ್ನು ಮಾತ್ರ ಜಾಗ್ರತೆಯಿಂದ ನೋಡಿಕೊಂಡಿರಿರಿ' ಎಂದು ನುಡಿದನು. ಆದರೆ ಉಲೂಪಿಯು-'ಸಂಜೀವಕದ ಮಣಿಯೆಂಬುದು ಪಾತಾಳದ ಸರ್ಪಕುಲಕ್ಕೇ ಪ್ರಾಣಸ್ವರೂಪವಾಗಿರುವುದು.

ಅದನ್ನು ಉಪಾಯದಿಂದ ತರಿಸುವ ಪ್ರಯತ್ನಮಾಡುತ್ತೇನೆ. ಅದು ಸಾಧ್ಯವಾಗದಿದ್ದರೆ, ತರುವಾಯ ನೋಡಬಹುದು' ಎಂದು, ಪುಂಡರೀಕನೆಂಬ ತನಗೆ ಆಪ್ತನಾದ ಒಬ್ಬ ಸರ್ಪದೂತನನ್ನು ಕರೆದು, ಅವನ ಮೂಲಕ ತನ್ನ ತಂದೆಯಾದ ಶೇಷರಾಜನಿಗೆ ಹೇಳಿಕಳುಹಿಸಿದಳು.

ಪುಂಡರೀಕನೆಂಬ ನಾಗನು, ಅತಳ ವಿತಳ ಸುತಳ ರಸಾತಳ ತಳಾತಳ ಮಹಾತಳಗಳೆಂಬ ಆರು ಲೋಕಗಳನ್ನು ಕಳೆದು, ಪಾತಾಳವನ್ನು ಸೇರಿ ಅಲ್ಲಿ ಸಮಯ ನೋಡಿ, ಶೇಷರಾಜನನ್ನು ಕಂಡು, ಮಗಳಾದ ಉಲೂಪಿಯು ಕೊಟ್ಟ ಕರ್ಣಭೂಷಣಗಳನ್ನು ಮುಂದಿಟ್ಟು, ಪಾಂಡವ ಮಧ್ಯನೂ, ಉಲೂಪಿ ಚಿತ್ರಾಂಗದೆಯರ ರಮಣನೂ ಆದ ಅರ್ಜುನನು ಗಂಗಾಶಾಪದಿಂದ ಮೃತನಾಗಿದ್ದಾನೆ. ಸಂಜೀವಕದ ಮಣಿಯನ್ನು ಕೊಟ್ಟು ಕಾಪಾಡಬೇಕು' ಎಂದು ಬೇಡಿಕೊಂಡನು. ಶೇಷರಾಜನು ಪರೋಪಕಾರಕ್ಕಾಗಿ ಅದನ್ನು ಕೊಟ್ಟು ಕಳುಹಿಸತಕ್ಕುದು ಯುಕ್ತವೆಂದು ಯೋಚಿಸಿ, ಹಾಗೆ ಕೊಡಲು ಸಮ್ಮತಿಸಿದನು. ಆದರೆ ಅಷ್ಟರಲ್ಲಿ ಧೃತರಾಷ್ಟ್ರನೆಂಬೊಬ್ಬ ನಾಗಮುಖ್ಯನು,-'ಮನುಷ್ಯಲೋಕದಲ್ಲಿ ಜನರು ಕೃತಘ್ನರು. ಇದನ್ನು ತೆಗೆದುಕೊಂಡು ಹೋದತರವಾಯ ತಮ್ಮ ಪ್ರಯೋಜನವನ್ನು ಪಡೆದು ದುರಾಶಾಬದ್ಧರಾಗಿ ಹಿಂದಕ್ಕೆ ಕಳುಹಿಸಿಕೊಡದೆ ಮೋಸಗೊಳಿಸುವರು. ಹಾಗಾದರೆ, ನಮ್ಮ ನಾಗಕುಲವೇ ಗರುಡನ ಉರುಬೆಗೆ ಸಿಕ್ಕಿ ಸಾಯಬೇಕಾದೀತು. ಪಾಂಡವರಿಗೆ ಶ್ರೀಕೃಷ್ಣಸ್ವಾಮಿಯು ಸಹಾಯವಿರುವುದರಿಂದ ಅರ್ಜುನಾದಿಗಳು ಹೇಗೂ ಜೀವಿಸುವರು. ಅದಕ್ಕಾಗಿ ನಾವೇಕೆ ನಷ್ಟಪಡಬೇಕು ?' ಎಂದು ನುಡಿದು, ಆ ಮಣಿಯನ್ನು ಶೇಷರಾಜನು ಕೊಡದಂತೆ ನಿವಾರಿಸಿದನು.

ಪಾತಾಳಲೋಕದಿಂದ ಸಂಜೀವಕದ ಮಣಿಯು ಲಭ್ಯವಾಗಿ, ಅದರ ಪ್ರಭಾವದಿಂದ ತಮ್ಮ ರಮಣನು ಪುನರ್ಜೀವಿತನಾಗುವನು ಎಂದು ಬೆಟ್ಟದಷ್ಟು ಆಸೆಯನ್ನಿಟ್ಟುಕೊಂಡು, ಆ ಶವಗಳ ಕಾಲುಬದಿಯಲ್ಲಿ ರಾತ್ರಿಯೆಲ್ಲಾ ಕುಳಿತು ಕಾದುಕೊಂಡಿದ್ದ, ಉಲೂಪಿ ಚಿತ್ರಾಂಗದೆಯರು, ಪುಂಡರೀಕನಿಂದ ಮಣಿಯು ಲಭ್ಯವಾಗಲಿಲ್ಲವೆಂಬ ಮಾತನ್ನು ಕೇಳಿ, ಇನ್ನು ತಮ್ಮ ಮಂಗಳ ಸೂತ್ರಗಳ ಆಸೆಯು ತೀರಿತೆಂದುಕೊಂಡು, ಅರ್ಜುನನ ಆ ಶವದೊಂದಿಗೆ ಸಹಗಮನ ಮಾಡಲು ಸಿದ್ಧರಾದರು. ಅಷ್ಟರಲ್ಲಿ ಪಾರ್ಥಸುತನು, ಆ ಮಾತನ್ನು ಕೇಳಿ ಇಂತಹ ವೇಳೆಯಲ್ಲಿ ತಮಗೆ ಸಹಾಯಮಾಡದೆ ಲೋಭ

ಮಾಡಿದ ಆ ನಾಗಸರ್ಪಗಳನ್ನು ಧ್ವಂಸಮಾಡಿ ಆ ಸಂಜೀವಕದ ಮಣಿಯನ್ನು ತಂದೇತರುವೆನೆಂದು ಶಪಥಮಾಡಿ, ಮಹಾಸ್ತ್ರಗಳ ಪ್ರಯೋಗದಿಂದ ಪಾತಾಳಲೋಕದವರೆಗೂ ಮಾರ್ಗವನ್ನುಂಟುಮಾಡುವ ಒಂದು ಸುರಂಗವನ್ನು ತೋಡಿ, ತನ್ನ ಸೈನ್ಯದೊಂದಿಗೆ ಆ ಸುರಂಗ ಮಾರ್ಗವಾಗಿ ಪ್ರಯಾಣ ಮಾಡಿದನು.

ಮಾನವಲೋಕದ ಅಗಣಿತ ಸೇನೆಯು ವಿವಿಧಾಯುಧಗಳನ್ನು ಧರಿಸಿ, ತಮ್ಮ ಲೋಕಕ್ಕೆ ದಂಡೆತ್ತಿ ಬಂದುದನ್ನು ಕಂಡು, ಸರ್ಪಕುಲವು ಭಯಭ್ರಾಂತವಾಗಿ ಶೇಷರಾಜನ ಬಳಿ ಮೊರೆಯಿಟ್ಟಿತು. ಆತನು, ದುಷ್ಟಬುದ್ಧಿಯಾದ ಧೃತರಾಷ್ಟ್ರನ ದುರ್ಬೋಧನೆಗೆ ಒಳಗಾಗಿ, ತಾವು ಸಂಜೀವಕದ ಮಣಿಯನ್ನು ಕಳುಹಿಸದಿದ್ದುದರ ಫಲವಿದು ಎಂದು ನುಡಿದು, ಮುಂದೆ ಚಿಂತಿಸಿ ಉಪಾಯವಿಲ್ಲವೆಂದುಕೊಂಡು, ಸೈನ್ಯವನ್ನು ಜೊತೆಗೂಳಿಸಿ, ಬಭ್ರುವಾಹನನ ಸೇನೆಯಮೇಲೆ ಯುದ್ಧಕ್ಕಾಗಿ ಕಳುಹಿಸಿದನು. ಬಭ್ರುವಾಹನನಾದರೋ ತನ್ನಮೇಲೇರಿ ಬರುತ್ತಿದ್ದ ಆ ಸರ್ಪಸೈನ್ಯದಮೇಲೆ ಶರವರ್ಷಗಳನ್ನು ಸುರಿದು, ಅವುಗಳ ಹೆಡೆಗಳನ್ನು ಹರಿದು, ವಕ್ತ್ರಗಳನ್ನು ಸೀಳಿ, ತಲೆಗಳನ್ನು ಕತ್ತರಿಸಿ, ಹೀಗೆ ಹಲವು ಬಗೆಯಿಂದ ನೋಯಿಸುತ್ತಿರಲು, ಸರ್ಪಕುಲವು ಮಹಾರೋಷದಿಂದ, ಹಾಲಾಹಲಕ್ಕೆ ಸದೃಶವಾದ ತಮ್ಮ ವಿಷವನ್ನು ಕಕ್ಕುತ್ತಾ ಅನೇಕ ಸೈನ್ಯವನ್ನು ನಾಶಗೊಳಿಸಿತು. ಆ ವಿಷಜ್ವಾಲೆಯನ್ನು ಸಹಿಸಿಕೊಳ್ಳಲಾರದೆ, ತನ್ನ ಸೇನೆಯು ಮಡಿಯುತ್ತಿರುವುದನ್ನು ಕಂಡು ಬಭ್ರುವಾಹನನು, ರೋಷಾವೇಶಪರನಾಗಿ, ಮಹಾಸ್ತ್ರಗಳನ್ನು ಪ್ರಯೋಗಿಸಲು, ಹದ್ದು, ಮುಂಗಿಲಿ, ನವಿಲು, ಕಟ್ಟಿರುವೆ ಮುಂತಾದುವು ಅಸಂಖ್ಯವಾಗಿ ಉದ್ಭವಿಸಿ, ಸರ್ಪಸೈನ್ಯವನ್ನು ಮುತ್ತಿ ಕೊಲ್ಲಲಾರಂಭಿಸಿದುವು. ಸರ್ಪಕುಲಕ್ಕೆ ಪ್ರಳಯಕಾಲವೇ ಬಂದಿತೆಂದುಕೊಂಡು, ನಾಗಮುಖ್ಯರೆಲ್ಲರೂ ಆ ಸಂಜೀವಕದ ಮಣಿಯನ್ನು ಅರ್ಜುನಪುತ್ರನಿಗೆ ಕೊಟ್ಟು ತಮ್ಮ ಪ್ರಾಣಗಳನ್ನು ರಕ್ಷಿಸೆಂದು ಶೇಷರಾಜನಲ್ಲಿ ಮೊರೆಯಿಟ್ಟುಕೊಂಡರು. ಶೇಷರಾಜನು, ಧೃತರಾಷ್ಟ್ರನನ್ನು ಬೈದು, ಅರ್ಜುನಿಯನ್ನು ಯೋಗ್ಯಗೌರವದಿಂದ ಕಂಡು, ಆ ಸಂಜೀವಕದ ಮಣಿಯನ್ನೂ ಇತರ ಅನೇಕ ರತ್ನಗಳನ್ನೂ ಕೊಟ್ಟು,-'ರಾಜೇಂದ್ರ, ಯಾದವ ಶಿಖಾಮಣಿಯೇ ಇದ್ದು ಪಾಂಡವರನ್ನು ರಕ್ಷಿಸುತ್ತಿರುವಾಗ್ಗೆ ಈ ಮಣಿಯಿಂದ ಯಾವ ಪ್ರತ್ಯುಪಕಾರವಾದೀತು! ಆದರೂ ಇದು ನಮ್ಮ ಅಲ್ಪ ಸಹಾಯ. ಇದರಿಂದ ಸಾಧ್ಯ

ವಾದಷ್ಟು ಸಹಾಯವಾಗಿ ಆ ಭಗವದ್ಭಕ್ತರು ಜೀವಿಸಲಿ' ಎಂದು ನುಡಿದು ಉಪಚಾರೋಕ್ತಿಗಳಿಂದ ಕಳುಹಿಸಿದನು.

ನಾಗರಾಜನು, ಹಾಗೆ ಸಂಜೀವಕದ ಮಣಿಯನ್ನು ಕೊಟ್ಟು ಕಳುಹಿಸಿದುದು, ದುರುಳನಾದ ಧೃತರಾಷ್ಟ್ರನೆಂಬ ಆ ನಾಗನಿಗೆ ಆಗಲೂ ಸಹನೆಯಾಗಲಿಲ್ಲ. ಅಕ್ಕಟಾ, ಈ ಸಂಜೀವಕ ಮಣಿಪ್ರಭಾವದಿಂದ ಅರ್ಜುನನು ಪುನಃ ಉಜ್ಜೀವಿತನಾಗುವನಲ್ಲಾ-ತನ್ನ ಪ್ರಯತ್ನವು ಫಲಕಾರಿಯಾಗಲಿಲ್ಲವಲ್ಲಾ ಎಂದು ಕಳವಳಗೊಂಡು ಚಿಂತಿಸುತ್ತಿರಲು, ಅವನ ಮಕ್ಕಳಾದ ದುರ್ಬುದ್ಧಿ ದುಸ್ಸ್ವಭಾವಗಳೆಂಬಿಬ್ಬರು ಸರ್ಪಗಳು, ತಾವು ಉಪಾಯದಿಂದ ರಣರಂಗವನ್ನು ಪ್ರವೇಶಿಸಿ, ಅರ್ಜುನ ವೃಷಕೇತುಗಳ ತಲೆಗಳನ್ನು ಅಲ್ಲಿಂದ ಅಪಹರಿಸಿ, ಗುಪ್ತವಾದೊಂದೆಡೆಯಲ್ಲಿ ಔತ್ತಿಟ್ಟುಬಿಡುವೆವೆಂದೂ, ಹಾಗೆ ಮಾಡುವುದರಿಂದ ಸಂಜೀವಕದ ಮಣಿಯ ಲಾಭದಿಂದಲೂ ಏನೂ ಪ್ರಯೋಜನವುಂಟಾಗದೆಂದೂ ನುಡಿದು ತಮ್ಮ ತಂದೆಯನ್ನು ಸಮಾಧಾನಗೊಳಿಸಿದರು. ಇತ್ತ ಅರ್ಜುನನ ಶವದ ಕಾಲುಬದಿಯಲ್ಲೇ ಕುಳಿತಿದ್ದ ಉಲೂಪಿ ಚಿತ್ರಾಂಗದೆಯರು, ಕರ್ಣಕುಂಡಲ ಸಹಿತವಾದ ಆತನ ತಲೆಯು ಅಕಸ್ಮಾತ್ತಾಗಿ ಮಾಯವಾದುದನ್ನು ಕಂಡು ಭಯಭ್ರಾಂತರಾದರು. ಅಷ್ಟರಲ್ಲಿ ಮಣಿಯನ್ನು ತೆಗೆದುಕೊಂಡು, ಇನ್ನು ಮೃತರಾದ ತಂದೆ ತಮ್ಮಂದಿರನ್ನು ಬದುಕಿಸುವೆನೆಂದು ಸಂಭ್ರಮದಿಂದ ಬಭ್ರುವಾಹನನೂ ರಣಭೂಮಿಗೆ ಬಂದನು.

ಆ ವೇಳೆಗೆ ಅತ್ತ-ಹಸ್ತಿನಾವತಿಯಲ್ಲಿ, ಅರ್ಜುನನು ರಣದಲ್ಲಿ ಬಿದ್ದ ವೇಳೆಗೆ ಸರಿಯಾಗಿ ಕುಂತೀದೇವಿಯು ಅತಿಶಯ ಭೀಕರವಾದ ಒಂದು ದುಸ್ಸ್ವಪ್ನವನ್ನು ಕಂಡಳು. ಅದರಲ್ಲಿ ಅರ್ಜುನನು, ಸರ್ವಾಂಗಕ್ಕೂ ತೈಲಲೇಪಿತನಾಗಿ, ದಾಸವಾಳದ ಹೂವಿನ ಮಾಲೆಯನ್ನು ಧರಿಸಿ, ಕತ್ತೆಯಮೇಲೆ ಕುಳಿತುಕೊಂಡು, ದಕ್ಷಿಣ ದಿಕ್ಕನ್ನು ಅನುಸರಿಸಿ ಹೋಗುತ್ತಿದ್ದಂತೆ ಕಂಡು, ಅದು ಮೃತ್ಯು ಸೂಚಕವಾದ ಕನಸೆಂದು ಕೃಷ್ಣ ಧರ್ಮಜ ಭೀಮಾದಿಗಳೊಂದಿಗೆ ಹೇಳಿಕೊಂಡು-'ಅಕ್ಕಟಾ, ನನ್ನ ಉದರದಲ್ಲಿ ಹೇಳಿಕೊಳ್ಳಲಾಗದ ಮಹಾವ್ಯಥೆಯಾಗುತ್ತದೆ. ಕೃಷ್ಣಮೂರ್ತೀ, ನಿನ್ನ ಮೈದುನನು ಜೀವಂತನಾಗಿರಲಾರನೆಂದು ನನಗೆ ಸಂದೇಹ ತೋರುತ್ತದೆ. ಅಕ್ಕಟಾ, ಹೆತ್ತೊಡಲನ್ನು ಹೇಗೆ ಹಿಡಿಯಲಿ' ಎಂದು ಅಗಾಧ ದುಃಖಭಾರದಿಂದ ರೋದಿಸಿದಳು. ಸೋದರತ್ತೆಯ ವ್ಯಸನವನ್ನು ಕಂಡು ಕೃಷ್ಣಸ್ವಾಮಿಯು ದಿವ್ಯಜ್ಞಾನದಿಂದ ನಡೆದ ಅನಾಹುತವನ್ನು ತಿಳಿದು, ಒಡನೆ ಗರುಡನನ್ನು ನೆನೆ

ದು, ತಾನೂ ಭೀಮನೂ, ಕುಂತಿ ಯಶೋದೆ ದೇವಕಿಯರೂ, ಆ ಪಕ್ಷಿರಾಜನ ಹೆಗಲನ್ನೇರಿ ಮಣಿಪುರದ ಯುದ್ಧಭೂಮಿಗಾಗಿ ಪ್ರಯಾಣಮಾಡಿದರು.

ಗರುಡನಮೇಲೇರಿ ವಾಯುವೇಗದಿಂದ ಪ್ರಯಾಣಮಾಡಿ ಬರುತ್ತಾ, ಅಂತರಿಕ್ಷದಿಂದ ಮಣಿಪುರದ ಯುದ್ಧಭೂಮಿಯನ್ನೂ ಅಲ್ಲಿ ಹತವಾಗಿ ಬಿದ್ದಿದ್ದ ಚತುರಂಗ ಬಲವನ್ನೂ, ಉರಿಯುತ್ತಿದ್ದ ಬೊಂಬಾಳ ದೀವಿಗೆಗಳನ್ನೂ, ನೆರೆದಿದ್ದ ಸ್ತ್ರೀ ಜನವನ್ನೂ, ನೆಲದಮೇಲೆ ಬಿದ್ದಿದ್ದ ಪಾರ್ಥ - ವೃಷಕೇತುಗಳ ದೇಹವನ್ನೂ ನೋಡಿ, ಶ್ರೀಕೃಷ್ಣನು ಭೀಮನಿಗೆ ಆ ಎಲ್ಲವನ್ನೂ ತೋರಿಸಿ-'ಪಾರ್ಥನ ದೇಹ ಮಾತ್ರವಿದೆ ! ತಲೆಯು ಕಾಣಿಸುತ್ತಿಲ್ಲವಲ್ಲ' ಎಂದು ಸಂದೇಹಗೊಂಡು ಎಲ್ಲರೊಂದಿಗೆ ಕೇಳಕ್ಕೊಳಿದನು. ಯಶೋದೆ ಕುಂತೀದೇವಕಿಯರು ಮೃತರಾಗಿ ಬಿದ್ದಿದ್ದ ಪಾರ್ಥಾದಿಗಳ ಬಳಿಗೆ ನಡೆದುಬಂದು ಹಾಡಿ ಹಾಡಿಕೊಂಡು ರೋದಿಸುತ್ತಿದ್ದರು. ಕುಂತೀದೇವಿಯು, ಅಕ್ಕಟಾ ವಿಧಿಯೇ, ಈ ದುರ್ಮರಣವು ನಿನಗೆ ಯಾರಿಂದ ಪ್ರಾಪ್ತವಾಯಿತು ಕಂದಾ, ಇಗೋ ನಾನು ಬಂದಿದ್ದೇನೆ, ನನ್ನೊಂದಿಗೆ ಒಂದು ಮಾತನಾಡೆಯಾ ?' ಎಂದು ಹಲುಬಿ ಹಂಬಲಿಸುತ್ತಾ ರೋದಿಸುತ್ತಿದ್ದಳು. ಶ್ರೀಕೃಷ್ಣನೂ ಸಹ ಎಲ್ಲರಂತೆಯೇ ಮಾನುಷ ಧರ್ಮದ ನಟನೆಮಾಡುತ್ತಾ, ಕಣ್ಣೀರು ಬಿಟ್ಟು-'ಅರ್ಜುನಾ ನೀನು ಹೀಗೆ ಉದಾಸೀನನಾಗಿ ಸುಮ್ಮನಿರಬಹುದೆ ? ಮಾತನಾಡು. ನೀನು ಹೀಗೆ ಇದ್ದರೆ ಇನ್ನು ಯುಧಿಷ್ಠಿರನ ಯಜ್ಞವು ಸಾಂಗವಾಗಿ ನೆರವೇರುವ ಮಾರ್ಗವಾವುದು ?' ಎಂದು ಮುಂತಾಗಿ ಹಂಬಲಿಸಿದನು.

ಅಷ್ಟರಲ್ಲಿ ಭೀಮನು, 'ಈ ವೀರರಿಬ್ಬರನ್ನೂ ಹತಗೈಸಿ ಕುದುರೆಯನ್ನು ಕಟ್ಟಿಕೊಂಡಿರುವ ವೀರನಾವನೋ ನನ್ನೊಂದಿಗೆ ಯುದ್ಧಕ್ಕೆ ಬರಲಿ' ಎಂದು ಘುಡಿಘುಡಿಸುತ್ತಾ ಗದೆಯನ್ನು ಬೀಸಿ ನೆಲಕ್ಕೆ ಅಪ್ಪಳಿಸಿದನು. ಆ ವೇಳೆಗೆ, ಬಭ್ರುವಾಹನನೊಂದಿಗೆ ನಡೆದ ಯುದ್ಧದಲ್ಲಿ ಗಾಯವಡೆದು ಮೂರ್ಛೆ ಹೋಗಿ, ಉಲೂಪಿಯಿಂದ ಚಿಕಿತ್ಸೆಗೊಳ್ಳುತ್ತಿದ್ದ ಅನಿರುದ್ಧ ಸಾತ್ಯಕಿ ಪ್ರದ್ಯುಮ್ನರು ಎಚ್ಚರಗೊಂಡು ರಣಭೂಮಿಗೆ ಬಂದು, ಶ್ರೀಕೃಷ್ಣಾದಿಗಳನ್ನು ಕಂಡು ವಂದಿಸಿ, ಭೀಮಸೇನನನ್ನು ಕಂಡು, ಮಣಿಪುರಕ್ಕೆ ಬಂದಾಗಿನಿಂದ ನಡೆದ ಕಥೆಯೆಲ್ಲವನ್ನೂ ವಿವರಿಸಿ, ಬಭ್ರುವಾಹನನ ವೃತ್ತಾಂತವನ್ನೂ ಅರ್ಜುನನ ಚರ್ಯೆಯನ್ನೂ, ತರುವಾಯ ಕುಪಿತನಾದ ಬಭ್ರುವಾಹನನು ಮಾಡಿದ ಪ್ರತಿಜ್ಞೆಯನ್ನೂ ತಿಳಿಸಿ, ಆತನನ್ನು ಭೀಮಾದಿಗಳಿಗೆ ಪರಿಚಯ

ಮಾಡಿಸಿದರು. ಪಾರ್ಥಿಯಾದರೋ, ತನ್ನ ಕಾರ್ಯಕ್ಕಾಗಿ ಬಹು ವ್ಯಸನಾ. ಕ್ರಾಂತನಾಗಿ, ಭೀಮಸೇನನ ಪಾದಕ್ಕೆರಗಿ-'ತಂದೆಯೇ,-ಪಾಪಿಯಾದ ನಾನು ಕ್ರೋಧಾಂಧನಾಗಿ ನಿನ್ನ ಅನುಜನನ್ನು ವಧಿಸಿ ಮಹಾಪರಾಧಮಾಡಿದ್ದೇನೆ. ನನ್ನನ್ನು ನಿನ್ನ ಗದೆಯಿಂದ ಅಪ್ಪಳಿಸಿ ತೀರಿಸಿಬಿಡು' ಎಂದು, ತರುವಾಯ ಶ್ರೀಕೃಷ್ಣನ ಪಾದಗಳಿಗೆ ನಮಿಸಿ-'ಪ್ರಭೋ ಭಾಗವತೋತ್ತಮನಾದ ಅರ್ಜುನನನ್ನು ಕೊಂದ ಮಹಾಪಾಪಿಯು ನಾನೇ ! ಇಂತಹ ದುರಿತಕಾರ್ಯ ಮಾಡಿದ ನಾನು ಭೂಮಿಭಾರಕನಾಗಿರಲಾರೆನು. ನಿನ್ನ ಚಕ್ರದಿಂದ ನನ್ನೀ ಕತ್ತನ್ನು ಕತ್ತರಿಸಿಬಿಡು' ಎಂದು ಬೇಡಿಕೊಂಡನು. ಅಂತೆಯೇ, ಯಶೋದೆ ದೇವಕಿಯರಿಗೂ ಕುಂತಿಗೂ ನಮಸ್ಕರಿಸಿ, ತನ್ನ ತಾಯಿಯಾದ ಚಿತ್ರಾಂಗದೆಯನ್ನೂ ಉಲೂಪಿಯನ್ನೂ ದರ್ಶನಮಾಡಿಸಿದನು. —ಕುಂತೀದೇವಿಯು ತನ್ನಮಗ - ಮೊಮ್ಮಕ್ಕಳಿಗೆ ಪ್ರಾಪ್ತವಾದ ಅಕಾಲ ಮರಣಕ್ಕಾಗಿ ಅಗಾಧ ಚಿಂತಾಕ್ರಾಂತಳಾಗಿದ್ದಳು. ಹೀಗೆ ಎಲ್ಲರೂ ದುಃಖ ಜಲಧಿಯಲ್ಲಿ ಮುಳುಗಿ ಮುಂಗಾಣದೆ ಕುಳಿತಿರಲಾಗಿ, ಅತ್ತ ಬಭ್ರುವಾಹನನ ಜೊತೆಗೆ ಪಾತಾಳ ಲೋಕದಿಂದ ಬಂದ ಶೇಷರಾಜನು, ಶ್ರೀಕೃಷ್ಣನನ್ನು ಕಂಡು ನಮಸ್ಕರಿಸಿ ಬಭ್ರುವಾಹನನ ವಶದಲ್ಲಿದ್ದ ಮಣಿಯನ್ನೂ ಸಮರ್ಪಿಸಿ,-'ಇನ್ನು ಅಜ್ಞಾತವಾಗಿರುವ ಪಾರ್ಥ ವೃಷಧ್ವಜರ ತಲೆಗಳನ್ನು ತರಿಸಿ-ಅವರನ್ನು ಸಜೀವಗೊಳಿಸಿ ಉದ್ಧರಿಸು' ಎಂದು ಬೇಡಿಕೊಂಡನು.

ಶೇಷನಾಡಿದ ಆ ಮಾತನ್ನು ಲಾಲಿಸಿ ಶ್ರೀಕೃಷ್ಣನು ದುಃಖಿಸುತ್ತಿದ್ದ ಎಲ್ಲರನ್ನೂ ಸುಮ್ಮನಾಗಿಸಿ-'ಇಗೋ ಕೇಳಿರಿ. ನಾನು ಈ ಭೂತಳದಲ್ಲಿ ಈವರೆಗೂ ನಿಷ್ಕಲ ಬ್ರಹ್ಮಚರ್ಯ ವ್ರತದಿಂದ ಇಂದ್ರಿಯ ನಿಗ್ರಹ ಮಾಡಿದ್ದುದು ನಿಶ್ಚಯವಾಗಿದ್ದ ಭಾಗದಲ್ಲಿ ಕುಂಡಲ ಸಹಿತವಾದ ಅರ್ಜುನ ವೃಷಕೇತುಗಳ ತಲೆಗಳು ಸುರಕ್ಷಿತವಾಗಿ ಇಲ್ಲಿಗೆ ತರಲ್ಪಡಲಿ' ಎಂದು ನುಡಿದನು. ಉತ್ತರಕ್ಷಣದಲ್ಲಿಯೇ, ಸುದರ್ಶನ ಚಕ್ರವು ದುರ್ಬುದ್ಧಿ ದುಸ್ವಭಾವಗಳೆಂಬ ಆ ಎರಡು ಸರ್ಪಗಳನ್ನು ಕೊಂದು ಅರ್ಜುನ-ವೃಷಕೇತುಗಳ ತಲೆಗಳೆರಡನ್ನೂ, ರಣಭೂಮಿಗೆ ತಂದಿತು. ಒಡನೆ ಶ್ರೀಕೃಷ್ಣಮೂರ್ತಿಯು ವೃಷಕೇತುವಿನ ರುಂಡವನ್ನು ಅವನ ಮುಂಡದೊಂದಿಗೂ, ಅರ್ಜುನನ ದೇಹದೊಂದಿಗೆ ಆತನ ಶಿರವನ್ನೂ ಹೊಂದಿಸಿ ಹೃದಯದೆಡೆಯಲ್ಲಿ ಆ ದಿವ್ಯರತ್ನವನ್ನಿಟ್ಟು ಕೃಪಾದೃಷ್ಟಿಯಿಂದ ಅವರುಗಳನ್ನು ಈಕ್ಷಿಸಿ,-'ಈಶನಾಜ್ಞೆಯಿಂದ ಅವರೀರ್ವರೂ ಜೀವಿಸಲಿ' ಎಂದು ಆಶೀರ್ವದಿಸಿದನು.

ಯಾವನ ಲೀಲೆಯಿಂದ ಈ ಅಖಿಲಾಂಡ ಕೋಟಿಯೂ, ಸೃಷ್ಟಿ ಸ್ಥಿತಿ ಲಯಾದಿಗಳನ್ನು ಹೊಂದುವುದೋ ಅಂತಹ ಪರಮ ಪುರುಷನು ಪ್ರತ್ಯಕ್ಷ ವಾಗಿದ್ದು ಬದುಕಿಸಬೇಕೆಂದು ಕೃಪಾದೃಷ್ಟಿಯಿಂದ ಆಶೀರ್ವದಿಸಲು ಇನ್ನು ತಡೆಯೇನು? ಅರ್ಜುನನೂ ಕರ್ಣತನಯನೂ ಮಲಗಿದವರು ಏಳು ವಂತೆ, ನೂತನ ತೇಜಸ್ವಿತೆಯಿಂದ ಕಳಕಳಿಸುತ್ತಾ ಎದ್ದು ಕುಳಿತರು. ಸಕಲ ಪರಿವಾರವೂ ಮಹೋತ್ಸವದಿಂದ ಕೋಲಾಹಲ ಧ್ವನಿಮಾಡುತ್ತಾ, ಶ್ರೀ ಕೃಷ್ಣಮೂರ್ತಿಯನ್ನು ಹಲವು ಬಗೆಯಿಂದ ಹೊಗಳಿದರು. ಅರ್ಜು ನ ಕರ್ಣಸುತರು, ಶ್ರೀಕೃಷ್ಣ ಭೀಮಸೇನರಿಗೂ, ಕುಂತೀದೇವಿ ದೇವಕಿಯ ಕೋದೆಯರಿಗೂ ನಮಸ್ಕರಿಸಿದರು. ಆದಿಶೇಷನಿಂದಾದ ಉಪಕಾರವನ್ನು ಸ್ಮರಿಸಿ ಆತನಿಗೂ ಪೊಡಮಟ್ಟರು. ಶ್ರೀ ಹರಿಯು-'ಅರ್ಜುನಾ, ಗಂಗಾ ಶಾಪದಿಂದ ನೀನು ಇಂತಹ ಪರಾಭವಕ್ಕೊಳಗಾದೆಯಲ್ಲದೆ ಬೇರಲ್ಲ. ಇನ್ನಿ ದಕ್ಕಾಗಿ 'ಚಿಂತಿಸಬೇಡ' ಎಂದು ಸಮಾಧಾನ ಹೇಳಿದನು. ಉಲೂಪಿ ಚಿತ್ರಾಂಗದೆಯರು, ಪುನರುಜ್ಜೀವಿತನಾದ ತಮ್ಮ ರಮಣನನ್ನು ಕಂಡು ಪಾದಗಳಲ್ಲಿ ನಮಸ್ಕರಿಸಿ, ತಮ್ಮ ಮಾಂಗಲ್ಯದ ಭಾಗ್ಯವು ಇನ್ನೂ ಉಂ ಟೆಂದುಕೊಂಡು, ಶ್ರೀ ಕೃಷ್ಣಸ್ವಾಮಿಯ ಸಂದರ್ಶನದಿಂದ ಪರಮಸಂತೋ ಷ ಭರಿತರಾದರು.



## ಉಪಸಂಹಾರ.

ಮಹಾ ಮೇರುವಿನಂತೆ ಬಂದು ಮೇಲೆಬಿದ್ದಿದ್ದ ಆಪದವು ಶ್ರೀ ಕೃಷ್ಣಸ್ವಾಮಿಯ ಪರಮಾನುಗ್ರಹದಿಂದ, ಸೂರ್ಯನ ತೀಕ್ಷ್ಣಕಿರಣಗಳಿಗೆ ದುರಾದ ಮಂಜಿನ ರಾಶಿಯಂತೆ ಬಯಲಾದುದನ್ನು ಕಂಡು, ಬಭ್ರುವಾಹ ನನು ಅಪರಿಮಿತಾನಂದದಿಂದ, ನಗರವನ್ನು ಸಿಂಗರಿಸಿ ಸಕಲರನ್ನೂ ರಾಜ ಧಾನಿಗೆ ಬಿಜಯ ಮಾಡಬೇಕೆಂದು ವಿನಯದಿಂದ ಬೇಡಿಕೊಂಡನು. ಶ್ರೀ ಕೃಷ್ಣನೇ ಮುಂತಾದ ಸಕಲರೂ ದಿವ್ಯ ವಾಹನಗಳನ್ನೇರಿ ನಗರವನ್ನು ಹೊಕ್ಕರು. ಎಲ್ಲಿನೋಡಿದರೂ ಮಂಗಳವಾದ್ಯಗಳು ಭೋರ್ಗರೆಯುತ್ತಿ ದ್ದವು. ಜಯಜಯಾಕಾರವು ದಿಕ್ಕುಗಳನ್ನು ಕಿವಿಡಾಗಿಸುತ್ತಿದ್ದಿತು.

ಆಗ ಶ್ರೀ ಕೃಷ್ಣನೊಂದಿಗೂ ಅಗ್ರಜನಾದ ಭೀಮಸೇನನೊಂದಿಗೂ ಸಭಾ ಭವನವನ್ನು ಹೊಕ್ಕು, ಧನಂಜಯನಿಗೆ ಬಭ್ರುವಾಹನನು ತನ್ನ ರತ್ನಸಿಂಹಾಸನವನ್ನು ಸಮರ್ಪಿಸಿ-ಅದರೊಂದಿಗೇ ತನ್ನದೆನಿಸುವ ಅಖಿಳ ರಾಜ್ಯವನ್ನೂ, ಸಮಸ್ತೈಶ್ವರ್ಯವನ್ನೂ ಒಪ್ಪಿಸಿಕೊಟ್ಟು-ಲಜ್ಜಾಸಮನ್ವಿತನಾಗಿ ಸುಮ್ಮನೆ ನಿಂತುಕೊಂಡನು.

ಆದರೆ ಅರ್ಜುನನು ಮಾತ್ರ ಆತನ ಕಡೆಗೆ ನೋಡದೆ, ಮಾತನ್ನೂ ಆಡಿಸದೆ ಖಿನ್ನನಾಗಿ ಸುಮ್ಮನೆ ಕುಳಿತಿದ್ದನು. ಅದನ್ನು ಕಂಡ, ಭೀಮಸೇನ ಹಂಸಧ್ವಜಾದಿಗಳ,-'ಅರ್ಜುನಾ, ಇದೇಕೆ ಹೀಗೆ ಖಿನ್ನನಾಗಿರುವೆ ? ಜಗತ್ತಿನಲ್ಲಿ ಎಲ್ಲೆಲ್ಲಿಯೂ ಅಜೇಯನೆನ್ನಿಸಿಕೊಂಡು ಮೆರೆಯುತ್ತಿದ್ದ ನಿನಗೆ ಇಲ್ಲಿ ಗಂಗಾಶಾಪ ವಶವಾಗಿ ಮಗನಿಂದಲೇ ಅಪಜಯ ಪ್ರಾಪ್ತವಾಯಿತು. ಇದಕ್ಕಾಗಿ ಶೋಕಿಸುವೆಯೇಕೆ ? ಪತ್ನಿಯರಾದ ಈ ಉಲೂಪಿ ಚಿತ್ರಾಂಗದೆಯರನ್ನು ಸ್ವೀಕರಿಸು. ವೀರಾಧಿ ವೀರನಾದ ಪುತ್ರ ಬಭ್ರುವಾಹನನನ್ನು ಮನ್ನಿಸಿ ಆತನ ರಾಜ್ಯೈಶ್ವರ್ಯಾದಿಗಳನ್ನು ಧರ್ಮಜನಿಗಾಗಿ ಕೈಕೊಂಡು ಸಂತಯಿಸು' ಎಂದು ಪಲವು ಬಗೆಯಿಂದ ತಿಳಿಯ ಹೇಳಿದರು. ಮಾತ್ರವಲ್ಲ, ಫಣಿರಾಜನೂ ಭೀಮನೂ, ಯಶೋದೆ ದೇವಕಿ ಕುಂತೀದೇವಿಯರೂ, ಹಂಸಧ್ವಜಾದಿರಾಜರೂ ಬಹುಬಗೆಯಿಂದ ಹೇಳಿದ್ದಾಯಿತು. ಅಷ್ಟಾದರೂ ಅರ್ಜುನನು ತನ್ನ ಖಿನ್ನತೆಯನ್ನು ತ್ಯಜಿಸಿ ಪ್ರಸನ್ನನಾಗದಿರಲು, ಬಭ್ರುವಾಹನನು ಬಹು ಲಜ್ಜಾನ್ವಿತನಾಗಿ ಸಮಸ್ತರಿಗೂ ನಮಸ್ಕರಿಸಿ-'ನಾನು ಮಾಡಿದಕಾರ್ಯವು ಅಸಾಧುವೆಂಬ ವಿಷಯದಲ್ಲಿ ಸಂದೇಹವಿಲ್ಲ. ಭಕ್ತಾಗ್ರೇಸರನಾದ ಈತನನ್ನು ವಧಿಸಿದ ನನ್ನ ಪಾಪಕರ್ಮದ ವಿಮೋಚನೆಗಾಗಿ, ಇಗೋ ಇಂದು ರಾಜ್ಯಾದಿ ಸಕಲೈಶ್ವರ್ಯಗಳನ್ನೂ ನನ್ನೀ ಜನಕನ ಈ ಪಾದಕಮಲಗಳಿಗರ್ಪಿಸಿ, ಹಿಮಾಲಯ ಪ್ರಾಂತಕ್ಕೆ ಹೊರಟು ನಡೆದು ಅಲ್ಲಿ ಈ ಪಾಪಿದೇಹವನ್ನು ನೀಗುವೆನು, ಎಂದು ತನ್ನ ನಿಶ್ಚಯವನ್ನು ನುಡಿದನು. ಅದನ್ನು ಕೇಳಿದ ಭೀಮಸೇನನು-'ಮಗೂ ಬಭ್ರುವಾಹನ ಅಂತಹ ತಪ್ಪುಮಾತನ್ನಾಡಬೇಡ. ಶ್ರೀ ಕೃಷ್ಣಸ್ವಾಮಿಯು ಎದುರಿಗಿರುವಾಗ ಇನ್ನು ಪಾಪಗಳೆಂದರೇನು ! ನಾವು ಗುರು, ಪಿತಾಮಹ ಮುಖ್ಯರಾದ ಬಂಧುಗಳನ್ನೆಲ್ಲ ಕೊಂದು ಜೀವಿಸಿಲ್ಲವೆ. ಸೂರ್ಯನ ಬಳಿ ಕತ್ತಲೆಗೆ ಪ್ರವೇಶವುಂಟೆ ? ಶ್ರೀಕೃಷ್ಣ ಸಾನ್ನಿಧ್ಯದಲ್ಲಿ ಪಾಪವೆಂದ್ಧರೇನು ? ವ್ಯಥೆಪಡಬೇಡ' ಎಂದು ಸಂತೈಸಿದನು. ಸಕಲರೂ ಪರಮಾನಂದಗೊಂಡರು.

ಅರ್ಜುನನು ಮಗನನ್ನು ಬಳಿಗೆ ಕರೆದು ಸಂತೈಸಿದನು. ಸಿಂಹಪೀಠದಲ್ಲಿ ಶ್ರೀ ಕೃಷ್ಣನೂ ಪವನಜ ಪಾರ್ಥರೂ ಕುಳಿತರು. ಪಾರ್ಥಜ ಕರ್ಣಸುತರು ಅವರ ಪಾದಗಳ ಬಳಿಯಲ್ಲಿ ಕುಳಿತರು. ನೆರೆದ ಸಕಲ ಪರಿವಾರವೂ ಆ ದಿವ್ಯ ದೃಶ್ಯವನ್ನು ನೋಡಿ ಮಹೋತ್ಸಾಹದಿಂದ ಜಯಜಯಕಾರ ಮಾಡಿದರು.

ತರುವಾಯ ಸತ್ಯಭಾಮಾಕಾಂತನೂ, ಭೀಮಾರ್ಜುನರೂ, ಪ್ರದ್ಯುಮ್ನ ಅನಿರುದ್ಧಾದಿವೀರರೂ, ವೃಷಕೇತು ಹಂಸಧ್ವಜಾದಿಗಳೂ ಕುಂತೀದೇವಿಯು ಯಶೋದೆ ದೇವಕಿಯರೂ ಆ ರಾಜಧಾನಿಯಲ್ಲಿ, ಉಲೂಪಿ ಚಿತ್ರಾಂಗದೆ ಬಭ್ರುವಾಹನರ ಸಕಲವಿಧ ಆದರಾತಿಥ್ಯಗಳನ್ನೂ ಸ್ವೀಕರಿಸುತ್ತಾ, ಐದುದಿನಗಳವರೆಗೆ ಸುಖಸಂತೋಷಗಳಿಂದ ಕಾಲ ಕಳೆದರು. ಐದುದಿನಗಳು ಹಾಗೆ ಕಳೆದ ತರುವಾಯ, ಹಸ್ತಿನಾವತಿಯಲ್ಲಿ ಧರ್ಮಜನು ಚಿಂತೆಗೊಂಡಿರುವನೆಂದು ಯೋಚಿಸಿ, ಸಕಲ ವಿಧ ಉತ್ತಮ ವಸ್ತುಗಳನ್ನೂ ಸಂಗ್ರಹಿಸಿ ಕುಂತಿ ಯಶೋದೆ ದೇವಕಿಯರೂ, ಉಲೂಪಿ ಚಿತ್ರಾಂಗದೆಯರೂ ಭೀಮನೊಂದಿಗೆ ಪ್ರಯಾಣಮಾಡಿದರು. ಶ್ರೀಕೃಷ್ಣಸ್ವಾಮಿಯು ಪಾರ್ಥ, ಪಾರ್ಥಿ, ಪಾರ್ಥಿವೇಂದ್ರರೊಂದಿಗೆ ಜೆರೆದು ಯಜ್ಞಾಶ್ವವನ್ನು ಮುಂದೆ ಬಿಟ್ಟುಕೊಂಡು, ಅದರ ರಕ್ಷಣೆಗೆಂದು ತಾನೇ ಸೈನ್ಯಸಮೇತನಾಗಿ ಪ್ರಯಾಣಮಾಡಿದನು.

ಪ್ರಸಂಗವಶದಿಂದ ಈ ಕಥೆಯಲ್ಲಿ ಅಲ್ಲಲ್ಲೆ ಬಂದ ಸಂಜೀವಕದಮಣಿ, ಫಣಿಪತಿ, ಶ್ರೀಕೃಷ್ಣ, ಧನಂಜಯ ಇವರ ಪುಣ್ಯ ಕಥಾಶ್ರವಣದಿಂದ ಅಪಮೃತ್ಯು, ವಿಷಭಯ, ಶತ್ರುಪೀಡೆ, ದುಷ್ಕೃತಿದೋಷ ಮುಂತಾದುವುಗಳು ನಾಶವಾಗಿ ಹರಿಭಕ್ತಿಯು ದಿನದಿನಕ್ಕೆ ವರ್ಧಿಸುವುದು ಎಂದು ಸಕಲ ಸುಜನರೂ, ಈ ಸತ್ಕಥೆಯನ್ನು ಪಠಿಸಿ ಆನಂದಿಸಬೇಕು.

ತನ್ನ ಜನ್ಮಸ್ಥಳಕ್ಕೆ ಪ್ರಾಪ್ತವಾದ ಅಪಮಾನವನ್ನು ನಿವಾರಿಸುವುದಕ್ಕಾಗಿ ನಮ್ಮ ಕಥಾನಾಯಕನು ಅಗಾಧ ದೀಕ್ಷೆಯನ್ನು ವಹಿಸಿ, ಏಕಾಂಗಿಯಾಗಿ ಅಗಣಿತ ಸೇನೆಯನ್ನು ಎದುರಿಸಿ ಯುದ್ಧಮಾಡಿ ಜಯಸಂಪಾದನೆ ಮಾಡಿದನಾದರೂ, ಪಿತೃಭಕ್ತನಾಗಿ ತನ್ನ ಸರ್ವಸ್ವವನ್ನೂ ಪಿತೃಪಾದಗಳಲ್ಲಿ ಸಮರ್ಪಿಸಿ ಧನ್ಯನೆನ್ನಿಸಿಕೊಂಡನು. ಇಂತಹ ಧೈರ್ಯ ಶೌರ್ಯ ಪರಾಕ್ರಮಗಳೂ, ಸ್ವಾಭಿಮಾನ ಸ್ವಾತಂತ್ರ್ಯಾಪೇಕ್ಷೆಗಳೂ, ಈ ಧೀರೋತ್ತಮನ ಚರಿತ್ರೆಯನ್ನು ಪಠಿಸುವ ಕರ್ಣಾಟಕ ಬಾಲಕ ಬಾಲಿಕೆಯರಿಗೂ ಶ್ರೀಪಸಾಜ್ಞೆಯಿಂದ ಲಭ್ಯವಾಗಲಿ. ತಥಾಸ್ತು.